# ವೃತ್ತಿ ರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ

ಸಂಶೋಧಕರು

**ಶ್ರೀಮತಿ ದೇವಕನ್ನಿಕಾ ಡಿ. ನಗರಕರ**

ಎಂ.ಎ.

ಕನ್ನಡ ಪ್ರಾಧ್ಯಾಪಕರು
ಶಿವಾನಂದ ಮಹಾವಿದ್ಯಾಲಯ,
ಕಾಗವಾಡ

ಮಾರ್ಗದರ್ಶಕರು

**ಡಾ. ಕೆ. ರಾಘವೇಂದ್ರರಾವ್**

ಎಂ.ಎ., ಪಿಎಚ್.ಡಿ. (ಟೋರೆಂಟೊ)

ಕಲ್ಯಾಣನಗರ, ಧಾರವಾಡ

ಕೇಂದ್ರ
ಬೇಂದ್ರೇಟ್ರಸ್ಟ ಸಾಧನಕೇರಿ
ಧಾರವಾಡ



**ಕನ್ನಡ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಾದರಪಡಿಸಿದ
ಸಂಶೋಧನಾ ಮಹಾಪ್ರಬಂಧ**

**2011**

# ವೃತ್ತಿ ರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ


ಸಂಶೋಧಕರು

**ಶ್ರೀಮತಿ ದೇವಕನ್ನಿಕಾ ಡಿ. ನಗರಕರ**

ಎಂ.ಎ.

ಕನ್ನಡ ಪ್ರಾಧ್ಯಾಪಕರು
ಶಿವಾನಂದ ಮಹಾವಿದ್ಯಾಲಯ,
ಕಾಗವಾಡ

ಮಾರ್ಗದರ್ಶಕರು

**ಡಾ. ಕೆ. ರಾಘವೇಂದ್ರರಾವ್**

ಎಂ.ಎ., ಪಿಎಚ್.ಡಿ. (ಟೋರೆಂಟೊ)

ಕಲ್ಯಾಣನಗರ, ಧಾರವಾಡ

ಕೇಂದ್ರ
ಬೇಂದ್ರೇಟ್ರಸ್ಟ ಸಾಧನಕೇರಿ
ಧಾರವಾಡ


**ಕನ್ನಡ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ**
**ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಾದರಪಡಿಸಿದ**
**ಸಂಶೋಧನಾ ಮಹಾಪ್ರಬಂಧ**

**2011**

ಅಧ್ಯಯನಾಂಗ

# ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಘೋಷಣಾ ಪತ್ರ

"ವೃತ್ತಿ ರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪಿಎಚ್.ಡಿ. ಪದವಿಗಾಗಿ **ಡಾ. ಕೆ. ರಾಘವೇಂದ್ರರಾವ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಈ ಮಹಾಪ್ರಬಂಧವಾಗಲಿ ಇಲ್ಲವೆ ಇದರಲ್ಲಿನ ಯಾವುದೇ ಭಾಗವಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಧಾರವಾಡ
ದಿನಾಂಕ :

**ಶ್ರೀಮತಿ. ದೇವಕನ್ನಿಕಾ ಡಿ. ನಗರಕರ**
ಎಂ.ಎ.
ಕನ್ನಡ ಪ್ರಾಧ್ಯಾಪಕರು
ಶಿವಾನಂದ ಮಹಾವಿದ್ಯಾಲಯ,
ಕಾಗವಾಡ

ಅಧ್ಯಯನಾಂಗ

# ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪ್ರಮಾಣ ಪತ್ರ

ಶ್ರೀಮತಿ. ದೇವಕನ್ನಿಕಾ ಡಿ. ನಗರಕರ ಅವರು ಪಿಎಚ್.ಡಿ. ಪದವಿಗಾಗಿ ಬರೆದು ಸಾದರಪಡಿಸಿದ, **"ವೃತ್ತಿ ರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ"** ಎಂಬ ಮಹಾಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಬರೆದು ಸಿದ್ಧಪಡಿಸಲ್ಪಟ್ಟ ಒಂದು ಮೂಲ ಸಂಶೋಧನ ಪ್ರಬಂಧವಾಗಿದೆ.

ಈ ಮಹಾಪ್ರಬಂಧವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ದೃಢೀಕರಿಸಿ ಈ ಪ್ರಮಾಣ ಪತ್ರ ನೀಡುತ್ತಿದ್ದೇನೆ.

ಸ್ಥಳ : ಧಾರವಾಡ
ದಿನಾಂಕ :

**ಡಾ. ಕೆ. ರಾಘವೇಂದ್ರರಾವ್**
ಎಂ.ಎ., ಪಿಎಚ್.ಡಿ.(ಟೋರೆಂಟೊ)
ಕಲ್ಯಾಣನಗರ, ಧಾರವಾಡ

# ಮನದ ಮಾತು

ಈಗಾಗಲೇ ವೃತ್ತಿರಂಗಭೂಮಿ ಹಾಗೂ ವೃತ್ತಿರಂಗಭೂಮಿ ಮಹಿಳೆಯರ ಕುರಿತು ಕೆಲವು ಸಂಶೋಧನ ಗ್ರಂಥಗಳು ಹೊರಬಂದಿವೆ. ಇದೊಂದು ಉಪೇಕ್ಷಿತ ಕ್ಷೇತ್ರ, ಹಾಗಾಗಿ ನಿರ್ಲಕ್ಷಕ್ಕೆ ಒಳಗಾದ ಕ್ಷೇತ್ರದ ಕುರಿತು ಅಧ್ಯಯನ ಕೈಕೊಂಡರೆ ತಪ್ಪೇನಿಲ್ಲ ಎಂಬ ಕಾರಣದಿಂದ, ಅಲ್ಲದೆ ನನಗಿಷ್ಟವಾದ ಕ್ಷೇತ್ರ ಅದಾಗಿದ್ದರಿಂದ ನನ್ನ ಸಂಶೋಧನೆಗೆ ಆ ವಿಷಯವನ್ನೇ ನಾನು ಆಯ್ಕೆ ಮಾಡಿಕೊಂಡೆ.

ನನ್ನ ತಂದೆಯವರಿಗೆ ನಾಟಕದ ಹುಚ್ಚು. ಅವರು ಕೆಲಸ ಮಾಡುತ್ತಿದ್ದ ಊರುಗಳಲ್ಲಿ ನಾಟಕ ಕಂಪನಿಗಳು ಬಂದರೆ ಪ್ರತಿಹೊಸ ನಾಟಕಕ್ಕೂ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ಹೀಗಾಗಿ ಬಾಲ್ಯದಿಂದಲೂ ನನಗೆ ನಾಟಕಗಳ ಆಕರ್ಷಣೆ ಹೆಚ್ಚು. ಈ ಆಕರ್ಷಣೆಯೇ ರಂಗಭೂಮಿಯ ಬಗ್ಗೆ ಹೆಚ್ಚು ಯೋಚಿಸುವಂತೆ ಮಾಡುತ್ತಿತ್ತು. ನಾನು ಕೆಲಸಕ್ಕೆ ಸೇರಿದ ಹೊಸತರಲ್ಲಿ ಕಾಗವಾಡಕ್ಕೆ ವೃತ್ತಿ ಮಂಡಳಿಯೊಂದು ಬಂದಿತ್ತು. ಥೇಟರ ಮನೆಗೆ ಹತ್ತಿರವಿತ್ತು. ಕಲಾವಿದೆಯರೂ ಕೂಡಾ ಮನೆಗೆ ಹತ್ತಿರದಲ್ಲೇ ಇದ್ದರು. ಹೀಗಾಗಿ ಅವರ ಬದುಕನ್ನು ಹತ್ತಿರದಿಂದ ನೋಡಿದೆ. ಅವರ ಬದುಕಿನ ರೀತಿ ನೋಡಿ ನಿಜಕ್ಕೂ ಖೇದವೆನಿಸುತ್ತಿತ್ತು. ಅನ್ಯರ ನೋವನ್ನು ಮರೆಸಿ ನಕ್ಕುನಗಿಸುವ ಈ ಜನಗಳ ಬದುಕು ತೀರ ದುಸ್ತರವಾಗಿತ್ತು. ಅದ್ಭುತ ಪ್ರತಿಭಾವಂತರ ಬದುಕು ಹೀಗೇಕೆ? ಎಂಬ ಪ್ರಶ್ನೆ ನನ್ನನ್ನು ಸದಾ ಕಾಡುತ್ತಿತ್ತು. ಈ ಕಾರಣಕ್ಕಾಗಿಯೇ ನಾನು ಈ ವಿಷಯವನ್ನು ಆಯ್ದುಕೊಂಡೆ. ಉತ್ತರ ಕರ್ನಾಟಕದ ಕೆಲವು ಜಿಲ್ಲೆ, ತಾಲ್ಲೂಕು, ಹಳ್ಳಿಗಳನ್ನು ಸುತ್ತಿ ಅವರ ಬದುಕಿನ ವಿವರಗಳನ್ನು ಕಣ್ಣಾರೆ ಕಂಡೆ. ಅವರ ಸಮಸ್ಯೆಗಳೇನು? ಅವಕ್ಕೆ ಪರಿಹಾರಗಳೇನು? ಯಾರು ಎಷ್ಟು ಸಮರ್ಥರು? ಯಾವದರಲ್ಲಿ? ಯಾಕೆ? ಎಂಬೆಲ್ಲ ಪ್ರಶ್ನೆಗಳನ್ನಿಟ್ಟುಕೊಂಡು ಉತ್ತರಗಳನ್ನು ಹುಡುಕುತ್ತ ಹೋದೆ.

ಬಣ್ಣದ, ಬೆಳಕಿನಲ್ಲಿ ಅವರನ್ನು ನೋಡಿದ ನಮಗೆ ನಿಜ ಜೀವನದಲ್ಲಿಯೂ ಅವರು ಹೀಗೆ ಇರಬಹುದೆಂಬ ಭ್ರಮೆಯಲ್ಲಿ ನಾವಿರುತ್ತೇವೆ. ಕಲೆ, ಸಾಹಿತ್ಯ, ಸಂಗೀತದ ತವರು ನಮ್ಮ ನಾಡು ಎಂದು ಹೆಮ್ಮೆಯಿಂದ ಬೀಗುತ್ತೇವೆ. ಆದರೆ ನಿಜವಾಗಿಯೂ ಆ ಕಲಾವಿದೆಯರನ್ನು ಕಂಡಾಗ ಮೂಗುಮುರಿಯುತ್ತೇವೆ. ಕಲಾವಿದರು ಬದುಕಿದರೆ, ಕಲೆ ಬದುಕುತ್ತದೆ ಎಂಬ ಸತ್ಯ ಬಹಳಷ್ಟು ಜನರಿಗೆ ಗೊತ್ತಿಲ್ಲ.

ನಾನು ಮಹಿಳೆ, ಮೇಲಾಗಿ ಉತ್ತರ ಕರ್ನಾಟಕದವಳು. ಹಾಗಾಗಿ ಉತ್ತರ ಕರ್ನಾಟಕದ ಹಿರಿಯ ಕಲಾವಿದೆಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಅಧ್ಯಯನವನ್ನು ಕೈಕೊಂಡೆ. ಕಣ್ತಪ್ಪಿನಿಂದ, ಸಮಯದ ಕೊರತೆಯಿಂದ, ಕೆಲವು ಕಲಾವಿದೆಯರು ಉಳಿದಿರಲಿಕ್ಕೂ ಬೇಕು. ಏನಾದರೂ ವಿಶೇಷತೆ ಇರುವಂತ ಕೆಲವು ಕಲಾವಿದೆಯರ ಮೇಲೆ ಬೆಳಕು ಚೆಲ್ಲುವ ಒಂದು ಸಣ್ಣ ಪ್ರಯತ್ನ ನನ್ನದು.

ಹಿರಿಯರೂ, ಸಾಹಿತ್ಯ ಕ್ಷೇತ್ರದ ಅಪಾರ ಅನುಭವಿಗಳೂ ಆದ ಡಾ. ಕೆ. ರಾಘವೇಂದ್ರರಾವ್ ಅವರು ನನ್ನ ಮಾರ್ಗದರ್ಶಕರಾಗಿ ದೊರೆತದ್ದು ನನಗಂತೂ ಹೆಮ್ಮೆಯ ವಿಷಯ. ಪ್ರೀತಿ ಮತ್ತು ಪ್ರೋತ್ಸಾಹ ಪೂರ್ವಕ ಅವರ ಮಾರ್ಗದರ್ಶನಕ್ಕೆ ತುಂಬು ಹೃದಯದ ಕೃತಜ್ಞತೆಗಳು ಸಾಲದೇನೋ ಎನ್ನಿಸುತ್ತದೆ.

ಹೀಗೆ ನಾನು ಸಂಶೋಧನೆ ಕೈಕೊಂಡಾಗ ಹಾರೈಸಿದ (ಶುಭ ಕೋರಿದ) ಮನಸ್ಸುಗಳನ್ನು ನೆನೆಯಲೇಬೇಕು. ನನ್ನ ವಿದ್ಯಾಗುರುಗಳಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಶ್ಯಾಮಸುಂದರ ಬಿದರಕುಂದ್ರಿ, ಹಾಗೂ ಡಾ. ಬಾಳಣ್ಣ ಶೀಗಿಹಳ್ಳಿ ಡಾ, ಬಾಳಾಸಾಹೇಬ ಲೋಕಾಪೂರ, ಡಾ. ಕೆ. ಆರ್. ದುರ್ಗಾದಾಸ್, ಡಾ. ಹೇಮಾ ಪಟ್ಟಣಶೆಟ್ಟಿ, ಡಾ, ಸಿದ್ಧನಗೌಡ ಪಾಟೀಲ, ಗುಡಿಹಳ್ಳಿ ನಾಗರಾಜ, ಜಗದೀಶ ಹಿರೇಮಠ (ಜಗ್ಗು ಜಾದೂಗಾರ) ಡಾ. ವೈ. ಬಿ. ಹಿಮ್ಮಡಿ, ಡಾ. ಅಶೋಕ ನರೋಡೆ, ಡಾ. ವೀಣಾ ಹೂಗಾರ ಇವರೆಲ್ಲರಿಗೂ ನಾನು ಕೃತಜ್ಞತೆ ಸಲ್ಲಿಸಲೇಬೇಕು.

ಇನ್ನು ಅದೆಷ್ಟೋ ನಟಿಯರ ವಿಳಾಸಗಳನ್ನು ಫೋನ ನಂಬರುಗಳನ್ನು ಕೊಟ್ಟು ಕ್ಷೇತ್ರಕಾರ್ಯಕ್ಕೆ ಅನುವು ಮಾಡಿಕೊಟ್ಟ ಸಹೋದರಿ ಪ್ರೇಮಾ ಬದಾಮಿ, ಸಹೋದರ ಬಸಣ್ಣಾ ಕಿರೇಸೂರ, ಮಹೇಶಬಾಗಿ, ಜಯಣ್ಣ ಗೋಕಾಕ, ಶ್ರೀಕಾಂತ ಬೋಚಗೇರಿ ಹಾಗೂ ಪ್ರಕಾಶ ಬಾಳೀಕಾಯಿ ಅವರನ್ನು ಸ್ಮರಿಸಲೇಬೇಕು.

ಡಿ. ಟಿ. ಪಿ. ಕೆಲಸದಲ್ಲಿ ಹಾಗೂ ಕೆಲವೊಂದು ಪುಸ್ತಕಗಳನ್ನು ಒದಗಿಸಿಕೊಡುವಲ್ಲಿ ನೆರವಾದ ಮಗಳು ಪ್ರೀತಿ ಹೊಸಮನಿ, ಮಗ ವಿನೋದ ವಿವೇಕಿ, ವಿದ್ಯಾರ್ಥಿ ಆನಂದ ಒಂಟಗೊಡೆ ಇವರಿಗೂ ನಾನು ಋಣಿಯಾಗಿದ್ದೇನೆ.

ಬೆನ್ನು ತಟ್ಟಿ ಪ್ರೋತ್ಸಾಹಿಸಿದ ಅಕ್ಕ, ಮಾವ, ನನ್ನ ತಾಯಿ ಹಾಗೂ ನಮ್ಮ ಮಹಾವಿದ್ಯಾಲಯದ ಆಡಳಿತ ಮಂಡಳಿಯವರನ್ನು ಎಲ್ಲ ಸಹೋದ್ಯೋಗಿ ಬಂಧುಗಳನ್ನು ಹೇಗೆ ಮರೆಯಲು ಸಾಧ್ಯ?

ಇನ್ನೂ ನನ್ನ ಅಧ್ಯಯನಕ್ಕೆ ನೆರಳಾಗಿ ನಿಂತ ಮಗ ಅಜೀತನನ್ನು, ಸದಾ ಓದುವಂತೆ, ಬರೆಯುವಂತೆ ಪೀಡಿಸುವ ಬಾಳಸಂಗಾತಿ ಶಾಂತು, ಇವರ ತಾಳ್ಮೆ ಸಹಕಾರಕ್ಕೆ ಕೃತಜ್ಞತೆ ಹೇಳಿದರೆ ಬಾಲಿಶತನವಾದೀತು.

**ಶ್ರೀಮತಿ ದೇವಕನ್ನಿಕಾ ಡಿ. ನಗರಕರ**
ಎಂ.ಎ.

ಸ್ಥಳ : ಕಾಗವಾಡ
ದಿನಾಂಕ :

# ಪರಿವಿಡಿ


| | | |
|---|---|---|
| ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ | | 1–7 |
| ಅಧ್ಯಾಯ–1 | | |
| | ರಂಗಭೂಮಿಯ ಉಗಮ ಮತ್ತು ವಿಕಾಸ | 8–19 |
| | 1. ರಂಗಭೂಮಿ ಪ್ರಾರಂಭಿಕ ಹಂತ | 8–12 |
| | 2. ಜನಪದರಲ್ಲಿ ಅರಳಿದ ರಂಗಭೂಮಿ | 12–16 |
| | 3. ಭಾರತದಲ್ಲಿ ರಂಗಭೂಮಿ | 17–19 |
| ಅಧ್ಯಾಯ–2 | | |
| | ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಚರಿತ್ರೆ | 20–74 |
| | 1. ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿಯ ಹುಟ್ಟು ಮತ್ತು ಬೆಳವಣಿಗೆ | 20–24 |
| | 2. ಉತ್ತರ ಕರ್ನಾಟಕದಲ್ಲಿ ಹವ್ಯಾಸಿ ಮತ್ತು ವೃತ್ತಿರಂಗಭೂಮಿ | 24–28 |
| | 3. ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿಯ ಹೆಜ್ಜೆಗುರುತುಗಳು | 28–74 |
| ಅಧ್ಯಾಯ–3 | | |
| | ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಪ್ರವೇಶ ಹಾಗೂ ಪ್ರಾಧಾನ್ಯತೆ | 75–95 |
| | 1. ವೃತ್ತಿರಂಗಭೂಮಿಗೆ ಮಹಿಳೆಯರ ಪ್ರವೇಶ | 75–80 |
| | 2. ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಸ್ಥಿತಿಗತಿ | 81–87 |
| | 3. ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನ | 87–95 |

| ಅಧ್ಯಾಯ–4 | | |
|---|---|---|
| | **ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರು ಹಾಗೂ ಅವರ ಕೊಡುಗೆ** | **96–240** |
| | 1. ಹೆಚ್ಚು ಮಹಿಳೆಯರನ್ನು ನೀಡಿದ ಗ್ರಾಮಗಳು | 96–114 |
| | 2. ಮುಸ್ಲಿಂ ಮಹಿಳೆಯರು | 115–129 |
| | 3. ಕಂಪನಿ ಒಡತಿಯರಾಗಿ | 130–154 |
| | 4. ರಂಗ ಅಭಿನೇತ್ರಿಯರಾಗಿ | 155–202 |
| | 5. ಇಡೀ ಕುಟುಂಬವನ್ನೇ ತೊಡಗಿಸಿಕೊಂಡವರು | 203–213 |
| | 6. ತೆರೆಮರೆಯ ಪ್ರತಿಭೆಗಳು | 214–222 |
| | 7. ವಿಶೇಷ ಪಾತ್ರಕ್ಕೆ ಹೆಸರಾದವರು | 223–225 |
| | 8. ಸಂಗೀತಗಾರ್ತಿಯರಾಗಿ ಮಿಂಚಿದವರು | 226–233 |
| | ವೃತ್ತಿರಂಗಭೂಮಿಗೆ ಉತ್ತರ ಕರ್ನಾಟಕ ಮಹಿಳೆಯರ ಕೊಡುಗೆಗಳು | 234–241 |
| ಅಧ್ಯಾಯ–5 | | |
| | **ಸಮಾರೋಪ** | **242–247** |
| | **ಅನುಬಂಧ** | |
| | 1. ಭಾವಚಿತ್ರಗಳು | **248–259** |
| | 2. ಸಂದರ್ಶಿಸಿದ ಕಲಾವಿದೆಯರು ಮತ್ತು ಸಂಪನ್ಮೂಲ ವ್ಯಕ್ತಿಗಳು | **260–265** |
| | **ಗ್ರಂಥಸೂಚಿ** | **266–271** |

# ಅಧ್ಯಯನದ ಉದ್ದೇಶ,
# ಸ್ವರೂಪ ಮತ್ತು ವ್ಯಾಪ್ತಿ

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

**ಅಧ್ಯಯನದ ಉದ್ದೇಶ :**

ಮಹಿಳೆಯರನ್ನು ಕುರಿತು ಇವತ್ತು ಕೇವಲ ಪ್ರಾದೇಶಿಕವಾಗಿ, ಭೌಗೋಳಿಕವಾಗಿ ಅಧ್ಯಯನ ನಡೆದರೆ ಸಾಲದು. ಜಾಗತಿಕವಾಗಿಯೂ ಮಹಿಳಾ ಅಧ್ಯಯನದ ಜರೂರಿ ಇದೆ.

ಮಹಿಳಾ ಸಮಸ್ಯೆಯ ಮೂಲ ನೆಲೆಯನ್ನು ಹುಡುಕುವಲ್ಲಿ ಹಲವು ವಾದಗಳು ಪ್ರಯತ್ನಿಸಿದರೂ ಮಹಿಳೆ ಆಳುವ ಮತ್ತು ತುಳಿಯುವ ಪ್ರವೃತ್ತಿಯಿಂದ ಮುಕ್ತಳಾಗಿಲ್ಲ. ಪುರುಷಕೇಂದ್ರಿತ ಈ ವ್ಯವಸ್ಥೆಯಲ್ಲಿ ಪುರುಷನಿಗೆ ಸಮಾನವಾಗಿ ಎಲ್ಲ ಕ್ಷೇತ್ರದಲ್ಲಿಯೂ ಮಹಿಳೆ ಹೆಗಲು ಕೊಟ್ಟಾಗಿದೆ. ಆದಗ್ಯೂ ಅವಳನ್ನು ಮಕ್ಕಳನ್ನು ಹೆರುವ ಯಂತ್ರಕ್ಕೆ ಹೋಲಿಸಿರುವುದು ದುರುದೃಷಕರ. ಅದೊಂದು ನಿಸರ್ಗ ಸಹಜಕ್ರಿಯೆ ಎಂದು ಬಾವಿಸುವುದೇ ಇಲ್ಲ.

ಪುರುಷ ಶೃಂಖಲೆ, ಸಾಮಾಜಿಕ ಒತ್ತಡಗಳಿಂದ ಮಹಿಳೆ ಮುಕ್ತಳಾಗಬೇಕಾದರೆ ಸಾಹಿತ್ಯಿಕ, ಸಾಂಸ್ಕೃತಿಕ ನೆಲೆಯಲ್ಲಿ ತನ್ನನ್ನು ತಾನು ಗುರುತಿಸಿಕೊಳುವುದರ ಜೊತೆಗೆ ಉತ್ಪಾದನಾ ಅಂಗಗಳಲ್ಲಿಯೂ ತನ್ನನ್ನು ತಾನು ತೊಡಗಿಸಿಕೊಳ್ಳಬೇಕು. ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ ಐವತ್ತರಷ್ಟು ಮಹಿಳೆಯರಿದ್ದರೂ ಬಹುಪಾಲು ಪ್ರದೇಶಗಳಲ್ಲಿ ಅವಳನ್ನು ಗುಲಾಮಳಂತೆ ನಡೆಸಿಕೊಳ್ಳಲಾಗಿದೆ. ದೈಹಿಕ ಸಾಮರ್ಥ್ಯ ಬುದ್ಧಿಮತ್ತೆ, ಚಿಂತನಶೀಲತೆಯಲ್ಲಿ ಪುರುಷನಿಗಿಂತ ಮಹಿಳೆ ಏನೇನೂ ಕಡಿಮೆಯಿಲ್ಲ. ಆದಾಗ್ಯೂ ಅವಳನ್ನು ಪುರುಷನ ನಂತರದ ಸ್ಥಾನದಲ್ಲಿನೇ ಇಟ್ಟಿದ್ದಾರೆ. ಈ ನಿಟ್ಟಿನಲ್ಲಿ ಇನ್ನು ಹೆಚ್ಚು ಹೆಚ್ಚು ಅಧ್ಯಯನದ ಅವಶ್ಯಕತೆ ಇದೆ.

ಒಂದು ಸಮಾಜವಾಗಲಿ, ದೇಶವಾಗಲಿ, ಪ್ರಗತಿ ಸಾಧಿಸಬೇಕಾದರೆ ಮಹಿಳೆಯರ ಪಾತ್ರ ಸಾಕಷ್ಟಿದೆ. ಬಂಡವಾಳಶಾಹಿ ರಾಷ್ಟ್ರಗಳು ಮುಂಚೂಣಿಯಲ್ಲಿರಲು ಕಾರಣ ಮಹಿಳೆಯರ ಬೌದ್ಧಿಕ ಸಾಮರ್ಥ್ಯವನ್ನು ಅವಲಂಭಿಸಿವೆ. ಇದಕ್ಕಾಗಿ ಅವರಿಗೆ ಸಿಗಬೇಕಾದ ಗೌರವ, ಸ್ವಾತಂತ್ರ್ಯ ಸಿಗಲೇಬೇಕು. ಆದರೆ ವಾಸ್ತವ ಹಾಗಿಲ್ಲ ಎನ್ನುವುದು ಇತಿಹಾಸ ಗಮನಿಸಿದರೆ ಗೊತ್ತಾಗುತ್ತದೆ.

ಹೊಸ ಶತಮಾನದ ಹೊಸ್ತಿಲಲ್ಲಿ ನಿಂತು ಮಹಿಳೆಯರ ಸಾಧನೆ ಕುರಿತು ಎಲ್ಲ ಕ್ಷೇತ್ರಗಳಲ್ಲಿ ಅಧ್ಯಯನ ನಡೆದಿದೆ. ಮಹಿಳೆಯರ ಶೋಷಣೆ ಕುರಿತು ಹೇಳುವಾಗ ಅವರ ಸಾಧನೆಯನ್ನು ಹೇಳಬೇಕಾಗಿದೆ.

ಸಮಾಜದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಒಂದಾದ ವೃತ್ತಿರಂಗಭೂಮಿಯನ್ನು ನಿರ್ಲಕ್ಷಿಸಲಾಗಿದೆ. ಈ ಕ್ಷೇತ್ರದಲ್ಲಿ ಆಗಬೇಕಾದಷ್ಟು ಅಧ್ಯಯನ ಆಗಿಲ್ಲ. ಅದರಲ್ಲೂ ವೃತ್ತಿರಂಗಭೂಮಿಯ ಮಹಿಳೆಯರ ಸಾಧನೆ ಪ್ರಯತ್ನಗಳ ಕುರಿತು ನಡೆದ ಅಧ್ಯಯನ ತೀರಾ ವಿರಳ. ವೃತ್ತಿರಂಗಭೂಮಿ ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯನ್ನು ಕೇಂದ್ರವಾಗಿಟ್ಟುಕೊಂಡು, ಉತ್ತರ ಕರ್ನಾಟಕದ ಮಹಿಳೆಯರ ಕುರಿತು ಅಧ್ಯಯನವಾಗಿಲ್ಲ.

ಕರ್ನಾಟಕದ ವೃತ್ತರಂಗಭೂಮಿಯ ಇತಿಹಾಸ ಕೇವಲ 130 ವರ್ಷದ್ದು. ಆರಂಭದ ಸುಮಾರು 25 ವರ್ಷಗಳು ಮಹಿಳೆಯರಿಲ್ಲದ ವೃತ್ತಿರಂಗಭೂಮಿಯಾಗಿತ್ತು. ನಂತರದ ನೂರು ವರ್ಷಗಳು ಮಹಿಳೆಯರಿಲ್ಲದ ವೃತ್ತಿರಂಗಭೂಮಿಯನ್ನು ಊಹಿಸುವುದೂ ಕಷ್ಟ. ಮಹಿಳೆಯರು ವೃತ್ತಿರಂಗಭೂಮಿಯ ಅವಿಭಾಜ್ಯ ಅಂಗವಾದರು.

ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ವೃತ್ತಿರಂಗಭೂಮಿ ಅತ್ಯಂತ ಮಹತ್ವದ್ದು. ಆರಂಭದಲ್ಲಿ ಪೌರಾಣಿಕ, ಐತಿಹಾಸಿಕ ನಾಟಕಗಳ ಮೂಲಕ ಸಮಾಜಕ್ಕೆ ನೀತಿಬೋಧೆ, ದೇಶಾಭಿಮಾನ ಬೆಳೆಸಿ ಜನಮಾನಸದಲ್ಲಿ ಅಚ್ಚಳಿಯದಂತೆ ಉಳಿದ ವೃತ್ತಿರಂಗಭೂಮಿ ನಂತರ ಸಾಮಾಜಿಕ, ಸಂಸಾರಿಕ ನಾಟಕಗಳ ಮೂಲಕ ಜನಮನಸೂರೆಗೊಂಡು ಚಳುವಳಿ ರೂಪದಲ್ಲಿ ಜನಪ್ರೀಯ ಮಾಧ್ಯಮವಾಗಿ ಬೆಳೆದು ಬಂತು.

ರಂಗಭೂಮಿ, ವೃತ್ತಿರಂಗಭೂಮಿ, ಉತ್ತರ ಕರ್ನಾಟಕ ರಂಗಭೂಮಿ, ವೃತ್ತಿಮಂಡಳಿಗಳ ಕುರಿತು ಕೆಲ ಅಧ್ಯಯನಗಳು ನಡೆದಿವೆ. ವೃತ್ತಿರಂಗಭೂಮಿ ಬೆಳೆದುಬರಲು ಬರೀ ಪುರುಷರಷ್ಟೇ ಕಾರಣರಲ್ಲ. ಇದರಲ್ಲಿ ಮಹಿಳೆಯರ ಪಾತ್ರವೂ ಬಹುದೊಡ್ಡದಿದೆ. ಆದರೆ ಅವರ ಶ್ರಮವನ್ನು ಕಡೆಗಣಿಸಲಾಗಿದೆ. ಆದ್ದರಿಂದ ಅವರ ಸೇವೆ, ಶ್ರಮ ವೃತ್ತಿರಂಗಭೂಮಿ ಬೆಳೆದು ನಿಲ್ಲಲು ಹೇಗೆ ನೆರವಾಯಿತೆನ್ನುವುದನ್ನು ಗುರುತಿಸಿ ಬೆಳಕಿಗೆ ತರುವುದು ಇಂದು ಅವಶ್ಯವಾಗಿದೆ. ಆದ್ದರಿಂದ ಉತ್ತರ ಕರ್ನಾಟಕವನ್ನು ಅಧ್ಯಯನದ ಕೇಂದ್ರವಾಗಿಟ್ಟುಕೊಂಡು ಮಹಿಳೆಯರ ಕೊಡುಗೆಯನ್ನು ಕುರಿತು ಅಧ್ಯಯನ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಸ್ವರೂಪ :**

ನನ್ನ ಅಧ್ಯಯನದ ಸ್ವರೂಪ ಎರಡು ರೀತಿಯದ್ದಾಗಿದೆ. (1) ಈಗ ಆಗಿರುವ ಅಧ್ಯಯನಗಳ ಅವಲೋಕನ. (2) ಕ್ಷೇತ್ರಕಾರ್ಯದ ಮೂಲಕ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಮಾಹಿತಿ ಸಂಗ್ರಹ ಹಾಗೂ ವಿಶ್ಲೇಷಣೆ.

**ಇದುವರೆಗೂ ಆಗಿರುವ ಅಧ್ಯಯನಗಳ ಅಧ್ಯಯನ :**

ವೃತ್ತಿರಂಗಭೂಮಿಯನ್ನು ಕುರಿತು ಆಗಿರುವ ಅಧ್ಯಯನಗಳು ತೀರ ಕಡಿಮೆಯಾಗಿದ್ದರೂ, ಆಗಿರುವ ಅಧ್ಯಯನಗಳನ್ನು ಮೊದಲು ಅವಲೋಕಿಸುವುದು ಅಗತ್ಯವಾಗಿದೆ. ವೃತ್ತಿರಂಗಭೂಮಿಯ ಹಿನ್ನೆಲೆ ಸ್ಥಿತಿಗತಿಗಳನ್ನು ಗ್ರಹಿಸುವಲ್ಲಿ ಈ ಅಧ್ಯಯನಗಳು ಸಹಕಾರಿಯಾಗಿವೆ.

1964ರಲ್ಲಿ ಪ್ರಕಟಣೆಯಾದಂತಹ ಡಾ. ಎಚ್. ಕೆ. ರಂಗನಾಥರ 'ದಿ ಕರ್ನಾಟಕ ಥೇಟರ್' ಈ ಪ್ರಬಂಧ ವೃತ್ತಿರಂಗಭೂಮಿಯ ಕುರಿತು ಅಧ್ಯಯನ ಮಾಡುವವರಿಗೆ ಒಂದು ಮೈಲುಗಲ್ಲಾಗಿದೆ.

ಇನ್ನೊಂದು ಸಂಶೋಧನಾ ಪ್ರಬಂಧ 'ಡಾ. ರಾಮಕೃಷ್ಣ ಮರಾಠೆಯವರ 'ಉತ್ತರ ಕರ್ನಾಟಕದ ವೃತ್ತಿರಂಗಭೂಮಿ' ಇದರಲ್ಲಿ ಸಂಶೋಧಕರು ವೃತ್ತಿರಂಗಭೂಮಿಯ ಬಗ್ಗೆ ವಿಶೇಷವಾದ ಆಸಕ್ತಿ, ಕಾಳಜಿ, ಹೊಂದಿರುವುದನ್ನು ಕಾಣಬಹುದು. ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ವೈಭವ ಅದರ ಶ್ರೀಮಂತಿಕೆಯನ್ನು ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ. ಏರಿಳಿತಗಳ ಒಳತೋಟಿಯನ್ನು ವಿವರವಾಗಿ ಚರ್ಚಿಸಿದ್ದಾರೆ.

ತಮ್ಮ ಕ್ಷೇತ್ರಕಾರ್ಯದಿಂದ ಅಮೂಲ್ಯವಾದ ಮಾಹಿತಿಗಳನ್ನು ಸಂಗ್ರಹಿಸಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಪ್ರಮುಖ ಮಂಡಳಿಗಳನ್ನು ಅವುಗಳ ಸಾಧನೆಯನ್ನು ಸಂಶೋಧನಾ ಒರೆಗಲ್ಲಿಗೆ ಹಚ್ಚಿ ಚರ್ಚಿಸಿದ್ದಾರೆ. ಇದರಲ್ಲಿ 13 ಜನ ಪ್ರಮುಖ ನಟಿಯರನ್ನು ಸಾಂದರ್ಭಿಕವಾಗಿ ಪ್ರಸ್ತಾಪಿಸಿದ್ದಾರೆ. ಇದು 'ಉತ್ತರ ಕರ್ನಾಟಕದ ವೃತ್ತಿರಂಗಭೂಮಿ' ಕೇಂದ್ರಿತ ಅಧ್ಯಯನವಾದ್ದರಿಂದ ನನ್ನ ಅಧ್ಯಯನದ ವಿಷಯಕ್ಕೆ ಪ್ರಮುಖ ಆಕರಗ್ರಂಥವಾಗಿದೆ.

ಇನ್ನೊಂದು ಸಂಶೋಧನಾ ಪ್ರಬಂಧ 'ಗರುಡ ಸದಾಶಿವರಾಯರ : ನಾಟಕ ಸಾಹಿತ್ಯ ಹಾಗೂ ವೃತ್ತಿರಂಗಭೂಮಿಯ ಅಧ್ಯಯನ' ಈ ಪ್ರಬಂಧದ ಸಂಶೋಧಕರು ಡಾ. ಬಸವರಾಜ ಜಗಜಂಪಿ. ಈ ಸಂಶೋಧನಾ ಕೃತಿ ಗರುಡ ಸದಾಶಿವರಾಯರ ಸಾಧನೆಗಳನ್ನು ಕೇಂದ್ರವಾಗಿಟ್ಟುಕೊಂಡು ನಡೆದ ಅಧ್ಯಯನವಾದರೂ ಇದರಲ್ಲಿ ಪೂರಕವಾಗಿ ರಂಗಭೂಮಿ ಹಿನ್ನಲೆ, ವೃತ್ತಿರಂಗಭೂಮಿಯ ಬೆಳವಣಿಗೆಯ ಘಟ್ಟಗಳು, ಎದುರಿಸಿದ ಸಂಕಷ್ಟಗಳನ್ನು ಚರ್ಚಿಸಲಾಗಿದೆ.

ಗರುಡ ಸದಾಶಿವರಾಯರ ಜೀವನ, ಅವರು ಸ್ಥಾಪಿಸಿದ ದತ್ತಾತ್ರೇಯ ಸಂಗೀತ ನಾಟಕ ಮಂಡಳಿ, ಈ ಮಂಡಳಿಯ ಕಲಾವಿದರು, ರಂಗಪರಿಕರಗಳು, ನಟ, ನಾಟಕಕಾರರಾಗಿ ಗರುಡರ ಸಾಧನೆ, ಕೊಡುಗೆಗಳ ಕುರಿತು ವಿಸ್ತೃತ ಮಾಹಿತಿಗಳು ದೊರಕುತ್ತವೆ. ಮಂಡಳಿಯ ಕಲಾವಿದರ ಕುರಿತು ಪ್ರಸ್ತಾಪಿಸುವಾಗ ಕೇವಲ ಐದು ಜನ ಮಹಿಳಾ ಕಲಾವಿದರನ್ನು ಮಾತ್ರ ಉಲ್ಲೇಖಿಸಿದ್ದಾರೆ.

ಒಟ್ಟಾರೆಯಾಗಿ ಇದು ವೃತ್ತಿರಂಗಭೂಮಿಯನ್ನು ಅರಿತುಕೊಳ್ಳಲು ಒಂದು ಪ್ರಾತಿನಿಧಿಕ ಗ್ರಂಥವಾಗಿ ನನ್ನ ಸಂಶೋಧನೆಗೆ ಸಹಾಯಕವಾಗಿದೆ. ಇಲ್ಲಿ ಮಹಿಳೆಯರನ್ನು ಕುರಿತು ಹೆಚ್ಚಿನದನ್ನು ನಿರೀಕ್ಷಿಸುವಂತಿಲ್ಲ.

ಇನ್ನು ಮಹಿಳೆಯರನ್ನು ಕುರಿತು ನಡೆದ ಇನ್ನೊಂದು ಸಂಶೊಧನಾ ಪ್ರಬಂಧ ಡಾ. ವೆಂಕಟಗಿರಿ ದಳವಾಯಿ ಅವರ 'ವೃತ್ತಿರಂಗಭೂಮಿ ಮತ್ತು ಮಹಿಳೆ.'

ಅಧ್ಯಯನಕಾರರು ಇಲ್ಲಿ ಏಳು ಅಧ್ಯಾಯಗಳನ್ನು ಮಾಡಿಕೊಂಡು ರಂಗಭೂಮಿಯನ್ನು ಇಡಿಯಾಗಿ ಗಮನದಲ್ಲಿಟ್ಟುಕೊಂಡು ಸಂಶೋಧನೆ ಮಾಡಿದ್ದಾರೆ. ಮಹಿಳೆಯ ರಂಗ ಸಂಬಂಧಗಳ ಹಿನ್ನಲೆಯೊಂದಿಗೆ ಆರಂಭಿಸಿ ಜಾನಪದ ರಂಗಭೂಮಿ, ಅದರ ಪ್ರೇರಣೆಗಳು, ವೃತ್ತಿರಂಗಭೂಮಿ, ಹವ್ಯಾಸಿ ರಂಗಭೂಮಿ, ವಿವಿಧ ವರ್ಗದವರ ರಂಗಪ್ರವೇಶ ಇವುಗಳ ಕುರಿತು ಚರ್ಚಿಸಿದ್ದಾರೆ. ಅದರೊಂದಿಗೆ ಪ್ರೇಕ್ಷಕ, ಮಾಲಿಕ, ನಟರನ್ನು ಕುರಿತು ವಿವರಿಸಿದ್ದಾರೆ. ಡಾ. ವೆಂಕಟಗಿರಿ ದಳವಾಯಿಯವರು ಇಡೀ ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ರಂಗದ ಎಲ್ಲಾ ಪ್ರಕಾರಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದರಿಂದ ಸಹಜವಾಗಿ ವೃತ್ತಿರಂಗಭೂಮಿ ಮಹಿಳೆಯರ ಕುರಿತು ಮಾಡಿರುವ ಚರ್ಚೆ ತೀರ ಕಡಿಮೆಯಾಗಿದೆ. ಇದರ ಬಗ್ಗೆ ವಿಶೇಷವಾದ ವಿಸ್ತ್ರತ ಅಧ್ಯಯನದ ಅಗತ್ಯ ಇರುವುದು ಕಂಡು ಬಂತು.

ನಾನು ಅಧ್ಯಯನ ಮಾಡಿದ ಇನ್ನುಳಿದ ಸಂಶೋಧನಾ ಪ್ರಬಂಧಗಳೆಂದರೆ, ಡಾ. ಎಸ್.ಎಫ್. ಜಕಬಾಳ ಅವರ 'ಕಲಾವೈಭವ ನಾಟ್ಯ ಸಂಘ ಬೆಳಗಾಂವ' ಡಾ. ದೇವದಾಸ ಕಳಸದ ಅವರ ' ಕನ್ನಡ ವೃತ್ತಿರಂಗ ಸಂಸ್ಕೃತಿ' ಒಂದು ಸೈದ್ಧಾಂತಿಕ ಅಧ್ಯಯನ' ಇವುಗಳ ನೆರವನ್ನು ನಾನು ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ಇತ್ತೀಚಿಗೆ ಬಂದ ಸಂಶೋಧನಾ ಪ್ರಬಂಧಗಳಾದ ಡಾ. ಸುಜಾತಾ ಅಕ್ಕಿಯವರ 'ಬಳ್ಳಾರಿ ಜಿಲ್ಲೆಯ ರಂಗನಟಿಯರು' ಡಾ. ಪ್ರಭುಗಂಜ್ಯಾಳ ಅವರ 'ಕನ್ನಡ ರಂಗಭೂಮಿ ಮತ್ತು ಚಲನಚಿತ್ರ ತೌಲನಿಕ ಅಧ್ಯಯನ' ಇತ್ಯಾದಿ.

ಇನ್ನು ರಂಗಭೂಮಿಗೆ ಸಂಬಂಧಪಟ್ಟಂತೆ ಪ್ರಕಾಶ ಗರುಡ ಅವರ 'ಗರುಡ ಸದಾಶಿವರಾಯರು.' ಈ ಕೃತಿ ಗರುಡರ ಬದುಕಿನ ಮೇಲೆ ಬೆಳಕನ್ನು ಚೆಲ್ಲುತ್ತದೆ. ಅದೇ ರೀತಿ ಮಹಿಳೆಯರ ಕುರಿತು ಕೆಲವು ಪುಸ್ತಕಗಳು ಪ್ರಕಟಣೆಯಾಗಿವೆ. ಅನ್ನಪೂರ್ಣ ಸಾಗರ ಅವರ "ನನ್ನ ಬದುಕಿನ ಪುಟಗಳಿಂದ' (ನಿರೂಪಣೆ ಗವೀಶ ಹಿರೇಮಠ). ವೀಣಾ ಕುಲಕರ್ಣಿಯವರ 'ರಂಗ ಕೋಗಿಲೆ ಜುಬೇದಾಬಾಯಿ.'

ಮಾಲತಿಶ್ರೀ ಮೈಸೂರು ಅವರ ಕುರಿತು 'ತೆರೆ ಸರಿದಾಗ' ಗುಡುಹಳ್ಳೀ ನಾಗರಾಜ, ಇವರೇ ಬರೆದ ಇನ್ನೆರಡು ಕೃತಿ 'ಚಂದೋಡಿಲಿಲಾ' ಹಾಗೂ 'ರಂಗಸಿರಿ ಮರಿಯಮ್ಮನಹಳ್ಳಿ ನಾಗರತ್ನಮ್ಮ'. ಕುಂ. ವೀರಭದ್ರಪ್ಪನವರ 'ಸುಭದ್ರಮ್ಮ ಮನ್ಸೂರ' ಇತ್ಯಾದಿ. ಇನ್ನು ರಂಗಭೂಮಿಗೆ ಸಂಬಂಧಪಟ್ಟಂತೆ ಕೆಲವು ಕಾದಂಬರಿಗಳು ಬಂದಿವೆ. ಅವು ಕೂಡ ನನ್ನ ಸಂಶೋಧನೆಗೆ ಸಹಾಯಕವಾಗಿವೆ. ಅನಕೃ ಅವರ ನಟಸಾರ್ವಭೌಮ ಭಾಗ-1, 2, 3, ಸುದರ್ಶನ ದೇಸಾಯಿಯವರ 'ಸಾಂವಿ', ಬಿಎಲ್. ವೇಣು ಅವರ ಬಣ್ಣದ ಜಿಂಕೆ, ಅಶ್ವಥರ ರಂಗನಾಯಕಿ  ಇವು ನನ್ನನ್ನು ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಮಹಿಳೆಯರ ಆಳಕ್ಕೆ ಇಳಿಯಲು ಸಹಾಯಕವಾದವು.

**ಕ್ಷೇತ್ರ ಕಾರ್ಯ :**

ಈ ಅಧ್ಯಯನ ಮುಖ್ಯವಾಗಿ ಕ್ಷೇತ್ರಕಾರ್ಯ ಆಧಾರಿತವಾದುದು. ಹಾಗಾಗಿ ಸಂಪನ್ಮೂಲ ವ್ಯಕ್ತಿಗಳ ಭೇಟಿ ಮತ್ತು ಮಾಹಿತಿ ಕ್ರೋಢೀಕರಣ ಮಾಡಿದ್ದೇನೆ. ಈ ಕ್ಷೇತ್ರದಲ್ಲಿ ಆಸಕ್ತಿ ಇರುವ ಸೇವೆಗೈದಿರುವ ಸಂಪನ್ಮೂಲ ವ್ಯಕ್ತಿಗಳ ಪಟ್ಟಿಯೊಂದನ್ನು ಮಾಡಿಕೊಂಡು, ಬೆಂಗಳೂರು, ವಿಜಾಪೂರ, ಬೆಳಗಾಂವ, ಅಥಣಿ, ಹುಬ್ಬಳ್ಳಿ, ಧಾರವಾಡ, ಬಾಗಲಕೋಟ, ಗುಳೇದಗುಡ್ಡ ಮುಂತಾದ ಊರುಗಳಿಗೆ ಹೋಗಿ ಅವರನ್ನು ಭೇಟಿಮಾಡಿ ಚರ್ಚಿಸಿದ್ದೇನೆ. ಅವರ ಅನುಭವಗಳನ್ನು ಕೆದಕಿ ಮಾಹಿತಿಗಳನ್ನು ಕ್ರೋಢೀಕರಿಸಿ ಸಂಶೋಧನೆಯಲ್ಲಿ ಅಳವಡಿಸಿಕೊಂಡಿದ್ದೇನೆ. ಇವರಲ್ಲಿ ಪ್ರಮುಖರಾದವರು ಹಿರಿಯರಂಗ ಕರ್ಮಿ ಏಣಗಿ ಬಾಳಪ್ಪನವರು, ಗುಡಗೇರಿ ಎನ್. ಬಸವರಾಜರು, ಬಸಣ್ಣಾ ತಿರ್ಲಾಪೂರ, ಗುಡಿಹಳ್ಳೀ ನಾಗರಾಜ, ಹೆಮಾ ಪಟ್ಟಣಶೆಟ್ಟಿ, ಬಾಳಾಸಾಹೇಬ ಲೋಕಾಪೂರ ಮುಂತಾದವರಿದ್ದಾರೆ.

ಇದು ಒಂದು ರೀತಿಯ ಕ್ಷೇತ್ರಕಾರ್ಯವಾದರೆ ವೃತ್ತಿ ರಂಗಭೂಮಿಯಲ್ಲಿ ನೇರವಾಗಿ ತೊಡಗಿಸಿಕೊಂಡ ಮಹಿಳೆಯರನ್ನು ಅವರಿದ್ದಲ್ಲಿಗೆ ಹೋಗಿ ಸಂದರ್ಶನ ಮಾಡಿ ಮಾಹಿತಿಯನ್ನು ಸಂಗ್ರಹಿಸಿದ್ದೇನೆ. ಇದಕ್ಕಾಗಿ ಅನೇಕರ ದೂರವಾಣಿ ಸಂಖ್ಯೆ ಮತ್ತು ವಿಳಾಸಗಳನ್ನು ಕೊಟ್ಟು ಸಹಕರಿಸಿದವರು ಹುಬ್ಬಳ್ಳಿಯ ಕೆಲಸಗಾರ ಪ್ರೆಸ್ಸಿನ ಮಾಲೀಕರಾದ ಶ್ರೀನಿವಾಸ ಜೋಶಗೇರಿ ಹಾಗೂ ವೃತ್ತಿರಂಗಭೂಮಿಯ ಹಿರಿಯ ಕಲಾವಿದೆ ಪ್ರೇಮಾ ಬದಾಮಿ ಅವರು.

ಹೀಗೆ ಆರಂಭವಾದ ಕ್ಷೇತ್ರಕಾರ್ಯ. ಒಬ್ಬೊಬ್ಬ ಕಲಾವಿದೆಯರನ್ನು ಭೇಟಿಮಾಡಿದಾಗ ಮತ್ತೆ ಹಲವು ಮಹಿಳೆಯರ ವಿಳಾಸ ಸಿಗುತ್ತಿತ್ತು. ಹೀಗೆ ಸಿಕ್ಕ ಮಾಹಿತಿಗಳ ಜಾಡು ಹಿಡಿದು ಉತ್ತರ ಕರ್ನಾಟಕದ

ಅನೇಕ ನಗರ, ಹಳ್ಳಿಗಳಿಗೆ ಹೋಗಿ, ಹಿರಿಯ ಕಲಾವಿದೆಯರನ್ನು ಗಮನದಲ್ಲಿಟ್ಟುಕೊಂಡು ಮಾಹಿತಿ ಸಂಗ್ರಹಿಸಿದ್ದೇನೆ. ಕಣ್ತಪ್ಪಿನಿಂದ, ಇಲ್ಲಾ ನಾನು ಹೋದಾಗ ಅವರು ಸಿಗದೇ ಇರುವುದರಿಂದ ಇನ್ನೂ ಕೆಲ ಕಲಾವಿದೆಯರು ಬೆಳಕಿಗೆ ಬಾರದೆ ಇರಬಹುದು. ಒಟ್ಟು 57 ಜನ ಕಲಾವಿದೆಯರನ್ನು ನಾನುಮುಖತಃ ಭೇಟಿಮಾಡಿದ್ದೇನೆ. ತೆಗೆದುಕೊಂಡ ಅವಧಿ ಮೂರುವರ್ಷ.

**ಅಧ್ಯಯನದ ವ್ಯಾಪ್ತಿ :**

ಅಧ್ಯಯನದ ಒಂದು ಖಚಿತತೆಗಾಗಿ ಒಂದು ಪ್ರದೇಶವನ್ನು ವ್ಯಾಪ್ತಿಯಲ್ಲಿಟ್ಟುಕೊಳ್ಳುವುದು ಸೂಕ್ತವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಭೌಗೋಳಿಕವಾಗಿ ಉತ್ತರ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು ಹಾಗೂ ರಂಗಭೂಮಿ ಹೆಚ್ಚು ಮಹಿಳೆಯರನ್ನು ಒಳಗೊಂಡಂತಹ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಈ ಅಧ್ಯಯನ ಕೈಕೊಳ್ಳಲಾಗಿದೆ. ಧಾರವಾಡ, ಗದಗ, ಹುಬ್ಬಳ್ಳಿ, ಬೆಳಗಾಂವ, ಬಿಜಾಪೂರ, ಬಾಗಲಕೋಟ, ಬಳ್ಳಾರಿ ಜಿಲ್ಲೆಗಳನ್ನು ಪ್ರಾತಿನಿಧಿಕವಾಗಿ ಕ್ಷೇತ್ರಕಾರ್ಯ ಹಾಗೂ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ.

ವೃತ್ತಿರಂಗಭೂಮಿ ಸಾಕಷ್ಟು ವಿಶಾಲವಾಗಿದ್ದರೂ ಇಪ್ಪತ್ತು ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ಅವಧಿಗೆ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಗೆ ದುಡಿದ ಮಹಿಳೆಯರನ್ನು ನಾನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದೇನೆ.

ಇಲ್ಲಿ ಅಧ್ಯಯನಕ್ಕೆ ಆರಿಸಿಕೊಂಡ ಮಹಿಳೆಯರಲ್ಲಿ ಹೆಚ್ಚಿನವರು ಪೂರ್ಣ ಪ್ರಮಾಣದಲ್ಲಿ ಉತ್ತರ ಕರ್ನಾಟಕದವರು, ಇನ್ನೂ ಕೆಲವರು ಸುಧೀರ್ಘ ಅವಧಿಯವರೆಗೆ ಉತ್ತರ ಕರ್ನಾಟಕದ ಮಂಡಳಿಗಳಿಗೆ ಸೇವೆಸಲ್ಲಿಸಿದ್ದನ್ನು ಗಮನದಲ್ಲಿಟ್ಟುಕೊಂಡು ಅವರನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಸೇರಿಸಿಕೊಂಡಿದ್ದೇನೆ.

ನಂದಾರಾಣಿ ಎನ್ನುವವರು ಮೂಲತಃ ಕಲಕತ್ತಾದವರಾದರೂ ತಂದೆಯ ಸರ್ಕಸ್ ಕಂಪನಿ ದಿವಾಳಿಯಾದನಂತರ ಹುಬ್ಬಳ್ಳಿಗೆ ಬಂದು ನೆಲೆಸಿ ವೃತ್ತಿರಂಗಭೂಮಿಗೆ ಸೇರಿಕೊಂಡರು.

ಅನ್ನಪೂರ್ಣಾ ಸಾಗರ ಅವರು ಶಿವಮೊಗ್ಗಾ ಜಿಲ್ಲೆಯ ಸಾಗರದವರಾದರೂ ಗೋಕಾಕದ "ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ"ಯ ಮೂಲಕ ವೃತ್ತಿರಂಗಭೂಮಿಗೆ ಸೇರಿ ಉತ್ತರ ಕರ್ನಾಟಕದ ಮಂಡಳಿಗಳಲ್ಲಿ ದುಡಿದವರು. ಇವರಂತೆಯೇ ಎಚ್.ಬಿ. ಸರೋಜಮ್ಮ ಉತ್ತರ ಕರ್ನಾಟಕದ ವೃತ್ತಿ ಮಂಡಳಿಯಿಂದ ಕಲಾ ಸೇವೆ ಪ್ರಾರಂಭಿಸಿ ಈಗ ಹುಬ್ಬಳ್ಳಿಯಲ್ಲಿ ನೆಲೆಸಿದ್ದಾರೆ. ಕುಂದಾಪೂರ ಜಿಟ್ಟಿ

ಬಂದ ಸುಮಿತ್ರಮ್ಮ ತಮ್ಮ ಜೀವಮಾನವನ್ನೆಲ್ಲ ಉತ್ತರ ಕರ್ನಾಟಕದಲ್ಲಿಯೇ ಕಳೆದರು. ಇವರಂತೆ ಲೋಲಮ್ಮ, ಥೆರೆಸಮ್ಮ, ಸಚ್ಚಿದೇವಿ, ಮಾಲತಿಸುಧೀರ, ಉತ್ತರ ಕರ್ನಾಟಕ ವೃತ್ತಿರಂಗಭೂಮಿಯಲ್ಲಿನೇ ದುಡಿದವರು. ಮಾಲತಿಶ್ರೀ ಮೈಸೂರು ಹೊಟ್ಟೆಪಾಡಿಗಾಗಿ ಉತ್ತರ ಕರ್ನಾಟಕದ ಗೋಕಾಕ ಬಸವಣ್ಣೆಪ್ಪನವರ ಮಂಡಳಿಯ ಮುಖಾಂತರ ವೃತ್ತಿರಂಗ ಪ್ರವೇಶಿಸಿ ಬಿ.ಆರ್. ಅರಿಶಿನಗೋಡಿಯವರ ಮಂಡಳಿಯಲ್ಲಿಯೇ ಮೂವತ್ತು ವರ್ಷ ದುಡಿದರು.

ಇವರೆಲ್ಲ ಮೂಲತಃ ಉತ್ತರ ಕರ್ನಾಟಕದವರಲ್ಲದಿದ್ದರೂ ಉತ್ತರ ಕರ್ನಾಟಕದ ಮಂಡಳಿಗಳಲ್ಲಿ ಅವರ ಸೇವೆಯನ್ನು ಪರಿಗಣಿಸಿ ಇವರನ್ನೆಲ್ಲ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಸೇರಿಸಿಕೊಂಡಿದ್ದೇನೆ.

ಹಾಗೆಯೇ ಕಾರಣಾಂತರಗಳಿಂದ ಇಂದು ಕೆಲವು ಮಹಿಳೆಯರು ರಾಜ್ಯದ ಬೇರೆ ಬೇರೆ ಕಡೆ ನೆಲೆಸಿದ್ದಾರೆ. ಅಲ್ಲಿಗೆ ಹೋಗಿ ಅವರನ್ನು ಭೇಟಿಯಾಗಿ ಸಂದರ್ಶನ ಮಾಡಿ ಎಲ್ಲಾ ರೀತಿಯ ಮಾಹಿತಿಗಳನ್ನು ಪಡೆದು ಅಧ್ಯಯನವನ್ನು ಪೂರೈಸಿರುವೆ.

# ಅಧ್ಯಾಯ–1

# ರಂಗಭೂಮಿಯ ಉಗಮ ಮತ್ತು ವಿಕಾಸ

## ರಂಗಭೂಮಿಯ ಪ್ರಾರಂಭಿಕ ಹಂತ

ಕನ್ನಡ ರಂಗಭೂಮಿಯನ್ನು ಐತಿಹಾಸಿಕವಾಗಿ ನೋಡುವಾಗ ಮುಖ್ಯ ತೊಂದರೆ ಎಂದರೆ ಇತಿಹಾಸ ಮತ್ತು ಆಧಾರಗಳ ಅಭಾವ. ಈ ಕಾಲದಲ್ಲಿಯೇ ರಂಗಭೂಮಿ ಇತ್ತು ಎಂಬುದಕ್ಕೇ ನಮ್ಮಲ್ಲಿ ಯಾವ ಆಧಾರಗಳೂ ಸಿಗುವುದಿಲ್ಲ. ನೃತ್ಯ ಸಂಗೀತದ ಕೂಡ ಮೇಳವಿಸಿಕೊಂಡು ಬಂದ ಈ ನಾಟಕ ಕಲೆ, ಪಂಪನ ಆದಿಪುರಾಣದಲ್ಲಿ ನೀಲಾಂಜನೆಯ ನೃತ್ಯ, ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಮಾಯೆಯ ನೃತ್ಯ, ಹರಿಹರನ ಮಲುಹಣನ ರಗಳೆಯಲ್ಲಿ ಮಲುಹಣೆಯ ನೃತ್ಯದ ಪ್ರಸ್ತಾಪ ಬಂದಿರುವುದನ್ನು ನೋಡಿದಾಗ ನಮ್ಮ ಕಲೆ, ಸಂಸ್ಕೃತಿಗೆ ಸಾವಿರ ವರ್ಷದ ಇತಿಹಾಸ ಇದ್ದದ್ದು ಕಂಡುಬರುತ್ತದೆ. ಹೀಗೆ ಒಂದಿಲ್ಲೊಂದು ರೂಪದಲ್ಲಿ ರಂಗಭೂಮಿ, ರಂಗಕಲೆ ಅಸ್ತಿತ್ವದಲ್ಲಿತ್ತು ಎಂದು ಹೇಳಬಹುದು.

"ಕೂಸು ಯಾವಾಗ ಹುಟ್ಟಿತು ಮುಖ್ಯವಲ್ಲ, ಹುಟ್ಟಿದ ಕೂಸು ಯಾವಾಗ ಆಡಲು ಬೀದಿಗೆ ಬಂದಿತು" ಎಂಬ ಶ್ರೀರಂಗರ ಮಾತಿನಲ್ಲಿ ಅರ್ಥವಿದೆ. ರಂಗಭೂಮಿಯೆಂದರೆ ಕೇವಲ ಅನುಕರಣ ಮತ್ತು ರಂಜನವಲ್ಲ. ಬುದ್ಧಿ ಮತ್ತು ಕಲ್ಪನಾಶಕ್ತಿಯ ಕಲಾಸೃಷ್ಟಿ ಅಲ್ಲದೆ ಜಗತ್ತಿನ ಅತ್ಯಂತ ಪ್ರಾಚೀನ ಕಲೆಗಳಲ್ಲಿ ನಾಟಕ ಕಲೆಯೂ ಒಂದು. ನಾಟಕ ಕಾವ್ಯದ ಒಂದು ಪ್ರಕಾರ. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಉಕ್ತಿಯಂತೆ ನಾಟಕ ಎಂಬ ಪದ ಗೋವಿಂದ ವೈದ್ಯ ಹಾಗೂ ರತ್ನಾಕರವರ್ಣಿಗಳ ಕೃತಿಗಳಲ್ಲಿ ಅಲ್ಲಲ್ಲಿ ಕಾಣಸಿಗುತ್ತದೆ. 17ನೆಯ ಶತಮಾನದ ಆದಿಯಲ್ಲಿದ್ದ ಭಟ್ಟಾಕಳಂಕನು ತನ್ನ ಶಬ್ದಾನುಶಾಸನದಲ್ಲಿ

> ಶಬ್ದಾಗಮಾ ಯುಕಾಗಮಾ ಪರಮಾ
>
> ಗಮಾ ವಿಷಯಾಣಾಂ ತಥಾ
>
> ಕಾವ್ಯನಾಟಕಾಲಂಕಾರ ಕಲಾಶಾಸ್ತ್ರ

ಈ ಪದ್ಯವನ್ನು ನೋಡಿದಾಗ ಕನ್ನಡ ನುಡಿಯಲ್ಲಿಯೇ ನಾಟಕ ಎಂಬ ಪದ ಬಳಕೆಯಾದ್ದುದು ಕಂಡು ಬರುತ್ತದೆ. ಕುಮಾರ ವ್ಯಾಸನಲ್ಲಿಯೂ ನಾಟಕ ಎಂಬ ಪದ ಬಳಕೆಯಾದದ್ದು ಅನೇಕ ಕಡೆ

ಕಂಡುಬರುತ್ತದೆ. ಇದೆಲ್ಲಕ್ಕಿಂತ ಮುಖ್ಯವಾದ ಇನ್ನೊಂದು ವಿಷಯವೆಂದರೆ, ಕ್ರಿ. ಶ. 1045ರಲ್ಲಿ ನಿಲ್ಲಿಸಿದ ಧಾರವಾಡದ ಹತ್ತಿರವಿರುವ ಮುಗುದ (ಮುಗುಂದ) ಎಂಬ ಹಳ್ಳಿಯಲ್ಲಿ ಬಿಸಿಲು ಮಳೆ ಎನ್ನದೇ ನಿಂತಿರುವ ದೊಡ್ಡದೊಂದು ಶಿಲಾಫಲಕವು "ಶ್ರೀ ಮನ್ಮಹಾಸಾಮನ್ತಂ ಮಾರ್ತಾಣ್ಡಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ ನಾಟಕ ಶಾಲೆಯಂ ಮಾಡಿಸಿ ತನ್ನ ಕೀರ್ತಿ ಶಿಲಾಸ್ತಂಭಮಂ ಆ ಚಂದ್ರರ್ಕ ತಾರಂಭರಂ ನಿಲಿಸಿದಂ" ಎಂದು ಸಾರುವ ಈ ಶಿಲಾಫಲಕ ಅಂದಿನ ಕನ್ನಡ ನಾಟಕ ಶಾಲೆಗಳ ಬಗ್ಗೆ ಸಾಕ್ಷಿ ಹೇಳುತ್ತದೆ.

ಮನುಷ್ಯನ ಬದುಕೇ ಒಂದು ಹೋರಾಟ ಅನಾಗರಿಕತೆಯಿಂದ ನಾಗರಿಕತೆಯತ್ತ ಹೊರಟ ಮಾನವ ತನ್ನೆಲ್ಲ ಬೇಕು ಬೇಡಗಳನ್ನು ಅರಿತುಕೊಳ್ಳುವ ಸಂವೇದನಾಶೀಲತೆಯನ್ನೊಳಗೊಂಡಾಗ ಅನೇಕ ವಿಧಿ ವಿಧಾನಗಳನ್ನು ಕಂಡು ಹಿಡಿದ ಇದರ ಫಲವಾಗಿ ಹಾಡು ಕುಣಿತಗಳು ಪ್ರಾಚೀನ ಕಾಲದಿಂದಲೇ ಧಾರ್ಮಿಕ ಆಚರಣೆಗಳ ಹಿನ್ನಲೆಯಲ್ಲಿ ಬೆಳೆದು ಬಂದವು. ನಮ್ಮ ಪುರಾಣ ಮಹಾಕಾವ್ಯಕ್ಕೂ ಕೂಡಾ ಧರ್ಮವೇ ತಳಹದಿ. ಹೀಗೆ ಹಾಡು ಕುಣಿತ ಸಂಗೀತ ಎಲ್ಲವನ್ನು ಒಳಗೊಂಡ ಒಂದು ಸಂಕೀರ್ಣ ಕಲೆ ಬೆಳಕಿಗೆ ಬಂತು. ಅದು ನಾಟಕದ ರೂಪದಲ್ಲಿ.

ರಂಗಭೂಮಿಯ ಪ್ರಾಚೀನತೆ ಗ್ರೀಕ್ ರುದ್ರ ನಾಟಕದಲ್ಲಿ ಕಂಡುಬರುತ್ತದೆ. ಪ್ರಾಚೀನ ಗ್ರೀಕರು ನಡೆಸುತ್ತಿದ್ದ ಆಚರಣೆಗಳಲ್ಲಿ ಗ್ರೀಕ್ ನಾಟಕದ ಮೂಲವನ್ನು ಗುರುತಿಸಬಹುದು. ಅಥೇನ್ಸನಲ್ಲಿ 'ಡಯಾನಿಸಸ್' ದೇವತೆಗೆ ಪ್ರತಿ ವರ್ಷ ಎರಡು ಉತ್ಸವಗಳು ನಡೆಯುತ್ತಿದ್ದು, ಅವುಗಳಲ್ಲಿ ಒಂದಾದ ವಸಂತೋತ್ಸವದಲ್ಲಿ ದೇವತಾ ಮಹಿಮೆಗಳನ್ನು ಕೊಂಡಾಡುವ ಡಿತಿರ್ರ್ಯಾಂಬಸ್ ಮೇಳಗೀತವನ್ನು ಹಾಡುತ್ತಿದ್ದರು. ನೃತ್ಯಾಭಿನಯಗಳಿಂದ ಕೂಡಿದ ಈ ಜನಪದ ಮೇಳ ಗೀತಗಳು ಕ್ರಿ. ಶ. ಪೂ. 6ನೆಯ ಶತಮಾನದಲ್ಲಿ ಸಂವಾದ ರೂಪಕ್ಕೆ ತಿರುಗಿ ಕ್ರಮೇಣ ಅದರಿಂದ ರುದ್ರ ನಾಟಕವು ಮೈದಾಳಿರಬಹುದು.

ಆದರೆ ಒಂದು ಮಾತು ಸತ್ಯ. ನಾವು ವಿಷಯವನ್ನು ಐತಿಹಾಸಿಕವಾಗಿ ನೋಡುವಾಗ ಎದುರಾಗುವ ದೊಡ್ಡ ಸಮಸ್ಯೆ ಸಾಕ್ಷ್ಯಾಧಾರಗಳು. ಇದು ರಂಗಭೂಮಿಗೂ ಅನ್ವಯಿಸುವ ಮಾತು. ಕನ್ನಡ ರಂಗಭೂಮಿಯ ಪ್ರಾಚೀನತೆಯನ್ನು ಹೇಳಲು ನಮಗೆ ಸಿಗುವ ಆಧಾರಗಳೇನು? ಪ್ರಾಚೀನ ಶಾಸನಗಳು. ಆದರೆ ಇವಿಷ್ಟರಿಂದಲೇ ನಮಗೆ ಖಚಿತವಾದ ಪುರಾವೆ ಯಾವುದೂ ಸರಿಯಾಗಿ ಸಿಗುವುದಿಲ್ಲ. ಆದರೂ ಭೂತವನ್ನರಿಯದೇ ಭವಿಷ್ಯವನ್ನರಿಯಲು ಹೇಗೆ ಸಾಧ್ಯ? ಅದಕ್ಕಾಗಿ ಸುಮಾರು ಆರುನೂರು ವರ್ಷಗಳಷ್ಟಾದರೂ ನಾವು ಹಿಂದಕ್ಕೆ ಹೋಗಲೇಬೇಕು.

ಕ್ರಿ. ಶ. 1450 ರಲ್ಲಿ ಇಂಗ್ಲೀಷ್ ನಾಟಕಗಳ ಹುಟ್ಟಿಗೆ ಕಾರಣವಾದ ಕ್ರೈಸ್ತಮತೀಯ ಆಚರಣೆಗಳು ಮತ್ತು ಚರ್ಚಿನ ಪ್ರಭಾವ ಇಂಗ್ಲೀಷ್ ರಂಗಭೂಮಿಯ ಮೇಲೆ, ಫ್ರೆಂಚ್ ರಂಗಭೂಮಿಯ ಮೇಲೆ ತನ್ನ ಹಿಡಿತವನ್ನು ಉಳಿಸಿಕೊಂಡಿತ್ತು. ಫ್ರೆಂಚ್ ರಂಗಭೂಮಿಯ ಉದಯಕ್ಕೆ ಕ್ರೈಸ್ತ ಧರ್ಮವು ಪ್ರೇರಣೆ ಕೊಟ್ಟಿದ್ದರೆ, ಜರ್ಮನಿಯಲ್ಲಿ ಕ್ರಿಶ್ಚಿಯನ್ ಧರ್ಮಕ್ಕೆ ಭಿನ್ನವಾದ ಜಾನಪದ ಮೂಲದಿಂದ ನಾಟಕವು ಹುಟ್ಟಿತ್ತೆಂದು ಹೇಳುತ್ತಾರೆ. "ಇಂಗ್ಲೆಂಡಿನ ಆಸ್ತಿಯೆಂದರೆ ಅದರ ಸಾಹಿತ್ಯ, ಆ ಸಾಹಿತ್ಯದ ಶಿಖರವೆಂದರೆ ನಾಟಕ" ಎಂಬ ಮಾತು ಪ್ರಚಲಿತ. ಈ ಮಾತು ನಮ್ಮ ದೇಶಕ್ಕೂ ಅನ್ವಯವಾಗುತ್ತದೆ. ಭಾಸ, ಕಾಳಿದಾಸರಿಂದ ಮೊದಲುಗೊಂಡು ಸಂಸ್ಕೃತ ನಾಟಕಕಾರರ ಕೃತಿಗಳು ಸಾವಿರಾರು ವರ್ಷಗಳು ಕಳೆದರೂ ಇಂದಿಗೂ ನಿತ್ಯ ನೂತನವಾಗಿ ಉಳಿದಿವೆ. ಋಗ್ವೇದದ ಸಂವಾದ ಸೂಕ್ತಗಳೇ ಸಂಸ್ಕೃತ ನಾಟಕದ ಬಿಜಾಂಕುರಗಳೆಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ. ಕ್ರಿ. ಪೂ. 2ನೆಯ ಶತಮಾನದಲ್ಲಿ ಅಭಿನಯ, ನೃತ್ಯ, ಗೀತ, ವಾದ್ಯಗಳೊಡನೆ ನಾಟ್ಯ ನಾಟಕವಾಗಿ ಪರಿಣಮಿಸಿತು.

ಆದರೆ ಕನ್ನಡ ರಂಗಭೂಮಿಯ ಇತಿಹಾಸ ಪ್ರಾರಂಭವಾಗುವುದು (1672 ರಿಂದ 1704) ಮೈಸೂರಿನ ದೊರೆ ಚಿಕ್ಕದೇವರಾಜರ ಆಸ್ಥಾನದಲ್ಲಿದ್ದ ಸಿಂಘಿರಾರ್ಯ ಎಂಬ ಕವಿಯಿಂದ ರಚನೆಯಾದ "ಮಿತ್ರವಿಂದಾ ಗೋವಿಂದಾ" ಶ್ರೀ ಹರ್ಷನ ರತ್ನಾವಳಿ ಎಂಬ ಸಂಸ್ಕೃತ ನಾಟಕದ ಕನ್ನಡ ಅನುವಾದ. ನಾಟಕದ ಭಾಷೆ ಹಳೆಗನ್ನಡದಲ್ಲಿದ್ದು ಗದ್ಯರೂಪದಲ್ಲಿದೆ. ನಾಲ್ಕು ದೃಶ್ಯಗಳನ್ನೊಳಗೊಂಡ ಈ ನಾಟಕ ಒಂದು ಸ್ವತಂತ್ರ ಕೃತಿ ಎನ್ನುವಂತೆ ರಚನೆ ಮಾಡಿದ್ದಾನೆ. ಪ್ರೊ. ಕೃಷ್ಣಶಾಸ್ತ್ರಿಗಳು ಬರೆದಂತೆ (ಭಾಷಣ ಲೇಖನಗಳು 2, ಪುಟ 146 ರಿಂದ 157) "ಮಿತ್ರವಿಂದಾ ಗೋವಿಂದ ನಾಟಕ ಕನ್ನಡ ನಾಟಕ ಚರಿತ್ರೆಯಲ್ಲಿ ಒಂದು ಮೈಲುಗಲ್ಲಾಗಿ ನಿಂತಿದೆ." ಬಹುಶಃ ಇದಕ್ಕಿಂತ ಹಿಂದಿನ ನಾಟಕಗಳು ಉಪಲಬ್ಧವಾಗಿಲ್ಲದ ಕಾರಣ ಇದರ ಹಿರಿಮೆ ಹೆಚ್ಚಿರಬಹುದು. ಆದರೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ 'ನಾಟಕ' ಎಂಬ ಮಾತು ಮತ್ತೇ ಮತ್ತೇ ಕೇಳಿಬರುತ್ತದೆ. ಇದಕ್ಕೆ ಶಾಸನಗಳೇ ಆಧಾರ ನಾಟಕಗಳ ವರ್ಣನೆ ನಾಟಕ ಶಾಲೆಗಳ ಮಾತೂ ಬರುತ್ತದೆ.[1]

ಮೈಸೂರಿನ ಕಂಠೀರವ ನರಸರಾಜರ (1638–1659) ಅರಮನೆಯಲ್ಲಿ ಮನೋಹರವಾದ ನಾಟಕ ಶಾಲೆ ಇದ್ದಿತೆಂದು ಆ ರಾಜರ ಚರಿತ್ರೆಯನ್ನು ರಚಿಸಿದ ಗೋವಿಂದ ವೈದ್ಯ ಕವಿ ತನ್ನ ಕಾವ್ಯದಲ್ಲಿ ಹೇಳುತ್ತಾನೆ.

---

[1] ಕರ್ನಾಟಕ ರಂಗಭೂಮಿ ಡಾ. ಎಚ್.ಕೆ. ರಂಗನಾಥ, ಪುಟ–31.

ಕೆಳದಿಯ ವೆಂಕಟಪ್ಪ ನಾಯಕರು (1582 ರಿಂದ 1629) ತನ್ನ "ಇಕ್ಕೇರಿಯ ಮನೆಯೊಳ್ ಚಿತ್ರತರ ರಚನಾ ಕೌಶಲ್ಯದಿಂ ನಾಟಕ ಶಾಲೆಯಂ ನಿರ್ಮಾಣಗಯ್ಯದನ್" ಎಂದು ಲಿಂಗಣ್ಣ ಕವಿಯು ರಚಿಸಿದ 'ಕೆಳದಿ ನೃಪವಿಜಯ'ದಲ್ಲಿ ಕಾಣ ಸಿಗುತ್ತದೆ.

ಅದೇ ರೀತಿ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ರಾಜಧಾನಿಯಲ್ಲಿ ಪಟ್ಟದ ನಾಟಕ ಶಾಲೆಗಳಿದ್ದವು. ಇಕ್ಕೇರಿ, ತಂಜಾವೂರು ಮೊದಲಾದ ಪ್ರಾದೇಶಿಕ ಕೇಂದ್ರಗಳಲ್ಲಿಯೂ (ಸಾಮಂತರ ಮನೆಗಳಲ್ಲಿ) ನವರತ್ನ ಖಚಿತವಾದ ಅಲಂಕಾರಗಳನ್ನು ಹೊಂದಿದ ನಾಟಕ ಶಾಲೆಗಳಿದ್ದವು ಎಂದು ಬಿ.ಎ. ಸಾಲತೊರೆ ಅವರ ಸಂಶೋಧನೆಯಿಂದ ತಿಳಿದು ಬಂದಿದೆ.

ಪಂಚತಂತ್ರದ ಕವಿ ದುರ್ಗಸಿಂಹನ ರಾಣಿಯರಾದ ಮಹಾದೇವಿ, ರೂಪಾದೇವಿಯರು, ಸೀತೆ, ರಾಮರಾಗಿ ಕೃತಕ ನಾಟಕವನ್ನಾಡಿದ ರೀತಿ ತಿಳಿದುಬರುತ್ತದೆ. 9ನೇ ಶತಮಾನದಲ್ಲಿ ಶ್ರೀವಿಜಯನು ರಚಿಸಿದ ಕವಿರಾಜಮಾರ್ಗ (830)ದ ಮೊದಲನೆಯ ಆಶ್ವಾಸದ ಆರನೆಯ ಪದ್ಯದಲ್ಲಿ ನಾಟಕದ ಪ್ರಸ್ತಾಪ ಬಂದಿದೆ.

ವ್ಯಾಕರಣ ಕಾವ್ಯ ನಾಟಕ
ಲೋಕ ಕಳಸಮಯಮಾದಳಂ ಕೃತಿಗಳೊಳಂ
ವ್ಯಾಕುಳಸಲ್ಲದನೇಕ ವಿ
ವೇಕಬೃಹಸ್ಪತಿಯ ನಗರಮಂ ಪುಗುತರ್ಪ್ಪಂ

ಇದರಿಂದ 'ನಾಟಕ' ಎಂಬ ಹೆಸರಿನ ಕಲಾಪ್ರಕಾರ ಸುಮಾರು 9 ಹಾಗೂ 10ನೆಯ ಶತಮಾನಕ್ಕೂ ಮೊದಲಿನಿಂದಲೂ ಇತ್ತೆಂದು ಹೇಳಬಹುದಾಗಿದೆ. ಆದಾಗ್ಯೂ ಕೇವಲ ಸಂಗೀತ ಮತ್ತು ನೃತ್ಯಗಳಿಂದಷ್ಟೇ ಅಂದಿನ ಆಸ್ಥಾನದ ನಾಟಕಗಳು ಸಮಾಧಾನ ಪಟ್ಟುವೇ? ಸಂಭಾಷಣೆಯನ್ನೊಳಗೊಂಡ ಕನ್ನಡ ನಾಟಕಗಳು ಆಸ್ಥಾನದ ನಾಟಕ ಶಾಲೆಯನ್ನು ಆಳಲಿಲ್ಲವೇ? 'ಮಿತ್ರವಿಂದಾ ಗೋವಿಂದ' ನಾಟಕ ಚಿಕ್ಕದೇವರಾಯರ ಆಸ್ಥಾನದಲ್ಲಿ ಆ ರೀತಿ ಪ್ರದರ್ಶಿತಗೊಂಡಿರಬಹುದು. ಆದರೆ ಇದಕ್ಕೆ ಯಾವುದೇ ಖಚಿತ ಆಧಾರ ಸಿಗುವದಿಲ್ಲ.

ಕನ್ನಡ ನಾಡಿನಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ತಾಳಮದ್ದಲೆ, ಗೊಂದಲಿಗೆ ಪ್ರಸಂಗಗಳು, ಕಂಸಾಳೆಯುವರಂತಹ ಕಲೆ ರೂಪಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ತಾಳಮದ್ದಲೆಯಲ್ಲಿ ಪ್ರತ್ಯೇಕ

ಪಾತ್ರಧಾರಿಗಳೇ ಇರುತ್ತಾರೆ. ಗೊಂದಲಿಗರು ಮತ್ತು ಕಂಸಾಳೆಯವರಲ್ಲಿ ಪ್ರತ್ಯೇಕ ಪಾತ್ರಧಾರಿಗಳಿಲ್ಲವಾದರೂ ಕಥೆ ಮುಂದುವರೆಯುವುದು ಸಂವಾದದ ರೂಪದಲ್ಲಿ. ಈ ಬಗೆಯ ಪೌರಾಣಿಕ ಕಥಾ ವೃತ್ತಾಂತಗಳನ್ನು ಹಬ್ಬ ಹರಿದಿನಗಳಲ್ಲಿ, ಜಾತ್ರೆ, ಉತ್ಸವಗಳಲ್ಲಿ ಇಂದಿಗೂ ನಮ್ಮ ಜನ ಆರಾಧನೆಯಲ್ಲಿ ಭಾಗಿಯಾಗುತ್ತಾರೆ. ಕೇವಲ ಕಥನ ಕೃತಿಗಳಾಗಿರದೇ ಪ್ರದರ್ಶನ ಕೃತಿಗಳಿಂದಲೂ ಹಲವು ಕಲಾ ರೂಪಗಳಿಂದಲೂ ಪ್ರಾಚೀನ ಕನ್ನಡ ರಂಗಭೂಮಿ ಪ್ರೇರಣೆ ಪಡೆದಿದೆ.

**ಜನಪದರಲ್ಲಿ ಅರಳಿದ ರಂಗಭೂಮಿ**

"ಉತ್ತರ ಕರ್ನಾಟಕವು ಜನಪದ ರಂಗಭೂಮಿಯ ಸಮೃದ್ಧ ನೆಲೆಯಾಗಿದೆ. ಜನಪದ ರಂಗಕಲೆಯ ನಾಲ್ಕಾರು ಪ್ರಕಾರಗಳು ಇಲ್ಲಿ ಜನ್ಮ ತಳೆದಿವೆ. ಅಷ್ಟೇ ಅಲ್ಲ ಸಾಮಾಜಿಕ ವಸ್ತು ಸಣ್ಣಾಟಗಳ ರೂಪದಲ್ಲಿ ರಂಗ ಪ್ರದರ್ಶಣಕ್ಕೆ ಪ್ರವೇಶ ಪಡೆದದ್ದು ಈ ಭಾಗದಲ್ಲಿಯೇ. ಪರಂಪರೆಯಿಂದ ಹೇಗೋ ಹಾಗೆಯೇ ಪ್ರಯೋಗದ ದೃಷ್ಟಿಯಿಂದಲೂ ಉತ್ತರ ಕರ್ನಾಟಕಕ್ಕೆ ಜನಪದ ರಂಗ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವಿದೆ.[2]

ಜಾನಪದ ರಂಗಭೂಮಿಯೆಂದರೆ ಅದೊಂದು ಜನಸಾಮಾನ್ಯರ ಮನರಂಜನೆ, ಮನೋವಿಕಾಸಕ್ಕಾಗಿ ಮೈತಳೆದ ಗ್ರಾಮೀಣ ರಂಗಭೂಮಿ ಎಂದು ವಿವರಿಸಲಾಗಿದೆ. ಪಂಡಿತರ ಹಾಗೂ ಶ್ರೀಮಂತರ ಮನೋರಂಜನೆಯ ಸಲುವಾಗಿ ಮೈವೆತ್ತ ರಾಜರ ಆಸ್ಥಾನಗಳಲ್ಲಿನ ರಗಭೂಮಿಗಿಂತ ಇದು ಬೇರೆಯಾದುದು. ಇದನ್ನು 'ಹಳ್ಳಿಯ ನಾಟಕ ರಂಗ'ಎನ್ನಬಹುದು. ವೃತ್ತಿರಂಗಭೂಮಿ ಹಾಗೂ ವಿಲಾಸಿರಂಗಭೂಮಿಗೆ ಈ ಹಳ್ಳಿಯ ರಂಗಮಂಚವೇ ಪ್ರೇರಕಶಕ್ತಿಯಾಗಿದೆ.[3]

ಇಂದಿಗೂ ಪ್ರಚಲಿತವಿರುವ ದೊಡ್ಡಾಟ, ಸಣ್ಣಾಟ, ಬಯಲಾಟ, ಯಕ್ಷಗಾನ, ಯಲ್ಲಮ್ಮನ ಕುಣಿತ, ಗೊರವರ ಕುಣಿತ, ಪೂಜಾ ಕುಣಿತ, ಪುರವಂತರ ಕುಣಿತ, ರಾಧಾನಾಟ, ಸಂಗ್ಯಾಬಾಳ್ಯಾನಾಟ, ತೊಗಲುಗೊಂಬೆಯಾಟ ಈ ಎಲ್ಲಾ ಜನಪದ ಆಟಗಳು ರಂಗಭೂಮಿ ಬೆಳೆದು ಬರಲು ಮೂಲತಾಯಿಬೇರು. ಇದನ್ನೆಲ್ಲಾ ನೋಡಿದಾಗ ನಮ್ಮ ಜನಪದ ರಂಗಭೂಮಿಗೆ ತನ್ನದೇ ಆದ ಒಂದು ವಿಶಿಷ್ಟ ಪರಂಪರೆ ಇರುವುದು ಗೊತ್ತಾಗುತ್ತದೆ. ಅಷ್ಟೇ ಅಲ್ಲ. "ಜನಪದ ರಂಗಭೂಮಿಯ ಪ್ರದರ್ಶನಗಳನ್ನು ಏರ್ಪಡಿಸಿ ಅದರ ಪರಿಣಿತ ಕಲಾವಿದರನ್ನು ರಾಜರು ಸನ್ಮಾನಿಸುತ್ತಿದ್ದರು ಎಂಬುದಕ್ಕೆ 1812ರಲ್ಲಿ ಮುಮ್ಮಡಿ ಕೃಷ್ಣರಾಜರು ಧರ್ಮಸ್ಥಳದ ಹೆಗ್ಗಡೆಯವರಿಗೆ ಬರೆದು ಅಲ್ಲಿಂದ ಒಂದು

---

[2] ಡಾ. ಕೆ.ಆರ್. ದುರ್ಗಾದಾಸ, 'ಬಳ್ಳಾರಿ ಜಿಲ್ಲೆಯ ಬಯಲಾಟಗಳು,' ಸಮತಾ ಪ್ರಕಾಶನ, 1996, ಪುಟ–35–36.

[3] ಡಾ. ಎಚ್. ಕೆ. ರಂಗನಾಥ, 'ಕರ್ನಾಟಕ ರಂಗಭೂಮಿ,' ಪುಟ–51.

'ಯಕ್ಷಗಾನಮೇಳ'ವನ್ನು ಆಸ್ಥಾನಕ್ಕೆ ಕರೆಯಿಸಿಕೊಂಡು ಪೋಷಿಸಿದುದೂ[4] (ಮೂಲ ಪತ್ರವನ್ನು ಮುಳಿಯ ತಿಮ್ಮಪ್ಪನವರು ತಮ್ಮ 'ಪಾರ್ತಿಸುಬ್ಬ' ಎಂಬ ಪುಸ್ತಕದಲ್ಲಿ ಪುಟ 121ರಲ್ಲಿ ಹೇಳಿದ್ದಾರೆ). ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಬಿದನೂರಿನ ವೀರಭದ್ರನಾಯಕನು 'ದಶಾವತಾರ' ನಾಟಕವೊಂದನ್ನು ಬಿಜಾಪೂರದ ಬಾದಷಹನ ಸಮ್ಮುಖದಲ್ಲಿ ಆಡಿಸಿತೋರಿಸಿ ರಂಜನೆಗೊಂಡ. ಆತನಿಂದ ತನ್ನ ಶತ್ರುಗಳನ್ನು ಓಡಿಸಲು ನೆರವು ಪಡೆದನಂತೆ.

ಹೀಗೆ ಜಾನಪದ ರಂಗಭೂಮಿಯೆಂದರೆ ಸಾಮಾನ್ಯ ಜನರ ಮನರಂಜನೆಗಾಗಿ ಮೈತೆಳೆದಿದೆ. ಯಾವುದೇ ದೇಶದ ರಂಗಭೂಮಿಗೆ ಈ ಜನಪದ ರಂಗಭೂಮಿಯೇ ಪೂರಕ ಪ್ರೇರಕ. ಜನಪದ ರಂಗಭೂಮಿ ಎಂದಾಗ ಅಲ್ಲಿ ಹಾಡು ಕುಣಿತಗಳೇ ಮುಖ್ಯವಾಗಿರುತ್ತದೆ. ಈ ಹಾಡು ನೃತ್ಯ ದೇವತಾರಾಧನೆಯಿಂದಲೇ ಪ್ರಾರಂಭವಾಗುತ್ತದೆ. ದೇವರನ್ನೂ, ದೆವ್ವಗಳನ್ನೂ ಆರಾಧಿಸುವ ಸಾಮಾನ್ಯ ಸಂಪ್ರದಾಯ ಹಳ್ಳಿಗಳಲ್ಲಿ ಅದರಲ್ಲೂ ಮಲೆನಾಡಿನ ಬೆಟ್ಟ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಮಳೆ, ಗುಡುಗು, ಮಿಂಚು, ಪ್ರವಾಹ ಇವೆಲ್ಲವೂಗಳಿಗೆ ನೈಸರ್ಗಿಕ ಶಕ್ತಿಯೇ ಕಾರಣ. ಅವುಗಳಿಂದ ರಕ್ಷಣೆ ಪಡೆಯುವಗೋಸ್ಕರ ಅವುಗಳನ್ನು ಒಲಿಸಿಕೊಳ್ಳುವಗೋಸ್ಕರ ಮಾನವ ಅವುಗಳ ಆರಾಧನೆ ಮಾಡತೊಡಗಿದಾಗ ಅದರಲ್ಲಿ ಅನುಕರಣವೂ ಅಡಗಿ ನಾಟಕ ಹುಟ್ಟಿರಬಹುದು ಎಂಬುದು ಕೆಲವರ ಅಭಿಮತ. (ಆದರೆ ಈ ಮೊದಲೆ ನಾನು "ರಂಗಭೂಮಿ ಎಂದರೆ ಕೇವಲ ಅನುಕರಣ ಮತ್ತು ರಂಜನೆ ಅಷ್ಟೇ ಅಲ್ಲ, ಬುದ್ಧಿಶಕ್ತಿ ಮತ್ತು ಕಲ್ಪನಾಶಕ್ತಿಯ ಒಂದು ಪ್ರತಿಸೃಷ್ಟಿ" ಎಂಬುದಂತು ನಾವು ಒಪ್ಪಿಕೊಳ್ಳಲೇಬೇಕು) ಅದರಲ್ಲಿ ಭೂತಾರಾದನೇ ಅತಿ ಪ್ರಾಚೀನವಾದ ಉಪಾಸನಾ ಪದ್ಧತಿಯಾಗಿದೆ. ಇಂದಿಗೂ ಕೂಡಾ ಕನ್ನಡ ನಾಡಿನ ಕರಾವಳಿಯಲ್ಲಿ ಈ ಭೂತಾರಾಧನೆ ಪದ್ಧತಿ ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಜೀವಂತವಾಗಿರುವುದನ್ನು ನೋಡಿದರೆ ಆಶ್ಚರ್ಯವಾಗಬಹುದು. ಅದಕ್ಕೆ ಕಾರಣವೂ ಇಲ್ಲದೆ ಇಲ್ಲ; ಸಹ್ಯಾದ್ರಿಯ ಮಡಿಲಲ್ಲಿ ವಾಸಿಸುವ ಜನರಿಗೆ ಒಂದೆಡೆ ನಿಸರ್ಗ ಕಣ್ಣಿಗೆ ಹಬ್ಬವನ್ನು ಉಣಬಡಿಸಿದರೆ ಇನ್ನೊಂದೆಡೆ ಎದೆಸೀಳುವ ಗೊಂಡಾರಣ್ಯ ರೌದ್ರರಮಣಿಯತೆಯ ತವರು. ಆ ಕರಾವಳಿ ಯಾವುದೋ ದುಷ್ಟಶಕ್ತಿಗಳಿಗೆ ನೆಲೆಯಾಗಿದೆ ಎಂಬ ನಂಬುಗೆ ಅಲ್ಲಿನ ಜನತೆಗೆ. ಅಷ್ಟೆ ಅಲ್ಲ; ಹಲವಾರು ಜನ ಬುದ್ಧಿ ಜೀವಿಗಳೆನಿಸಿಕೊಂಡವರೆ ಇದರ ಕುರಿತು ಮೈ ನವಿರೇಳಿಸುವ ರೋಚಕ ಕಥೆಗಳನ್ನು ಹೇಳುತ್ತಾರೆ. ಅಲ್ಲಿನ ಮೂಲ ನಿವಾಸಿಗಳು ನಂಬಿಕೊಂಡಿರುವ ಜಟ್ಟಿಗ, ನಾಗ, ಕಲ್ಕುಡ, ಲಕ್ಕೇಸರಿ ಮೊದಲಾದ ಹೆಸರುಗಳ ಸುಮಾರು ದುಷ್ಟಶಕ್ತಿಗಳು ಅಲ್ಲಿವೆ. ಈ ದುಷ್ಟಶಕ್ತಿಗಳ ಆರಾಧನೆಗೆ ನೃತ್ಯವೇ ಒಂದು ಸಾಧನವಾಗಿ ಉಳಿದುಕೊಂಡು ಬಂದಿದೆ.

---

[4] ಕರ್ನಾಟಕ ರಂಗಭೂಮಿ, ಡಾ. ಎಚ್. ಕೆ. ರಂಗನಾಥ, ಪುಟ–43.

ಇನ್ನು ಉತ್ತರ ಕರ್ನಾಟಕದ ಹಲವಾರು ನೃತ್ಯ ಪ್ರಕಾರಗಳಲ್ಲಿ 'ಪುರವಂತರ ಕುಣಿತ' ಪ್ರಮುಖವಾಗಿದೆ. ವೀರಭದ್ರ ದೇವರ ಆರಾಧಕರಾಗಿರುವ ಇವರು ಮದುವೆ ಮುಂತಾದ ಮಂಗಳ ಕಾರ್ಯಗಳ ಸಂದರ್ಭದಲ್ಲಿ ವೀರಾವೇಶದಿಂದ ಕುಣಿಯುತ್ತಾ ಕೈಯಲ್ಲಿ ತ್ರಿಶೂಲ ಹಿಡಿದು ವೀರಭದ್ರ ದೇವರ ಮಹಿಮೆಯನ್ನು ಕುರಿತು ಒಡಪು ಹೇಳುತ್ತ ಅಹಹ ವೀರ ಅಹಹ ರುದ್ರ ಎಂದು ಉಗ್ಗಡಿಸುತ್ತಾರೆ. ಶಿವನ ಇಪ್ಪತ್ತೈದು ಅವತಾರಗಳಲ್ಲಿ ವೀರಭದ್ರನ ಅವತಾರವೂ ಒಂದು.

ಅದೇ ರೀತಿ ಉತ್ತರ ಕರ್ನಾಟಕದ ಇನ್ನೊಂದು ಪ್ರಮುಖ ನೃತ್ಯ ಎಲ್ಲಮ್ಮನ ಕುಣಿತ, ಬೆಳಗಾಂವಿ ಜಿಲ್ಲೆಯ ಸವದತ್ತಿ ಯಲ್ಲಮ್ಮನ ಉಪಾಸಕರಾದ ಇವರು ನೀರು ತುಂಬಿದ ತಾಮ್ರದ ಬಿಂದಿಗೆಗೆ ಎಲ್ಲಮ್ಮನ ಬೆಳ್ಳಿಯ ಮೂರ್ತಿಯನ್ನು (ಮುಖ)ಕಟ್ಟಿ (ಅರಿಸಿನ, ಕುಂಕುಮ, ಹೂ, ಬಳೆ, ಮುಡಿಸಿ) ತಲೆಯ ಮೇಲೆ ಹೊತ್ತು ಕುಣಿಯುತ್ತಾರೆ. ಇವರಿಗೆ "ಏಳುಕೊಳ್ಳದ ಎಲ್ಲಮ್ಮನ ಜೋಗತಿಯರು" ಎಂದು ಕರೆಯುತ್ತಾರೆ. ಇವರು ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡಿರುತ್ತಾರೆ. ಗೆಜ್ಜೆಯ ಸದ್ದಿಗೆ ತಕ್ಕಂತೆ ಹೆಜ್ಜೆಗಳ ಕುಣಿತ, ಈ ಕುಣಿತಕ್ಕೆ ತಕ್ಕಂತೆ ಹಿಮ್ಮೇಳದಲ್ಲಿ ಚೌಡಿಕೆ ಎಲ್ಲವೂ ಮುಪ್ಪುರಿಗೊಂಡು ಕೆಲವರಿಗೆ ಭಕ್ತಿಯ ಪರಾಕಾಷ್ಠತೆಯನ್ನುಂಟು ಮಾಡಿದರೆ ಇನ್ನೂ ಕೆಲವರಿಗೆ ಮನರಂಜನೆಯ ಸಾಧಕವಾಗಿರಬಹುದು.

**ಯಕ್ಷಗಾನ:**

ರಂಗಭೂಮಿಗೆ ಪ್ರೇರಣೆ ನೀಡಿದ ಇನ್ನೊಂದು ಪ್ರಮುಖ ಆಟ ಯಕ್ಷಗಾನ. ಇದು ಉತ್ತರ ಕನ್ನಡ, ದಕ್ಷಿಣ ಕನ್ನಡ ಹಾಗೂ ಶಿವಮೊಗ್ಗ, ಚಿಕ್ಕಮಂಗಳೂರು ಜಿಲ್ಲೆಗಳಲ್ಲಿ ಸುಮಾರು ಹದಿನಾರನೇ ಶತಮಾನದಿಂದಲೇ ಕಂಡು ಬರುವ ಒಂದು ಪ್ರಮುಖ ಕಲೆ. ವಿಷ್ಣುವಿನ ಹತ್ತು ಅವತಾರಗಳಿಗೆ ಸಂಬಂಧಿಸಿದ ವೈಷ್ಣವ ಕಥಾ ವಸ್ತುಗಳೇ ಯಕ್ಷಗಾನದಲ್ಲಿ ಹೆಚ್ಚಾಗಿರುವುದರಿಂದ ದಶಾವತಾರದಾಟವೆಂದು, ಭಾಗವತನೇ ನಾಟಕದ ನಿರ್ದೇಶಕನಾಗಿ ಕೇಂದ್ರ ಸ್ಥಾನದಲ್ಲಿರುವುದರಿಂದ ಭಾಗವತರಾಟವೆಂದೂ ಕರೆದಿರಲಿಕ್ಕೆ ಸಾಕು. ಈ ಯಕ್ಷಗಾನವು ತನ್ನದೇ ಆದ ಹಳಮೆಯನ್ನು ಹೊಂದಿದೆ. ತಿಮ್ಮರಸನು 1665ರಲ್ಲಿ ಯಕ್ಷಗಾನ ಪ್ರಬಂಧವೊಂದನ್ನು ರಚಿಸಿದನೆಂದು ನಂಬಲಾಗಿದೆ. 'ಯಕ್ಷಗಾನ' ಕರ್ತೃ ಶಿವರಾಮ ಕಾರಂತರು ತಮಗೆ 1564 ರಲ್ಲಿ ರಚಿತವಾದ ಯಕ್ಷಗಾನದ ಕೃತಿಯೊಂದು ದೊರೆತಿದೆಯೆಂದೂ, ಕುರುಗೋಡಿನಲ್ಲಿ ಅದಕ್ಕಿಂತ ಪ್ರಾಚೀನವಾದ ಶಾಸನವೊಂದು ಯಕ್ಷಗಾನದ ಪ್ರಸ್ತಾಪ ಮಾಡಿದೆಯೆಂದೂ ಹೇಳಿದ್ದಾರೆ. ಇದನ್ನೆಲ್ಲಾ ನೋಡಿದಾಗ 16ನೆಯ ಶತಮಾನದ ಹೊತ್ತಿಗೆ ಯಕ್ಷಗಾನ ಜಾನಪದ ರಂಗದ ಒಂದು ಪ್ರಮುಖ ಆಕರ್ಷಣೆಯಾಗಿತ್ತು. ಯಕ್ಷಗಾನಕ್ಕೆ ಯಾವುದೇ ಒಂದು ಸುಸಜ್ಜಿತವಾದ ರಂಗ ಸಜ್ಜಿಕೆ

ಇರುವುದಿಲ್ಲ. ಬಯಲೇ ಅವರಿಗೆ ರಂಗಸ್ಥಳ. ಬಿದಿರು ಕಂಬಗಳಿಗೆ ಬಾಳೆ ಕಂಬ ಕಟ್ಟಿ ಮೇಲೆ ಮಾವಿನೆಲೆಗಳ ತೋರಣ ಕಟ್ಟುತ್ತಾರೆ. ಸ್ತ್ರೀ ವೇಷದಿಂದ ಹಿಡಿದು ರಾಕ್ಷಸವೇಷದವರೆಗೆ ಬರುವ ಎಲ್ಲಾ ಪಾತ್ರಗಳು ವೈವಿಧ್ಯಮಯವಾಗಿರುತ್ತವೆ. ಮದ್ದಳೆ ಮುಂತಾದ ಸಂಗೀತ ಪರಿಕರಗಳ ಹಿಮ್ಮೇಳವಿರುತ್ತದೆ. ನವರಸಭರಿತವಾದ ಈ ಯಕ್ಷಗಾನ ನೃತ್ಯವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದೊಂದು ಅಪೂರ್ವವಾದ ಕಲೆಯೆಂದೇ ಹೇಳಬಹುದು. ಪಾತ್ರಗಳ ಭಾವಾಭಿವ್ಯಕ್ತಿಗೆ ಪೋಷಕವಾಗಿ ನೃತ್ಯವನ್ನು ಯಕ್ಷಗಾನ ಬಳಸಿಕೊಂಡಿರುವಷ್ಟು ಉಳಿದ ಯಾವ ಜನಪದ ನಾಟಕ ಪ್ರಕಾರಗಳು ಬಳಸಿಕೊಂಡಿಲ್ಲವೆಂದೇ ಹೇಳಬಹುದು. ಮಹಿಳೆಯರೂ ಇತ್ತಿತ್ತಲಾಗಿ ಯಕ್ಷಗಾನದ ವೇಷವನ್ನು ಹಾಕುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇನ್ನೂ ಈ ಕಲೆ ಜೀವಂತವಾಗಿದೆ.

**ಗೊಂಬೆಯಾಟ :**

ನಿರ್ಜೀವ ವಸ್ತುಗಳಿಗೆ ಜೀವ ತುಂಬಿ ಒಳ್ಳೇಯ ಹಾವಭಾವದಿಂದ ಆಡಿಸುವ ಒಂದು ಅದ್ಭುತವಾದ ಆಟ. ಈ ಗೊಂಬೆಯಾಟಕ್ಕೆ ಪ್ರಾಚೀನ ಇತಿಹಾಸವಿದೆ. ಆದರೆ ಇದರ ಹುಟ್ಟು ಬೆಳವಣಿಗೆಯ ಬಗೆಗೆ ಖಚಿತವಾದ ಯಾವ ಆಧಾರಗಳೂ ನಮಗೆ ಸಿಗುವದಿಲ್ಲ. ಇಜಿಪ್ತಿನ ಪಿರಾಮಿಡ್ಡಗಳಲ್ಲಿ ಚೀನೀಯರ ಧಾರ್ಮಿಕ ವಿಧಿ ವಿಧಾನಗಳಲ್ಲಿ ಗೊಂಬೆಗಳ ಬಳಕೆ ಕಂಡುಬರುತ್ತದೆ.

"ಡಿಂಬದೊಳು ಪ್ರಾಣವಿರಲು ಕಾಂಬ ಸೂತ್ರ ಗೊಂಬೆಯಂತೆ" ಈ ಮಾತು ಕನಕದಾಸರ ಕೀರ್ತನೆಗಳಲ್ಲಿ ಕಂಡುಬರುತ್ತದೆ.

ವಿಜಯನಗರದ ಕಾಲಕ್ಕೆ ಗೊಂಬೆಯಾಟ ತುಂಬ ಪ್ರಸಿದ್ಧಿಯನ್ನು ಪಡೆದಿತ್ತು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಗೊಂಬೆಯಾಟವು ದೊಡ್ಡಾಟ ಹಾಗೂ ಯಕ್ಷಗಾನದ ಪ್ರಭಾವದಿಂದ ಬೆಳೆದು ಬಂದಿದೆ. ಎತ್ತರವಾದ ಒಂದು ಜಗುಲಿಯಾದರೆ ಸಾಕು. ಅದುವೇ ಒಂದು ರಂಗಸ್ಥಳ. ವೇದಿಕೆಯ ಹಿಂಭಾಗಕ್ಕೆ ಒಂದು ಪರದೆ ಇರುತ್ತದೆ. ಪರದೆಯ ಒಂದು ಪಕ್ಕಕ್ಕೆ ಭಾಗವತ ತನ್ನ ಹಿಮ್ಮೇಳದವರೊಂದಿಗೆ ಕುಳಿತಿರುತ್ತಾನೆ. ಗೊಂಬೆಗಳನ್ನು ಆಡಿಸುವವನು ಸೂತ್ರಧಾರ. ಆ ಸೂತ್ರಧಾರನ ಕೈಚಳಕಕ್ಕೆ ತಕ್ಕಂತೆ ಗೊಂಬೆಗಳು ಜೀವ ತುಂಬಿ ಅಭಿನಯಿಸುತ್ತವೆ. ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿದ್ದ ಆ ಸೂತ್ರಧಾರ.

**ಸಣ್ಣಾಟ:**

ದೊಡ್ಡಾಟ ಪೌರಾಣಿಕ ಕಥೆಗಳನ್ನೊಳಗೊಂಡಿದ್ದರೆ, ಸಣ್ಣಾಟ ಭಕ್ತಿ ಪ್ರಧಾನವಾಗಿರುತ್ತದೆ. ರೇಣುಕಾ ಯಲ್ಲಮ್ಮ, ಹೇಮರಡ್ಡಿ ಮಲ್ಲಮ್ಮ ಇವೆಲ್ಲಾ ಒಂದು ಕಾಲಕ್ಕೆ ಉತ್ತರ ಕರ್ನಾಟಕದ ಜನಪ್ರಿಯ ಮನರಂಜನಾ ಸಾಧನಗಳಾಗಿದ್ದವು. ಇಲ್ಲಿನ ರಂಗಸ್ಥಳ, ವೇಷಭೂಷಣ, ಸಂಗೀತ ಪರಿಕರಗಳೆಲ್ಲವೂ ಬಹು ಸರಳ. ನೀತಿ ಪರವಾದ ವಿಚಾರಗಳಿಂದ ಕೂಡಿದ ಈ ಸಣ್ಣಾಟದಲ್ಲಿ ಸಂಭಾಷಣೆಗಳ ನಡುವೆ ಪದ್ಯಗಳೂ ಕಾಣಸಿಗುತ್ತವೆ. ಬಾಯಿಪಾಠ ಮಾಡಿದ ಸಂಭಾಷಣೆ, ಮುಖದ ಬಣ್ಣ, ರಂಗಮಂಚದ ರಚನೆ, ಸ್ತ್ರೀ ವೇಷಧಾರಿಗಳಾದ ಪುರುಷರು ಝುರಿಸೀರೆಯುಟ್ಟು, ಮೈತುಂಬಾ ಆಭರಣ ಧರಿಸಿದ ಪಾತ್ರಗಳೂ ಕಲೆಗೆ ಜೀವ ತುಂಬುತ್ತವೆ. ಇದನ್ನೆಲ್ಲಾ ನೋಡಿದಾಗ ಈ ಸಣ್ಣಾಟ ಹಳ್ಳಿಯ ನಾಟಕ ರಂಗಕ್ಕೆ ನಾಂದಿ ಹಾಡಿತು.

ಉತ್ತರ ಕರ್ನಾಟಕದ ಇನ್ನೊಂದು ಪ್ರಮುಖ ಆಟ ಶ್ರೀ ಕೃಷ್ಣ ಪಾರಿಜಾತ. ಸಣ್ಣಾಟದಲ್ಲಿ ಪ್ರಸಿದ್ಧವಾದುದು. ಗೋಕಾಕ ತಾಲೂಕಿನ ಕುಲಗೋಡ ತಮ್ಮಣ್ಣ, ಜಮಖಂಡಿ ಅಪ್ಪಾಲಾಲ, ಲೋಕಾಪೂರದ ದೇಶಪಾಂಡೆಯವರ ಹೆಸರು ಮರೆಯುವಂತಿಲ್ಲ. ಕುಲಗೋಡ ತಮ್ಮಣ್ಣನವರ, ಜಮಖಂಡಿ ಅಪ್ಪಾಲಾಲನ ಶ್ರೀ ಕೃಷ್ಣಪಾರಿಜಾತಕ್ಕೆ ತನ್ನದೇ ಆದ ಒಂದು ವೈಶಿಷ್ಟ್ಯವಿತ್ತು. ಹಾಸ್ಯ, ಶೃಂಗಾರ ರಸಗಳ, ಸ್ಥಾಯಿಯಾಗಿದ್ದು, ಪೌರಾಣಿಕ ವಸ್ತುವನ್ನೊಳಗೊಂಡಿದ್ದರೂ ನಿಜ ಬದುಕಿಗೆ ಹತ್ತಿರವಾಗಿರುವುದರಿಂದ ಜನಪ್ರಿಯತೆಗೆ ಕಾರಣವಾಯ್ತು.

ಹೀಗೆ ಒಂದು ಕಾಲಕ್ಕೆ ಮೊಗ್ಗಿನಂತಿದ್ದ ಜನಪದ ರಂಗಭೂಮಿ ಹೂವಾಗಿ ಅರಳಿ ಎಲ್ಲರಿಗೂ ಪರಿಮಳದ ರಸವನ್ನು ಉಣಬಡಿಸಿತು. ಇಂದಿನ ಜಾಗತೀಕರಣದ ಕಾಳ್ಗಿಚ್ಚಿಗೆ ಸಿಕ್ಕು ಅದೆಷ್ಟೋ ನಮ್ಮ ಜಾನಪದ ಕುಸುಮಗಳು (ಕಲೆ) ಕಮರಿಹೋಗುತ್ತಲಿವೆ. ಹೋಗಿವೆ ಕೂಡಾ. ಇಂದಿನ ಯುವ ಪೀಳಿಗೆಗೆ ಬಿಡಿ. ನನಗೇ ಸಣ್ಣಾಟ, ದೊಡ್ಡಾಟ, ಗೊಂಬೆಯಾಟ, ಪಾರಿಜಾತ ಗೊತ್ತಿಲ್ಲ. ಚಿಕ್ಕವಳಿದ್ದಾಗ ನೋಡಿದ್ದರ ನೆನಪು ಮಸಕು ಮಸಕಾಗಿದೆ ಅಷ್ಟೆ. ಇವತ್ತು ಆಡುವವರ ನೋಡುವವರ ಸಂಖ್ಯೆಯೂ ಕಡಿಮೆಯಾಗುತ್ತಲಿದೆ. ಆದರೆ ಕರಾವಳಿ ತೀರದ ಯಕ್ಷಗಾನ ಇನ್ನೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದ್ದು, ಅಲ್ಲಿನ ಪ್ರೇಕ್ಷಕನ, ಕಲಾವಿದನ ಅದೃಷ್ಟವೆಂದೇ ಹೇಳಬೇಕು.

**ಭಾರತದಲ್ಲಿ ರಂಗಭೂಮಿ:**

ಇತರ ದೇಶಗಳಿಗೆ ಹೋಲಿಸಿ ನೋಡಿದಾಗ ನಮ್ಮ ಭಾರತದ ರಂಗಭೂಮಿಗೆ ಅಂಥ ಪ್ರಾಚೀನ ಇತಿಹಾಸ ಇರುವುದು ಕಂಡುಬರುವುದಿಲ್ಲ. ಆದರೂ ನಮ್ಮ ಸಾಹಿತ್ಯ ಸಂಸ್ಕೃತಿಗೆ ಮಾತ್ರ ಸಾವಿರ ವರ್ಷದ ಪರಂಪರೆ ಇರುವುದಂತು ನಿಜ. ಅದರ ಹಿನ್ನೆಲೆಯಲ್ಲಿಯೇ ನಾವು ಇವತ್ತು ರಂಗಭೂಮಿಯ ಹೆಜ್ಜೆಗಳನ್ನು ಗುರುತಿಸುವುದು ಕೂಡಾ ಗುರುತರ ಜವಾಬ್ದಾರಿಯಾಗಿದೆ. ನಿಜ ಹೇಳಬೇಕೆಂದರೆ ನಮ್ಮ ಕನ್ನಡ ನಾಟಕ ಪರಂಪರೆಗೆ ಪಾಶ್ಚಾತ್ಯ ರಂಗಭೂಮಿಯೇ ಪೂರಕ ಪ್ರೇರಕ. ಪಾಶ್ಚಾತ್ಯರ ಒಂದು ಋಣ ನಮ್ಮ ಕನ್ನಡದ ಮೇಲೆ ಇತ್ತು. ಪಾಶ್ಚಾತ್ಯ ನಾಟಕ ಸಾಹಿತ್ಯದಿಂದ ಪಡೆದ ಸ್ಫೂರ್ತಿ ಅಪಾರ. ಒಂದೆಡೆ ಬ್ರಿಟಿಷ್‌ರನ್ನು ನಾವು ಟೀಕಿಸಿದರೂ ನಮಗೆ ಗೊತ್ತಿಲ್ಲದಂತೆಯೇ ನಾವು ಅವರಿಗೆ ಋಣಿಯಾಗಿದ್ದೇವೆ. ಅಂದಿನ ಸಾಮಾಜಿಕ, ರಾಜಕೀಯ ಕ್ರಾಂತಿಗಳು ನಮ್ಮ ಸಾಹಿತ್ಯದ ಮೇಲೆ ಪ್ರಭಾವ ಬೀರಿವೆ.

"ಡಾರ್ವಿನ್ನನ ವಿಕಾಸವಾದ ಫ್ರಾಯ್ಡ್‌ನ ಮನೋವೈಜ್ಞಾನಿಕ, ರಶಿಯಾದ ಕ್ರಾಂತಿ ಇವೆಲ್ಲಾ ಮಾನವನ ಜೀವನ ದೃಷ್ಟಿಗೆ ಮಹತ್ವದ ಸಂಗತಿಗಳಾದವು."[5]

ಗಡ್ಡೆ ಗೆಣಸುಗಳನ್ನು ತಿಂದು ಬದುಕುತ್ತಿದ್ದ ಮಾನವ ಹೊಸ ಆವಿಷ್ಕಾರದತ್ತ ಹೆಜ್ಜೆ ಹಾಕುತ್ತ ವೈಜ್ಞಾನಿಕ ಹಿನ್ನಲೆಯಲ್ಲಿ ಚಿಂತಿಸುತ್ತ, ಹೊಸ ಹೊಸ ಸಾಧನ ಸಂಪರ್ಕಗಳ ಅನ್ವೇಷಣೆ ಮಾಡುತ್ತ ಬದಲಾವಣೆಯ ಗಾಳಿಗೆ ಮೈಯೊಡ್ಡುತ್ತಾ ನಡೆದಾಗ ಪಾಶ್ಚಾತ್ಯ ಔದ್ಯೋಗಿಕ ಕ್ರಾಂತಿಯ ಬಿಸಿ ಭಾರತಕ್ಕೆ ತಟ್ಟದೆ ಇರಲಿಲ್ಲ. ಹದಿನೈದನೆ ಶತಮಾನದಲ್ಲಿ ಚೀನ, ಇಜಿಪ್ತ ದೇಶಗಳಿಗೆ ಭವ್ಯವಾದ ಸಾಂಸ್ಕೃತಿಕ ಹಿನ್ನೆಲೆಯಿತ್ತು.

ಹದಿನೆಂಟನೆಯ ಶತಮಾನದಲ್ಲಿ ಪ್ರಾನ್ಸಿನ ವೃತ್ತಿ ಮಂಡಳದವರು 'ಬ್ಯಾಲೆ' ನೃತ್ಯವನ್ನಾಡುತ್ತ ಇಂಗ್ಲೆಂಡಿನ ತುಂಬೆಲ್ಲಾ ಪ್ರವಾಸ ಮಾಡಿದರು. ಹದಿನೇಳನೆಯ ಶತಮಾನದ ಹೊತ್ತಿಗೆ ಇಂಗ್ಲೆಂಡಿನಲ್ಲಿ ಅನೇಕ ನಾಟಕ ಮಂಡಳಿಗಳಿಂದ ಕೂಡಿದ ವೃತ್ತಿರಂಗಭೂಮಿ ಪ್ರಭಾವಶಾಲಿಯಾಗಿತ್ತು. "ಜಪಾನಿನಲ್ಲಿ 1624ರಲ್ಲಿಯೇ 'ಎಡ್ಡೋ' ಎಂಬಲ್ಲಿನ ವೃತ್ತಿನಾಟಕ ಮಂಡಳಿ ಕಾಣಿಸಿಕೊಂಡುದು. 1775–76ರಲ್ಲಿ ಕಲ್ಕತ್ತೆಯಲ್ಲಿ ಈ ಆಂಗ್ಲ ನಾಟಕದ ಪ್ರಭಾವದಿಂದಾಗಿ, ಕಲ್ಕತ್ತೆಯ ಶ್ರೀಮಂತ ಜಮೀನುದಾರರು ವಂತಿಗೆ ಕೂಡಿಸಿ ರಂಗಮಂದಿರವನ್ನು ಪುನಾರಚಿಸಿದ ಮೇಲೆ ನಮ್ಮ ದೇಶದ ವೃತ್ತಿನಾಟಕ ಮಂದಿರ ಹುಟ್ಟಿತೆನ್ನಲಾಗಿದೆ."[6]

---

[5] ಡಾ. ಕೆ. ಮರುಳಸಿದ್ದಪ್ಪ, 'ಆಧುನಿಕ ಕನ್ನಡ ನಾಟಕ,' ಪುಟ–94

[6] ಡಾ. ಎಚ್. ಕೆ. ರಂಗನಾಥ, 'ಕರ್ನಾಟಕ ರಂಗಭೂಮಿ,' ಪುಟ–117.

ಇಂಗ್ಲೆಂಡಿನಿಂದ ಬಂದು ಕಲ್ಕತ್ತೆಯಲ್ಲಿ ನೆಲಸಿದ ವ್ಯಾಪಾರಿ ಸಂಸ್ಥೆಯ ಕಲಾವಿದರು ಕೂಡಿ ಆಡುತ್ತಿದ್ದ ನಾಟಕ ಪ್ರದರ್ಶನಗಳನ್ನು ನೋಡಿದ ಶ್ರೀಮಂತ ಜಮೀನದಾರರು ಬಂಗಾಲಿ ನಾಟಕಗಳನ್ನು ಆಡಲು ರಂಗಮಂಚನ್ನು ಸ್ಥಾಪಿಸುವ ಪ್ರಯತ್ನ ನಡೆಸಿದರು. ಅದರ ಫಲವಾಗಿ 1835 ರಲ್ಲಿ ಸುಮಾರು ಎರಡು ಲಕ್ಷ ರೂಪಾಯಿಯ ಬಾರಿ ವೆಚ್ಚದಲ್ಲಿ ರಂಗ ಮಂದಿರ ಪ್ರಾರಂಭವಾಯ್ತು. ಆ ರಂಗಮಂಟಪದಲ್ಲಿ "ವಿದ್ಯಾಸುಂದರ" ಎಂಬ ನಾಟಕ ಪ್ರಯೋಗವಾಯ್ತು. ಅಂತೂ ಬಂಗಾಳಿ ರಂಗಭೂಮಿಯನ್ನು ಉಳಿಸಿಕೊಂಡು ಬಂದ ಕೀರ್ತಿ ಕಲ್ಕತ್ತೆಯ ಜನರಿಗೆ ಸಲ್ಲಬೇಕು.

ಆದರೆ ಮೊದಮೊದಲು ಈ ನಾಟಕಕ್ಕೆ ಮುಕ್ತ ಪ್ರವೇಶ ಇರಲಿಲ್ಲ. ಶ್ರೀಮಂತರಿಗೆ ಹಾಗೂ ಅವರ ಕುಟುಂಬದವರಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಕಾಲ ಬದಲಾದಂತೆ ನಟರಿಗೆ ಸಂಬಳ ಕೊಡುವ ಪರಿಪಾಠ ಬೆಳೆದಂತೆ ಕೇಳಿದವರಿಗೆಲ್ಲ ಟಿಕೆಟ್ ಮಾರುವ ವ್ಯವಸ್ಥೆಯೂ ಜಾರಿಯಲ್ಲಿ ಬಂತು. 1872ರಲ್ಲಿ 'ರಾಷ್ಟ್ರೀಯ ನಾಟಕರಂಗ'ವು ಹುಟ್ಟಿಕೊಂಡಿತು. ಸಮಗ್ರ ಭಾರತ ಸಾಂಸ್ಕೃತಿಕವಾಗಿ ಒಂದುಗೂಡಿತು.

ಆದರೆ ಕಲ್ಕತ್ತೆಯಲ್ಲಿ ಇರುವಂತ ಆಂಗ್ಲೋ ಇಂಡಿಯನ್ ವರ್ಚಸ್ಸು ಮುಂಬಯಿಯಲ್ಲಿ ಇರಲಿಲ್ಲ. ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಬೆಂಗಳೂರಿಗಿಂತ ಮುಂಬಯಿಯಲ್ಲಿಯೇ ಕನ್ನಡಿಗರ ಸಂಖ್ಯೆ ಹೆಚ್ಚಾಗಿದೆ. ಈ ದೃಷ್ಟಿಯಿಂದಲೇ ಮುಂಬಯಿಯಂಥ ದೊಡ್ಡ ನಗರದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು ಹೆಚ್ಚಾಗಿ ನಡೆಯುತ್ತಿರಬಹುದು. ಜನಸಂಖ್ಯೆ ಒಂದೇ ಅಲ್ಲ; ಅಲ್ಲಿರುವ ಕನ್ನಡ ಮನಸ್ಸುಗಳು ಇದಕ್ಕೆ ಕಾರಣವಾಗಿರಬಹುದು. ಮುಂಬಯಿಯಲ್ಲಿ ಕನ್ನಡಕ್ಕೆ ಸಂಬಂಧಿಸಿದಂತೆ ಏನಿಲ್ಲವೆಂದರೂ ನೂರಾರು ಸಂಘ ಸಂಸ್ಥೆಗಳಿವೆ. ಅದಕ್ಕೆಂದೆ ಇನ್ನೂವರೆಗೂ ಅಲ್ಲಿ ರಂಗಭೂಮಿ ಜೀವಂತವಾಗಿದೆ. ಅದರಲ್ಲೀ ಮರಾಠಿ ರಂಗಭೂಮಿ ಜನಮನದಲ್ಲಿ ಬೇರೂರಿದೆ. ಒಂದೊಂದು ಥಿಯೇಟರ್‌ನಲ್ಲಿ ಮೂರ್‍ನಾಲ್ಕು ಪ್ರಯೋಗಗಳೂ ನಡೆಯುತ್ತಿದ್ದು ಟಿಕೆಟ್ ಸಿಗುವುದು ದುರ್ಲಬವಾಗಿರುವಾಗ ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿಯೂ ಕನ್ನಡ ರಂಗಭೂಮಿಯ ಬಗ್ಗೆ ಕಳಕಳಿ, ಕಾಳಜಿ, ಅಲ್ಲಿನ ಕೆಲವು ಕನ್ನಡಿಗರಲ್ಲಿ ಕಂಡುಬರುತ್ತಲಿರುವುದು ಹೆಮ್ಮೆಯ ವಿಷಯ. ಅಂಥ ದೊಡ್ಡ ಶಹರದಲ್ಲಿ ಜನ ಕನ್ನಡ ನಾಟಕ ನೋಡಲು ಬರುವಂತೆ ಮಾಡಿದ್ದಾರೆ.

ಮುಂಬಯಿಯಲ್ಲಿ ಮರಾಠಿ ರಂಗಭೂಮಿ ಪ್ರಭಲವಾಗಿದ್ದರೂ ಅಲ್ಲಿನ ಕನ್ನಡ ನಿರ್ದೇಶಕರು ಕನ್ನಡ ರಂಗಭೂಮಿಗೆ ಪ್ರತ್ಯೇಕವಾದ ಅಸ್ತಿತ್ವವಿರುವಂತೆ ನೋಡಿಕೊಂಡಿದ್ದಾರೆ. ಆರ್. ಡಿ. ಕಾಮತ್, ಕೆ. ಜೆ. ರಾವ್, ಶ್ರೀಪತಿ ಬಲ್ಲಾಳ, ಕಿಶೋರಿ ಬಲ್ಲಾಳ್, ಮೈಸೂರು ಅಸೋಸಿಯೇಷನ್ನಿನ ಮಂಜುನಾಥಯ್ಯನವರು ಮೊದಲಾದ ನಿರ್ದೇಶಕರು ಕನ್ನಡ ರಂಗಭೂಮಿಗಾಗಿ ದುಡಿಯುತ್ತಿದ್ದಾರೆ.

ದೆಹಲಿಯಲ್ಲೊಂದು ರಾಷ್ಟ್ರೀಯ ನಾಟಕಶಾಲೆಯೇನೋ ಇದೆ. ಆದರೆ ಅಲ್ಲಿ ಕನ್ನಡಿಗರಿಗೆ ಪ್ರಾಶಸ್ತ್ಯ ಕಡಿಮೆ. ಹಿಂದಿ ಬಿಟ್ಟು ಬೇರಾವ ಭಾಷೆಯ ನಾಟಕಗಳಿಗೂ ಅಲ್ಲಿ ಆಸ್ಪದವಿಲ್ಲ. ದಕ್ಷಿಣ ಭಾರತದ ವಿದ್ಯಾರ್ಥಿಗಳಿಗೆ ಇದರಿಂದ ತೊಂದರೆ ತಪ್ಪಿದ್ದಲ್ಲ. ರಾಷ್ಟ್ರೀಯ ನಾಟಕ ಶಾಲೆ ಎಂದಾಗ ಎಲ್ಲಾ ಭಾಷೆಗಳಿಗೂ ಸಮಾನ ಆದ್ಯತೆ ಸಿಗಬೇಕು. ಬಿ. ವಿ. ಕಾರಂತರ ನಂತರ ಮತ್ತೆ ಇಲ್ಲಿವರೆಗೂ ಬೇರಾರು ಕನ್ನಡ ನಿರ್ದೇಶಕರ ಉದಾಹರಣೆ ಕಂಡು ಬರುವುದಿಲ್ಲ. ನಮ್ಮ ರಾಜಧಾನಿಯಲ್ಲಿಯೇ ಕನ್ನಡ ರಂಗಭೂಮಿಯ ಬಗ್ಗೆ ಮಡಿವಂತಿಕೆ ಕಂಡುಬರುತ್ತದೆ.

ಕಲಾವಿದರು ಎಂದರೆ ದೇವರು ಎಂದು ಭಾವಿಸಿತ್ತು ಭಾರತದ ರಂಗಭೂಮಿ. ಇದು ನಮಗೆ ನೋಡಲು ಪ್ರೋಸೆನಿಯಂ ಥೇಟರಿನಲ್ಲಿ ಸಿಗುತ್ತದೆ. ರಂಗಭೂಮಿ ಸ್ವಲ್ಪ ಎತ್ತರದಲ್ಲಿರುತ್ತದೆ. ಪ್ರೇಕ್ಷಕ ಸ್ವಲ್ಪ ಕೆಳಗಿರುತ್ತಾನೆ. ಆದರೆ ಗ್ರೀಕ್ ರಂಗಭೂಮಿ ಹಾಗಲ್ಲ, ಪ್ರೇಕ್ಷಕ ಎತ್ತರದಲ್ಲಿರುತ್ತಾನೆ. ನಾಟಕ ಆಡುವ ಕಲಾವಿದರು ಸ್ವಲ್ಪ ತಗ್ಗಿನಲ್ಲಿ ಅಂದರೆ ಪ್ರೇಕ್ಷಕರಿಗಿಂತ ಕೆಳಗೆ ಇರುತ್ತಾರೆ. ಇದನ್ನು ನೋಡಿದರೆ ಗ್ರೀಕ್, ರಂಗಭೂಮಿಗೆ ಎಂತಹ ಆದ್ಯತೆ ಕೊಟ್ಟಿದೆ ಎಂಬುದು ಗೊತ್ತಾಗುತ್ತದೆ.

# ಅಧ್ಯಾಯ-2

# ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿಯ ಚರಿತ್ರೆ

1) ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿಯ ಹುಟ್ಟು ಮತ್ತು ಬೆಳವಣಿಗೆ

2) ಉತ್ತರ ಕರ್ನಾಟಕದಲ್ಲಿ ಹವ್ಯಾಸಿ ಮತ್ತು ವೃತ್ತಿ ರಂಗಭೂಮಿ

3) ಉತ್ತರ ಕರ್ನಾಟಕದಲ್ಲಿ ವೃತ್ತಿ ರಂಗಭೂಮಿ ನಡೆದು ಬಂದ ದಾರಿ

## 1. ಉತ್ತರ ಕರ್ನಾಟಕದಲ್ಲಿ ರಂಗಭೂಮಿಯ ಹುಟ್ಟು ಮತ್ತು ಬೆಳವಣಿಗೆ :

ರಂಗಭೂಮಿಯ ಪ್ರಾಚೀನತೆಯನ್ನು ಒಂದಡೆ ಗುರುತಿಸಿದರೆ ಇನ್ನೊಂದು ಕಡೆ ಆಧುನಿಕ ರಂಗಭೂಮಿಯ ಉಗಮ ಯಾವಾಗಾಯಿತು? ಕನ್ನಡದಲ್ಲಿ ನವೋದಯ ಕಾವ್ಯ ಪ್ರಾರಂಭವಾಗುವದಕ್ಕೆ ಬಿ.ಎಂ. ಶ್ರೀಯವರ ಇಂಗ್ಲೀಷ ಗೀತೆಗಳು ಪ್ರೇರಣೆ ನೀಡಿದರೆ ಪಾರ್ಸಿ ಕಂಪನಿ ಬೆಂಗಳೂರು ಮತ್ತು ಮೈಸೂರುಗಳಲ್ಲಿ ಕೆಲವು ನಾಟಕಗಳನ್ನು ಪ್ರದರ್ಶಿಸಿದ ಮೇಲೆ ಆಧುನಿಕ ಕನ್ನಡ ರಂಗಭೂಮಿ ಜನ್ಮತಾಳಿತು ಎಂದು ಡಾ. ಬಿ. ವಿ. ವೈಕುಂಟರಾಜು ಅವರು ಹೇಳುತ್ತಾರೆ.

ರಂಗಭೂಮಿ ಉಗಮಕ್ಕೆ ಸಂಬಂಧಿಸಿದಂತೆ ಶ್ರೀರಂಗರ ಅಭಿಪ್ರಾಯವನ್ನು ನೋಡಲಾಗಿ ಬಂಗಾಳದಲ್ಲಿಯೆ ಬ್ರೀಟಿಷರು ಮೊದಲು ಕಾಲಿಟ್ಟಿದ್ದು. ಕಲ್ಕತ್ತೆ ಬ್ರಿಟಿಷರ ರಾಜಧಾನಿಯಾಗಿತ್ತು ಆದ್ದರಿಂದ ಅಲ್ಲಿ ಬ್ರೀಟಿಷರ ಪ್ರಭಾವ ಮೊದಲೇ ಇತ್ತು ಎಂದರೆ ಆಶ್ಚರ್ಯವೇನೋ ಇಲ್ಲಾ. "ನಮ್ಮಲ್ಲಿ ನಿಜವಾಗಿ ಪ್ರಭಾವ ಬೀರಿದ್ದು ಇಂಗ್ಲೀಷ ನಾಟಕಗಳೂ ಅಲ್ಲಾ, ಬಂಗಾಳಿ ರಂಗಭೂಮಿಯೂ ಅಲ್ಲ, ಇಂಗ್ಲೀಷ ಕಲಿತ ಭಾರತಿಯರಿಗಲ್ಲದೆ ಮಿಕ್ಕ ಭಾರತಿಯರಿಗೆ ಕೂಡ ಇದು ಆಕರ್ಷಕವಾಗುವಂತೆ ಉರ್ದುವಿನಲ್ಲಿ ನಾಟಕಗಳನ್ನು ರಚಿಸಿ ಅದನ್ನು ಲಾಭದಾಯಕ ವ್ಯವಸಾಯವನ್ನಾಗಿ ಮಾಡಿಕೊಳ್ಳಲು ಒಂದು ನಾಟಕ ಮಂಡಳಿ ಅಸ್ತಿತ್ವದಲ್ಲಿ ಬಂದಿತ್ತು 19ನೇ ಶತಮಾನದಲ್ಲಿ. ಇದೇ ಹೆಸರಾಂಥ ಪಾರ್ಶಿ ಕಂಪನಿ"[1] ಇವರು ಶೆಕ್ಸಪೀಯರನ ನಾಟಕಗಳನ್ನು ಮಾಡುವಾಗಲೂ ತಮ್ಮ ಪ್ರೇಕ್ಷಕರಿಗೆ ಮೆಚ್ಚುಗೆಯಾಗುವಂತೆ ಬೇಕಾದ ಬದಲಾವಣೆಗಳನ್ನು ಮಾಡಿಕೊಳ್ಳುತ್ತಿದ್ದರು. ಲಾಭವೇ ಮುಖ್ಯ ಉದ್ದೇಶವಾದ್ದರಿಂದ ಭಾಷೆಯನ್ನರಿಯದ ಪ್ರೇಕ್ಷಕರೂ ಮೆಚ್ಚುವಂತೆ ಬಣ್ಣ, ವೇಷ, ಬೆಳಕು, ಸೀನರಿಗಳ ಕೋಲಾಹಲವನ್ನೇ ಎಜ್ಜಿಸುತ್ತಿದ್ದರು. ಇದನ್ನು ನೋಡುವದಕ್ಕೆಂದೆ ಜನ ದುಡ್ಡು ಕೊಟ್ಟು ಬರುತ್ತಿದ್ದರು. ಇದನ್ನೆಲ್ಲಾ ನೋಡಿದಾಗ ಈ ಪಾರ್ಶಿ ಕಂಪನಿಯೇ ನಮ್ಮ ಆಧುನಿಕ ರಂಗಭೂಮಿಯ ಹುಟ್ಟಿಗೆ ಕಾರಣವಾಯಿತು. ಇಲ್ಲವೆ ವರವಾಯಿತು

[1] ಕನ್ನಡ ರಂಗಭೂಮಿಯ ಪುರೋಭಿವೃದ್ಧಿ ಆದ್ಯರಂಗಾಚಾರ್ಯ (ಶ್ರೀರಂಗ)

ಎಂದು ಹೇಳಬಹುದು. ಅತ್ಯಂತ ಬುದ್ದಿವಂತರೆನಿಸಿಕೊಂಡ ಪಾರ್ಶಿಗಳು ಪರ್ಶಿಯಾ ದೇಶದ ಕಲಾಸಂಪ್ರದಾಯವನ್ನು ಮುಂಬಯಿಯಲ್ಲಿ ಬೆಳೆಸಿಕೊಂಡರು ವಿಲಾಸಿ ರಂಗಭೂಮಿಯ ಹುಟ್ಟು ಬೆಳವಣಿಗೆಗೆ ಅವರೆ ಕಾರಣರಾದರು.

ಪಾರ್ಶಿ ಕಂಪನಿಯ ನಾಟಕಗಳನ್ನು ನೋಡಲು ಜನ ಮುಗಿಬೀಳುತ್ತಿದ್ದರು. ಅದನ್ನು ಗಮನಿಸಿದ ಜಯಚಾಮರಾಜೇಂದ್ರ ಅವರು ತಮ್ಮಲ್ಲಿಯೇ ಇಂತಹ ಪ್ರಯೋಗಗಳು ನಡೆಯಬಹುದಲ್ಲವೇ? ಎಂದು ಯೋಚಿಸಿ "ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ" ಪ್ರಾರಂಭಿಸಿದರು. ಅಲ್ಲಿಂದ ಮುಂದಕ್ಕೆ ವೃತ್ತಿರಂಗಭೂಮಿ ಉದಯವಾಯಿತು.

ಹೀಗೆ ಮಧ್ಯಮವರ್ಗದ ಜನತೆಯನ್ನು ಆಸ್ಥಾನದ ಪಂಡಿತರನ್ನು ರಂಜಿಸುವ ಕೊಂಡಿಯಾಗಿ ಬೆಳೆಯುವುದರ ಜೊತೆಗೆ ಎಲ್ಲರನ್ನೂ ತನ್ನೆಡೆಗೆ ಆಕರ್ಷಿಸತೊಡಗಿತ್ತು. ದುಡ್ಡಿಗಾಗಿ ತೋರಿಸುವ ಒಂದು ಕಲೆಯಾಗಿ, ಜನರಿಗೆ ಮನರಂಜನೆಯನ್ನು ನೀಡುವ ಒಂದು ವಿಧಾನವಾಗಿ, ವೃತ್ತಿ ರಂಗಭೂಮಿ ಬೆಳೆದು ಬಂದಿತ್ತು. ಶ್ರೀಮಂತರು ಜಮೀನ್ದಾರರು ರಾಜ ಮಹಾರಾಜರುಗಳು ವೃತ್ತಿ ರಂಗಭೂಮಿಗೆ ಆಶ್ರಯಧಾತರಾಗಿದ್ದರು.

ಆದರೆ ಹತ್ತೊಂಬತ್ತನೇಯ ಶತಮಾನದಲ್ಲಿ ಆರಂಭವಾದ ಮರಾಠಿ ವೃತ್ತಿರಂಗಭೂಮಿ ಅತ್ಯಂತ ಪ್ರಭಾವಶಾಲಿಯಾಗಿ ಪಶ್ಚಿಮ ಭಾರತದಲ್ಲಿ ಬೆಳೆಯತೊಡಗಿತ್ತು. ಆಗಿನ್ನೂ ಕನ್ನಡ ನಾಡಿನಲ್ಲಿ ವೃತ್ತಿ ರಂಗಭೂಮಿ ಅಸ್ತಿತ್ವಕ್ಕೆ ಬಂದಿರಲಿಲ್ಲ. ಜನಪದ ರಂಗಭೂಮಿ ಉತ್ಕರ್ಷ ಸ್ಥಿತಿಯಲ್ಲಿತ್ತು. ಆಗ ಸಾಂಗ್ಲೀಯ ಮಹಾರಾಜರು ಕನ್ನಡದ ಬಯಲಾಟವೊಂದನ್ನು ನೋಡಿ ಅದರಂತೆ ಮರಾಠಿ ನಾಟಕ ರಚನೆಗೆ ಪ್ರೋತ್ಸಾಹ ಕೊಟ್ಟರಂತೆ. ಸಾಂಗ್ಲೀಯ ಆಸ್ಥಾನ ಕೀರ್ತನಕಾರರಾದ ವಿಷ್ಣುಪಂತಭಾವೆಯವರು ನಾಟಕರಚನೆ ಮತ್ತು ಪ್ರದರ್ಶನದ ಹೊಣೆ ಹೊತ್ತು ಒಂದು ಸಂಸ್ಥೆಯನ್ನು ಕಟ್ಟಿ ಮುಂಬೈನಲ್ಲೂ ಕೆಲವು ಪ್ರದರ್ಶನ ಮಾಡಿದ್ದು ತಿಳಿದು ಬರುತ್ತದೆ. ಮುಂದೆ ನಾಲ್ಕೈದು ವರ್ಷಗಳಲ್ಲಿ ತುಂಬಾ ಜನಮನ್ನಣೆಯನ್ನು ಗಳಿಸಿದ ಈ ಸಂಸ್ಥೆ "ಸಾಂಗ್ಲೀಕರ ಸಂಗೀತ ನಾಟಕ ಮಂಡಳಿ" ಎಂಬ ಹೆಸರಿನಿಂದ 1842 ರಿಂದ 1862ರವರೆಗೆ ವಿವಿಧಕಡೆ ಸಂಚರಿಸಿ ನಾಟಕಗಳನ್ನು ಆಡಿತು. ಈ ರೀತಿಯಾಗಿ ಕರ್ನಾಟಕದ ಜನಪದ ರಂಗಭೂಮಿಯಿಂದ ಪ್ರೇರಣೆಪಡೆದುಕೊಂಡು ಮರಾಠಿ ರಂಗಭೂಮಿ ಪಾರ್ಶಿ ಪ್ರಭಾವಕ್ಕೆ ಒಳಗಾಗಿ ಭಾವೆ ನಂತರ ತ್ರಿಲೋಕಕರ ಮತ್ತು ಕಿರ್ಲೋಸ್ಕರರ ಪ್ರಯತ್ನದಿಂದಾಗಿ ಹೊಸ ರೂಪ ಪಡೆಯುತ್ತ ಪ್ರಯೋಗ ಶೀಲತೆಯಿಂದ ಹೊಸತನದತ್ತ ಹೆಜ್ಜೆಹಾಕಿತು.

ಇವರೊಂದಿಗೆ ಈಚಲಕರಂಜಿ ನಾಟಕ ಮಂಡಳಿ, ಕೊಲ್ಲಾಪೂರಕರ ನಾಟಕ ಮಂಡಳಿ, ಗಂಧರ್ವ ನಾಟಕ ಮಂಡಳಿ, ನೂತನ ಸಂಗೀತ ನಾಟಕ ಮಂಡಳಿ, ಬಲವಂತ ಸಂಗೀತ ನಾಟಕ ಮಂಡಳಿ ಹೀಗೆ ಹಲವಾರು ತಂಡಗಳು ಸಂಗೀತ ಮತ್ತು ಪ್ರಬುದ್ಧ ಅಭಿನಯದಿಂದ ಮಹಾರಾಷ್ಟ್ರವಲ್ಲದೆ ಕರ್ನಾಟಕದ ಗಡಿ ಭಾಗದಲ್ಲಿಯೂ ಅಪಾರ ಜನಪ್ರಿಯತೆಗೆ ಒಳಗಾದವು.

"ಹೀಗೆ ಉತ್ತರ ಕರ್ನಾಟಕಕ್ಕೆ ಕಾಲಿಟ್ಟ ಮರಾಠಿ ನಾಟಕ ಮಂಡಳಿಗಳು ಥಳಥಳಿಸುವ ಬೆಳಕು, ನಯನ ಮನೋಹರ ದೃಶ್ಯಗಳು, ಅದ್ದೂರಿಯ ರಂಗಸಜ್ಜಿಕೆಗಳು, ಹೊಸ ಹೊಸ ನಾಟಕಗಳು, ಸುಮಧುರ ಸಂಗೀತ, ಪ್ರಬುದ್ಧ ಅಭಿನಯಗಳಿಂದ ಉತ್ತರ ಕರ್ನಾಟಕದಲ್ಲಿ ಕೋಲಾಹಲವನ್ನೇ ಎಬ್ಬಿಸಿದವು."[2]

ಹೀಗೆ ಉತ್ತರ ಕರ್ನಾಟಕಕ್ಕೆ ಕಾಲಿಟ್ಟ ಮರಾಠಿ ವೃತ್ತಿ ನಾಟಕ ಮಂಡಳಿಗಳು 1850 ರಿಂದ 1880 ಅಂದರೆ ಸುದೀರ್ಘ 30 ವರ್ಷಗಳ (ಮೂವತ್ತು ವರ್ಷ) ಕಾಲ ಉತ್ತರ ಕರ್ನಾಟಕದಲ್ಲಿ ಮೆರೆದವು. ಬಿಜಾಪೂರ, ಹುಬ್ಬಳ್ಳಿ, ಧಾರವಾಡ, ಗದಗ, ಪಟ್ಟಣಗಳಲ್ಲಿ 2–3 ತಿಂಗಳ ತನಕ ನಾಟಕಗಳನ್ನು ಆಡಿದರೆಂದರೆ ಮರಾಠಿ ರಂಗಭೂಮಿ ಅದೆಷ್ಟು ಪರಿಣಾಮ ಬೀರಿತ್ತೆಂಬುದನ್ನು ಊಹಿಸಬಹುದಾಗಿದೆ. ಒಂದು ಪ್ರದರ್ಶನಕ್ಕೆ ರೂ. 1000 ರಿಂದ 1200ರ ವರೆಗೆ ಅದು ಆಗಿನ ಕಾಲದಲ್ಲಿ ಗಳಿಕೆಯಾಗುತ್ತಿತ್ತೆಂದರೆ ಮರಾಠಿ ನಾಟಕಗಳನ್ನು ಜನಮುಗಿಬಿದ್ದು ನೋಡುತ್ತಿದ್ದರೆಂಬುದು ಅರ್ಥವಾಗುತ್ತದೆ. ಇದರಿಂದ ಪ್ರಭಾವಿತರಾದ ಕನ್ನಡದ ಯುವಕರು ಕೂಡಾ ಮರಾಠಿ ನಾಟಕಗಳನ್ನು ಕಲಿತು ಆಡಲು ಶುರುಮಾಡುತ್ತಾರೆ. ಈ ರೀತಿ ಮರಾಠಿಯು ಕನ್ನಡದ ಮೇಲೆ ಮಾಡುತ್ತಿರುವ ಸಾಂಸ್ಕೃತಿಕ ಪರಿಣಾಮಗಳಿಂದ ಕನ್ನಡ ಪ್ರೇಮಿಗಳು ಸಹಜವಾಗಿ ಆತಂಕಕ್ಕೆ ಒಳಗಾಗುತ್ತಾರೆ. ಇವರಲ್ಲಿ ಸಕ್ಕರಿ ಬಾಳಚಾರ್ಯರು ಒಬ್ಬರು. ಶ್ರೀಮಂತ ಉಮಚಗಿ ಲಚ್ಚಪ್ಪ ನಾಯಕ ಎನ್ನುವವರ ಪ್ರೋತ್ಸಾಹದಿಂದ ಶಾಂತ ಕವಿಗಳು (ಸಕ್ಕರಿ ಬಾಳಾಚಾರ್ಯ) 1877ರಲ್ಲಿ ಗದುಗಿನ ಶ್ರೀ ವೀರನಾರಾಯಣ ಪ್ರಸಾದಿತ ಕೃತ ಪುರ ನಾಟಕ ಮಂಡಳಿಯನ್ನು" ಹಲವು ಯುವಕರ ನೆರವಿನಿಂದ ಪ್ರಾರಂಭಿಸಿದರು. ಶಾಂತ ಕವಿಗಳು ಈ ಸಂಸ್ಥೆಗಾಗಿ ನಾಟಕಗಳನ್ನು ಬರೆಯತೊಡಗಿದರು. ಉಷಾ ಹರಣ, ಸುಂದೋಪಸುಂದವದ, ಸೀತಾರಣ್ಯ ಮುಂತಾದ ನಾಟಕಗಳನ್ನು ಅವರಿಗೆ ಬರೆದುಕೊಟ್ಟರು. ಶಾಂತಕವಿಗಳು "ಕೃತಪುರ ನಾಟಕ ಮಂಡಳಿ"ಯ ಮಾಸ್ತರರೂ ಆಗಿದ್ದರು.

ಶಾಂತಕವಿಗಳು ಒಬ್ಬ ಶಾಲಾ ಶಿಕ್ಷಕ ಅವರಿಗೆ ನಾಟಕದ ಹುಚ್ಚು ಎಷ್ಟಿತ್ತೆಂದರೆ ಆಗಿನ ಕಾಲದಲ್ಲಿ ವಾಹನ ಸೌಕರ್ಯ ಇರಲಿಲ್ಲ. ಹೊಂಬಳದಿಂದ ಗದುಗಿಗೆ ರಾತ್ರಿ ಎಮ್ಮೆಯ ಮೇಲೆ ಹೋಗಿ ನಾಟಕದ ತಾಲೀಮು ಮುಗಿಸಿ ಮರುದಿನ ಮತ್ತೆ ತಮ್ಮ ಕರ್ತವ್ಯಕ್ಕೆ ಹಾಜರಾಗುತ್ತಿದ್ದರು. ರಂಗಭೂಮಿಯ ಬಗ್ಗೆ ಅವರಿಗಿರುವ ಆಸಕ್ತಿ ಗೊತ್ತಾಗುತ್ತದೆ. ಈ ವಿಷಯವನ್ನು ಕಿರುತೆರೆಯ ನಟ ಜಗ್ಗು ಜಾದೂಗಾರ ಎಂಬ ಅನ್ವರ್ಥಕ ಹೆಸರನ್ನು ಪಡೆದಂತ ಸಹೋದರ ಜಗದೀಶ ಹಿರೇಮಠ ಅವರನ್ನು ಬೆಂಗಳೂರಿನಲ್ಲಿ ಸಂದರ್ಶಿಸಿದಾಗ (28–11–08) ವಿಷಯ ತಿಳಿದು ಬಂತು.

---

[2] ಡಾ. ರಾಮಕೃಷ್ಣ ಮರಾಠೆ, "ಉತ್ತರ ಕರ್ನಾಟಕ ರಂಗಭೂಮಿ," ಪುಟ–9.

ಮರಾಠಿ ಪತ್ರಿಕೆಗಳು ಇವರ ನಾಟಕವನ್ನು ಕುರಿತು ಹೊಗಳಿ ಬರೆದವು. ಕನ್ನಡವನ್ನು ಕುರಿತು ಅತೀವ ಕಾಳಜಿ ಕಳಕಳಿಯನ್ನು ಹೊಂದಿದ ಸಕ್ಕರಿ ಬಾಳಾಚಾರ್ಯರಿಂದ ಕರ್ನಾಟಕದ ವೃತ್ತಿರಂಗಭೂಮಿ ಉತ್ತಮ ಪ್ರಗತಿಯನ್ನು ಸಾಧಿಸಿತು. ಈ ನಿಟ್ಟಿನಲ್ಲಿ ರಂಗಭೂಮಿಯ ಹಿನ್ನಲೆಯನ್ನು ನೋಡಿದಾಗ ರಂಗಭೂಮಿ ಯಾವುದೆ ಒಂದು ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬೆಳೆದಿಲ್ಲ, ಜನಾಶ್ರಯದಲ್ಲಿ ರಾಜದರ್ಬಾರಿನಲ್ಲಿ ಬೆಳೆದು ಬಂದ ಈ ವೃತ್ತಿರಂಗಭೂಮಿಗೆ ಒಂದು ಶಾಶ್ವತವಾದ ನೆಲೆಯನ್ನು ಒದಗಿಸಿದವರು ಶಾಂತಕವಿಗಳು. ಹಾಗೂ ಹಲಸಿ ಮಂಡಳಿಯ ಶ್ರೀನಿವಾಸ ಕವಿಗಳು. ಆದರೆ ಕೃತಪುರ ನಾಟಕ ಮಂಡಳಿಗಿಂತ ಮೊದಲು ಹಲಸಿ ಮಂಡಳಿ ಇತ್ತೆಂಬುದು ಕೆಲವರ ವಾದ.

ಕೆಲವು ವಿದ್ವಾಂಸರ ಅಭಿಪ್ರಾಯಗಳನ್ನು ಅವಲೋಕಿಸಿದಾಗ ಹೆಚ್ಚಿನ ವಿದ್ವಾಂಸರ ಪ್ರಕಾರ ಗದುಗಿನ ಕೃತಪುರ ನಾಟಕ ಮಂಡಳಿಯು ಹುಟ್ಟಿದ್ದು 1877ರಲ್ಲಿ ಎಂಬುದು ಸಾಮಾನ್ಯ ಅಭಿಪ್ರಾಯವಾದರೂ ಡಾ. ಕೆ. ಮರುಳಸಿದ್ದಪ್ಪನವರು ಮಾತ್ರ ಇದು ಹುಟ್ಟಿದ್ದು 1872 ಎಂದಿದ್ದಾರೆ. ಶಾಂತಕವಿಗಳು ಸ್ವಂತ ತಮ್ಮ ಬಗ್ಗೆ ತಾವೇ ಬರೆದುಕೊಂಡ ಆಧಾರಗಳೂ ಇವೆ. ಹಾಗಾಗಿ ಕೃತಪುರ ನಾಟಕ ಮಂಡಳಿ 1877ರಲ್ಲಿ ಆರಂಭವಾಯ್ತೆಂದು ಒಪ್ಪಿಕೊಳ್ಳುವಂತದ್ದು.

ಆದರೆ ಹಲಸಗಿ ಕಂಪನಿಯ ಬಗ್ಗೆ ಏಕಾಭಿಪ್ರಾಯಗಳಿಲ್ಲ. ಇದು ಶಾಂತಕವಿಗಳ ಕೃತಪುರ ಮಂಡಳಿಯ ಜನಪ್ರೀಯತೆಯ ಪ್ರಭಾವದಿಂದ ಜನಿಸಿತೆಂದು ಕೆಲವರು ಹೇಳುತ್ತಾರೆ. ಯಾವಾಗ ಎಂಬುದನ್ನು ಖಚಿತ ಪಡಿಸಿಲ್ಲ. ಡಾ. ಎಚ್. ಕೆ. ರಂಗನಾಥರು ಹಲಸಗಿ ಮಂಡಳಿಗಿಂತ ಮೊದಲನೇಯದೆಂಬುದನ್ನು ಅಲ್ಲಗಳೆಯುತ್ತ ಇದು 1878-79ರಲ್ಲಿ ಆರಂಭಗೊಂಡು ನಾಟಕಗಳನ್ನಾಡಿ ಸ್ಥಗಿತಗೊಂಡು 1882ರಲ್ಲಿ ಪುನಃ ಆರಂಭಗೊಂಡಿತೆಂದು ಹೇಳುತ್ತಾರೆ. ಇನ್ನೊಬ್ಬ ಹಿರಿಯ ವಿದ್ವಾಂಸರಾದ ಡಾ. ಎನ್ಕೆಯವರು ಕೃತಪುರ ಮಂಡಳಿ ಉಗಮ 1877 ಮತ್ತು ಹಲಸಗಿ ಮಂಡಳಿ ಉಗಮ 1874 ಎಂದು ನಿಖರವಾಗಿ ಹೇಳಿದ್ದಾರೆ. ಆದರೆ ಡಾ. ರಾಮಕೃಷ್ಣ ಮರಾಠೆಯವರು (ಇವರ ಅಭಿಪ್ರಾಯ ಇವರೆಲ್ಲರ ನಂತರದ್ದು) ಹಲಸಗಿ ಮಂಡಳಿ ಹುಟ್ಟಿದ್ದು 1869 ಎಂದು ಅಭಿಪ್ರಾಯ ಪಡುತ್ತಾರೆ. ಮುದವೀಡು ಕೃಷ್ಣರಾಯರು 1929ರಲ್ಲಿ ಮಾಡಿದ ಭಾಷಣದಲ್ಲಿ ಹಲಸಗಿ ಮಂಡಳಿ ಅರವತ್ತು ವರ್ಷಗಳ ಹಿಂದೆ ಹುಟ್ಟಿತೆಂದು ಹೇಳಿದ್ದನ್ನು ಆಧಾರವಾಗಿಟ್ಟುಕೊಂಡು 1869ನೇ ವರ್ಷವನ್ನು ಉಲ್ಲೇಖಿಸಿದ್ದಾರೆ ಅಷ್ಟೇ ಅಲ್ಲ ಇವರು ಬೆಳಗಾಂವಿ ಜಿಲ್ಲೆಯವರಾಗಿದ್ದು ಹಲಸಗಿ ಕಂಪನಿಯಲ್ಲಿ ದುಡಿದ ಕಲಾವಿದರನ್ನು ಕಲಾವಿದರ ಕುಟುಂಬದವರನ್ನು ಸ್ವತಃ ಭೇಟಿ ಮಾಡಿದ್ದಾರೆ. ಜೊತೆಗೆ ಹಿರಿಯ ರಂಗಕಲಾವಿದರಾದ ಏಣಗಿ ಬಾಳಪ್ಪನವರ ಲೇಖನವನ್ನು ಉಲ್ಲೇಖಿಸಿದ್ದಾರೆ. ಹೀಗಾಗಿ ಡಾ. ಮರಾಠೆಯವರ ಅಭಿಪ್ರಾಯ ಒಪ್ಪುವಂತದ್ದಾಗಿದೆ.

ಡಾ. ಎಚ್. ಕೆ. ರಂಗನಾಥರು ಮುದವೀಡರ ಭಾಷಣ ಆಧಾರವಲ್ಲವೆಂದು ಹೇಳಿದ್ದರೂ ಮುದವೀಡು ಕೃಷ್ಣರಾಯರು ಹಲಸಗಿ ಮಂಡಳಿಯ ನಾಟಕಗಳನ್ನು ನೋಡಿದವರೆಂದು ಒಪ್ಪಿಕೊಂಡಿದ್ದಾರೆ. ಹೀಗಾಗಿ ಡಾ. ಮುದವೀಡರು ಮಂಡಳಿಯ ಬಗ್ಗೆ ಸಾಕಷ್ಟು ತಿಳಿದುಕೊಂಡೇ ಹೇಳಿದ್ದರೆಂದು ನಂಬಬಹುದಾಗಿದೆ.

ಆದ್ದರಿಂದ ಹಲಸಗಿ ನಾಟಕ ಮಂಡಳಿಯೇ ಕರ್ನಾಟಕದ ಮೊದಲ ವೃತ್ತಿ ನಾಟಕ ಮಂಡಳಿಯಾದರೂ ಕೃತಪುರ ಮಂಡಳಿಯು ಪಡೆದುಕೊಂಡಷ್ಟು ಮಹತ್ವ ಪಡೆಯಲಿಲ್ಲ ಎಂಬ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಯಾಕೆಂದರೆ ಶ್ರೀನಿವಾಸ ಕವಿಗಳು (ವೆಂಕಣ್ಣಾಚಾರ್ಯರು ಅಗಳಗಟ್ಟಿ) ಈ ಮಂಡಳಿಗೆ ನಾಟಕಗಳನ್ನು ಬರೆದು ಕವಿಗಳೆಂದು, ಈ ಮಂಡಳಿಯು ಶ್ರೀಮತಿ ಪರಿಣಯ, ಮದಲಸಾ ಪರಿಣಯ, ದ್ರೌಪದಿಯ ವಸ್ತ್ರಾಪಹರಣ, ಮೊದಲಾದ ನಾಟಕಗಳನ್ನು ಆಡುತ್ತ ಬೆಳಗಾಂವಿಯಿಂದ ಬಳ್ಳಾರಿಯವರೆಗೆ ಸಂಚರಿಸಿತೆಂಬುದಕ್ಕೆ ಆಧಾರಗಳಿವೆ.

ಕೃತಪುರ ನಾಟಕ ಮಂಡಳಿ ಎರಡನೇಯದು ಅಂದ ಮಾತ್ರಕ್ಕೆ ಅದನ್ನು ಗಡೆಗಣಿಸಬೇಕಿಲ್ಲ. ಕನ್ನಡದ ನೆಲದಲ್ಲಿ ಮರಾಠಿ ನಾಟಕಗಳ ಸಾಂಸ್ಕೃತಿಕ ದಬ್ಬಾಳಿಕೆಯನ್ನು ಮೆಟ್ಟನಿಂತ ಗಮನಾರ್ಹ ವ್ಯಕ್ತಿ ಸಕ್ಕರಿ ಬಾಳಾಚಾರ್ಯರು ಅವರನ್ನು ಹೇಗೆ ತಾನೆ ಮರೆಯಲು ಸಾಧ್ಯ?

ಒಂದೆ ಮಾತಿನಲ್ಲಿ ಹೇಳುವದಾದರೆ ಶಾಂತಕವಿಗಳು ಹಾಗೂ ಶ್ರೀನಿವಾಸಕವಿಗಳು ಪಟ್ಟ ಪರಿಶ್ರಮದ ಫಲವಾಗಿ ನಾಡಿನಾದ್ಯಂತ ರಂಗಚಟುವಟಿಕೆಗಳು ತೀವ್ರಗೊಂಡು ಪ್ರೇಕ್ಷಕರಿಗೆ ಹಬ್ಬದೂಟವನ್ನು ಉಣಬಡಿಸಿದವು.

## ಉತ್ತರ ಕರ್ನಾಟಕದಲ್ಲಿ ಹವ್ಯಾಸಿ ಮತ್ತು ವೃತ್ತಿ ರಂಗಭೂಮಿ :

ಕಾಲ ಬದಲಾದಂತೆ ಮೌಲ್ಯಗಳೂ ಬದಲಾಗಬೇಕು. ಅನಕ್ಷರಸ್ಥನಾದ ಮಾನವ ಅಕ್ಷರಸ್ಥನಾದಾಗ ಅವನಲ್ಲಿಯ ಅಂತಃ ಪ್ರಜ್ಞೆ ಜಾಗೃತಗೊಂಡು ಹೊಸ ದೃಷ್ಟಿ ಹೊಸ ವಿಚಾರಗಳು ಸ್ಫುರಿಸಿ ವಿದ್ಯಾವಂತ ವೈಚಾರಿಕ ಮನೋಭಾವದ ಒಂದು ವರ್ಗವೇ ನಿರ್ಮಾಣವಾಯಿತು. ಈ ವರ್ಗಕ್ಕೆ ಅಥವಾ ಸಮುದಾಯಕ್ಕೆ ಅದೇ ಹಾಡು. ಅದೇ ನೃತ್ಯ, ಅದೇ ಡಬಲ್ ಮೀನಿಂಗ್, ಸಂಭಾಷಣೆ, ಇದನ್ನೆಲ್ಲ ನೋಡಿ, ಕೇಳಿ ಸುಶಿಕ್ಷಿತ ಸಮೂದಾಯಕ್ಕೆ ಬೇಸರ ಮೂಡಿರಬಹುದು. ಹೀಗಾಗಿ ಒಳಗೊಳಗೆ ವೃತ್ತಿರಂಗ ಭೂಮಿಯ ಬಗ್ಗೆ ಅಸಡ್ಡೆ, ತಿರಸ್ಕಾರ ಮೂಡಿರಲಿಕ್ಕೆ ಸಾಕು. ದೇಹ ಎರಡಾದರೂ ಜೀವ ಒಂದೇ ಎನ್ನುವಂತಿದ್ದ ಈ ವೃತ್ತಿ ರಂಗಭೂಮಿಯಿಂದ ಹವ್ಯಾಸಿ ರಂಗಭೂಮಿ ಹೊಸ ಹುಟ್ಟನ್ನು ಪಡೆದು ಪ್ರಜ್ಞಾವಂತ ನಾಗರಿಕರ ಮನರಂಜನೆಯ ಸಾಧನವಾಗಿ ಬೆಳೆದು ಬರುವುದರ ಜೊತೆಗೆ ಅರಿವಿನ ದೀವಿಗೆಯನ್ನು ಹಚ್ಚಿತು.

"ಜೀವನೋಪಾಯಕ್ಕಾಗಿ ಆಶ್ರಯಿಸದೇ ಜನರ ಸಂತೋಷಕ್ಕಾಗಿ ಕಲೆಯನ್ನು ಹವ್ಯಾಸವನ್ನಾಗಿ ಬೆಳೆಸಿಕೊಂಡು ಬಂದ ಒಂದು ಸಮೂದಾಯ" ರಂಗ ಮಾಧ್ಯಮದ ಮೂಲಕ ಸಾಮಾಜಿಕ ಅರಿವನ್ನು ಮೂಡಿಸುವುದು ಇವರ ಉದ್ದೇಶವಾಗಿತ್ತು. ಮನರಂಜನೆ ಇಲ್ಲಿ ಗೌಣ ಎನ್ನುವುದಕ್ಕಿಂತ ಎರಡನೇಯ ಸ್ಥಾನದಲ್ಲಿತ್ತು. ಇದಕ್ಕಾಗಿಯೇ ಶ್ರೀರಂಗ, ಕೈಲಾಸಂರಂತಹ ಮಹಾನ್ ನಾಟಕಕಾರರು ನಾಟಕಗಳನ್ನು ಬರೆಯ ತೊಡಗಿದರು. ಆದರೆ ಇವರು ಬರೆದ ನಾಟಕಗಳನ್ನು ವೃತ್ತಿ ರಂಗಭೂಮಿಯವರು ರಂಗದ ಮೇಲೆ ಪ್ರದರ್ಶಿಸಿಲ್ಲ. ಇವು ಕೇವಲ ಹವ್ಯಾಸಿ ರಂಗಭೂಮಿಗೆ ಮಾತ್ರ ಸೀಮಿತವಾದವು.

ಯಾವುದೇ ಒಂದು ಕಲೆ ಸರ್ವ ಕಾಲಕ್ಕೂ ಜೀವಂತವಾಗಿ ಉಳಿಯಬೇಕಾದರೆ ಎಲ್ಲಾ ವರ್ಗದ ಜನರನ್ನು ಅದು ಆಕರ್ಷಿಸಬೇಕು. ಕೆಲವೇ ವರ್ಗದವರ ಮನತಟ್ಟಿದ ಈ ಹವ್ಯಾಸಿ ರಂಗಭೂಮಿ ಜನಪದರ ಮನ ಮುಟ್ಟಲಿಲ್ಲ. ಅಲ್ಲದೇ ನಗರ ಪ್ರದೇಶಗಳಿಗೆ ಮಾತ್ರ ಸೀಮಿತವಾದ ಇವರ ಅಭಿನಯ ಸಾಮಾನ್ಯರ ಮನೆ ಬಾಗಿಲು ತಟ್ಟಲಿಲ್ಲ.

ಒಂದು ಕಲೆಯ ಯಶಸ್ಸಿಗೆ ಅಭಿನಯ, ಸಂಭಾಷಣೆಯಷ್ಟೇ ಮುಖ್ಯವಾಗುವುದಿಲ್ಲ. ಅದರ ಜೊತೆಗೆ ರಂಗಸಜ್ಜಿಕೆ, ಹಾಡು, ಕಣ್ಣು ಕೋರೈಸುವ ದೀಪದ ವ್ಯವಸ್ಥೆ ಇವುಗಳು ನಾಟಕದ ಯಶಸ್ಸಿಗೆ ಕಾರಣವಾಗುತ್ತವೆ. ಈ ಎಲ್ಲ ಗುಣಗಳು ಕೊಣ್ಣೂರು ಕಂಪನಿಯಲ್ಲಿ ಮತ್ತು ಶಿರಹಟ್ಟಿಯ ವೆಂಕೋಬರಾಯರ ಕಂಪನಿಯಲ್ಲಿಯೇ ನಮಗೆ ನೋಡಲು ಸಿಗುತ್ತಿದ್ದವು. ಹೀಗಾಗಿ ಪ್ರೇಕ್ಷಕ ಮತ್ತು ರಂಗಭೂಮಿಯ ಅವಿನಾಭಾವ ಸಂಬಂಧ ಅಲ್ಲಿ ಇತ್ತು. ಇದನ್ನೆಲ್ಲ ನೋಡಿದಾಗ ಹವ್ಯಾಸಿ ರಂಗಭೂಮಿ ಇಲ್ಲಿಯೂ ಕೂಡ ನಿಶ್ಚಲವಾಗಿದೆ.

ಅದೂ ಅಲ್ಲದೇ ವೃತ್ತಿ ರಂಗಭೂಮಿಯ ಸಂಭಾಷಣೆ ನೇರ ಹಾಗೂ ಸರಳ. ಒಬ್ಬ ದನ ಕಾಯುವ ಹುಡುಗನೂ ಅದರ ಸ್ವಾರಸ್ಯವನ್ನು ಸವಿಯುತ್ತಿದ್ದ. ಆ ಗುಣ ವೃತ್ತಿ ರಂಗಭೂಮಿಗೆ ಸಾಧಿಸಿತ್ತು. "Life is a Art" ಕಲೆಯೇ ಜೀವನ. ಕಲೆ ಯಾರ ಆಸ್ತಿಯೂ ಅಲ್ಲ. ಹೀಗಿದ್ದಾಗ್ಯೂ ಈ ವೃತ್ತಿ ರಂಗಭೂಮಿ ಮತ್ತು ಹವ್ಯಾಸಿ ರಂಗಭೂಮಿ ಕಲಾವಿದರಲ್ಲಿ ದೊಡ್ಡದೊಂದು ಕಂದಕವೇ ಏರ್ಪಾಟಾಯಿತು. ಈ ಬಿರುಕು ಮುಚ್ಚಿದಾಗ ಮಾತ್ರ ಕಲೆಯ ಆರಾಧನೆ ಸಾಧ್ಯ.

ವೃತ್ತಿ ರಂಗಭೂಮಿ ಕೇವಲ ಮನರಂಜೆಯ ಸಾಧನವಾಗಿರದೇ ಒಂದಿಷ್ಟು ಸಮಯ ಪ್ರೇಕ್ಷಕ ತನ್ನ ನೋವನ್ನು ಮರೆತು ನಿಶ್ಚಿಂತೆಯಿಂದ ಅಲ್ಲಿಯ ದೃಶ್ಯಗಳಲ್ಲಿ ತನ್ಮಯನಾಗಿ ಮೆಲುಕು ಹಾಕುತ್ತ ಕೆಲವು ಸಮಯ ಕೆಲವು ದಿನಗಳ ಮಟ್ಟಿಗೆ ಅದೇ ಗುಂಗಿನಲ್ಲಿರುತ್ತಾನೆ. ಆದರೆ ಹವ್ಯಾಸಿ ಹಾಗಲ್ಲ. ಆ ಕ್ಷಣದಲ್ಲೇ ನೋಡಿ ಮರೆತು ಪ್ರೇಕ್ಷಕ ಮತ್ತೇ ತನ್ನ ದೈನಂದಿನ ಚಟುವಟಿಕೆಗಳಲ್ಲಿ ತೊಡಗಿಕೊಂಡು ಬಿಡುತ್ತಿದ್ದ. ಸ್ವಾರಸ್ಯಕರವಾದ ಘಟನೆಗಳಿದ್ದರೂ ತಿಳಿದುಕೊಳ್ಳುವ ಕೊರತೆ ಪ್ರೇಕ್ಷಕರಲ್ಲಿ ಇದ್ದಿರಬಹುದು.

ಯಾವಾಗ ಹೊಸ ಅಲೆಯ ನಾಟಕಗಳು ಹೆಚ್ಚು-ಹೆಚ್ಚು ಬರತೊಡಗಿದವೋ ಆವಾಗ ವೃತ್ತಿ ರಂಗಭೂಮಿ ಮತ್ತು ಹವ್ಯಾಸಿ ರಂಗಭೂಮಿ ಎಂಬ ಎರಡು ಕವಲು ಕಾಣತೊಡಗಿತು. ಸುಶಿಕ್ಷಿತ ನಟರ ಸಂಖ್ಯೆಯು ಹೆಚ್ಚಿತು. ಎಲ್ಲ ವಿಧದಲ್ಲಿಯೂ ಭಿನ್ನವಾಗಿ ನಡೆಯಲು ಬಯಸಿದ, ಒಂದು ಕಾಲಕ್ಕೆ ಶಾಲೆ ಕಾಲೇಜುಗಳ ವಾರ್ಷಿಕೋತ್ಸವದಲ್ಲಿ ಮಾತ್ರ ಪ್ರದರ್ಶಿಸಲ್ಪಡುತ್ತಿದ್ದ ಇಂಥ ನಾಟಕಗಳು ವಿಲಾಸಿ ರಂಗಭೂಮಿಗಳು ಜಾಗೃತವಾಗಿ ವೃತ್ತಿ ರಂಗಭೂಮಿಯ ಜೊತೆಗೆ ಸ್ಪರ್ಧೆಗೆ ಇಳಿದಿರಬಹುದು.

ಸಮಯದ ದೃಷ್ಟಿಯಿಂದಲೂ ರಂಗಭೂಮಿ ಪ್ರೇಕ್ಷಕರ ಮನಸ್ಸನ್ನು ಪ್ರಚೋಧಿಸುತ್ತಿತ್ತು. ಕೇವಲ ಒಂದು-ಒಂದುವರೆ ಘಂಟೆಯ ಹವ್ಯಾಸಿ ರಂಗಭೂಮಿ ಮುಂದೇನಾಗುತ್ತಿದೆ ಎಂದು ಪ್ರೇಕ್ಷಕ ಕುತುಹಲನಾಗಿದ್ದಾಗಲೇ ಪ್ರದರ್ಶನ ಮುಗಿದೇ ಬಿಡುತ್ತಿತ್ತು.

ವೃತ್ತಿ ರಂಗಭೂಮಿಯಲ್ಲಿನ ನಟವರ್ಗ ಪಟ್ಟಣ, ಹಳ್ಳಿ, ಊರುಗಳಿಂದ ಬಂದವರು. ಜೀವನದಲ್ಲಿ ಏನೆಲ್ಲ ನೋವನ್ನುಂಡವರ ಒಂದು ಹಿಂಡೇ ಅಲ್ಲಿರುತ್ತಿತ್ತು. ಆದರೆ ವಿಲಾಸಿ ರಂಗಭೂಮಿ ಹಾಗಲ್ಲ. ಕೇವಲ ಪಟ್ಟಣ ಪ್ರದೇಶದವರು ಅದರಲ್ಲೂ ವಿದ್ಯಾವಂತರು ಬ್ಯಾಂಕ ಉದ್ಯೋಗಿಗಳಾಗಿರಬಹುದು ಇನ್ನಿತರ ಯಾವುದೇ ಸರಕಾರಿ ಕೆಲಸದಲ್ಲಿದ್ದವರು ಟಾಯಮ್ ಪಾಸ್‌ಗಾಗಿ ಹವ್ಯಾಸಿ ರಂಗಭೂಮಿಯ ಮೊರೆ ಹೋದವರು. ಹೊಟ್ಟೆಪಾಡಿಗಾಗಿ ಅಲ್ಲ. ಹಾಗಂತ ಹವ್ಯಾಸಿ ರಂಗಭೂಮಿಯ ಬಗ್ಗೆ ನಿರ್ಲಕ್ಷ ತಾತ್ಸಾರವೆಂದಲ್ಲ. ಕಲೆ ಯಾರ ಸ್ವತ್ತೂ ಅಲ್ಲ. ಸೋಲು-ಗೆಲುವಿನ ಕುರಿತು ವಿಶ್ಲೇಷಣೆ ಅಷ್ಟೇ.

ಇನ್ನು ಈ ಹವ್ಯಾಸಿ ರಂಗಭೂಮಿಗೆ ತನ್ನದೇ ಆದ ಇತಿಹಾಸವೇನೂ ಇಲ್ಲ. "ಧಾರವಾಡದಲ್ಲಿ ಮುದವಿಡು ಕೃಷ್ಣರಾಯರ ನೇತೃತ್ವದಲ್ಲಿ 1905ರಲ್ಲಿ ಹುಟ್ಟಿಕೊಂಡ 'ಭಾರತ ಕಲೋತ್ತೇಜಕ ಸಂಗೀತ ಸಮಾಜ"ವು[3] ಐತಿಹಾಸಿಕವಾಗಿ ಮೊದಲ ಹವ್ಯಾಸಿ ಮಂಡಳಿ ಎನ್ನುತ್ತಾರೆ. ಚುರುಮುರಿಯವರ ಶಾಕುಂತಲದ ಅನುವಾದವೇ ಈ ಮಂಡಳಿಯ ಮೊದಲ ಪ್ರಯೋಗ. ಸರಕಾರಿ ನೌಕರರೇ ಹೆಚ್ಚಿಗಿದ್ದ ಈ ಮಂಡಳಿ ಬಹುಕಾಲ ಬಾಳಲಿಲ್ಲ ಈ ಮಂಡಳಿಯಿಂದ ಸ್ಫೂರ್ತಿಗೊಂಡು ಗದಗ, ಬಾಗಲಕೋಟ, ಬಿಜಾಪೂರ ಮುಂತಾದ ಕಡೆ ಹವ್ಯಾಸಿ ತಂಡಗಳು ಹುಟ್ಟಿಕೊಂಡಿವೆ ಎನ್ನಲಾಗಿದೆ.

1919ರಲ್ಲಿ ಬೆಂಗಳೂರಿನ "ಅಮೇಚೂರ ಡ್ರಮಾಟಿಕ್ ಅಸೋಸಿಯೇಶನ್" ಹವ್ಯಾಸಿ ರಂಗಭೂಮಿಯಲ್ಲಿ ಒಂದು ಮೈಲಿಗಲ್ಲು. ಬೆಂಗಳೂರಿನ ಶಿಕ್ಷಕರು, ವಕೀಲರು, ಮತ್ತಿತರ ವಿದ್ಯಾವಂತ ಉತ್ಸಾಹಿ ತರುಣರಿಂದ ಆರಂಭಗೊಂಡ ಈ ಮಂಡಳಿ ಅನೇಕ ವರ್ಷಗಳ ವರೆಗೆ ಕಾರ್ಯ ಮಾಡಿತು. ಕೇವಲ ನಾಟಕಗಳನ್ನು ಪ್ರದರ್ಶಿಸುವುದಷ್ಟೇ ಅಲ್ಲ ಹಲವಾರು ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡಿತ್ತು. ರಂಗಭೂಮಿಯ ಬೆಳವಣಿಗೆಗಾಗಿ ಪತ್ರಿಕಾ ಪ್ರಕಟಣೆ, ನಾಟಕ ರಚನಾ ಸ್ಪರ್ಧೆ,

---

[3] ಡಾ. ಕೆ. ಮರುಳಸಿದ್ದಪ್ಪ, "ಆಧುನಿಕ ಕನ್ನಡ ನಾಟಕ," ಪುಟ-367.

ವಿಚಾರಗೋಷ್ಠಿಗಳ ಏರ್ಪಾಡು, ನಾಟಕ ಸಮ್ಮೇಳನಗಳ ವ್ಯವಸ್ಥೆ ಹೀಗೆ ಹಲವು ರೀತಿಯ ಕಾರ್ಯಚಟುವಟಕೆಗಳ ಮೂಲಕ ತನ್ನ ಜೀವಂತಿಕೆಯನ್ನು ಮೆರೆಯಿತು. ಈ ನಾಟಕದ ಪ್ರರ್ಶನವನ್ನು ನೋಡಿ ಮೆಚ್ಚಿಕೊಂಡವರಲ್ಲಿ ಮಹಾತ್ಮಾ ಗಾಂಧೀಜಿಯವರೂ ಒಬ್ಬರು.

1919ರಲ್ಲಿ ಮೈಸೂರಿನ ಸಾಹಿತ್ಯ ನಾಟಕ ಸಂಘವೂ ದಕ್ಷಿಣ ಕರ್ನಾಟಕದ ಮೊದಲ ಹವ್ಯಾಸಿ ಮಂಡಳಿಗಳಲ್ಲಿ ಪ್ರಮುಖವಾದದ್ದು ದಿ. ಲಕ್ಷ್ಮಯ್ಯನವರಿಂದ ಆರಂಭಗೊಂಡು ಸಿ. ಆರ್. ಸುಬ್ಬರಾವ್, ಸಿ. ಆನಂದರಾವ್, ಎಮ್. ಎಸ್. ಮಂಜಪ್ಪ, ಡಿ. ಕಪನಿಪತಿರಾವ್ ಮುಂತಾದವರಿಂದ ಬೆಳೆಸಲ್ಪಟ್ಟ ಈ ಮಂಡಳಿಯು ನಾಟಕ ಪ್ರದರ್ಶನ, ಸ್ಪರ್ದೆ, ಉತ್ಸವಗಳ ಮೂಲಕ ರಂಗ ಚಟುವಟಕೆಗಳನ್ನು ಉಳಿಸಿ ಬೆಳೆಸಿತು.

ಆದರೆ ಇತ್ತೀಚಿನ ದಿನಗಳಲ್ಲಿ ಹವ್ಯಾಸಿ ರಂಗಭೂಮಿಯಲ್ಲಿ ಹೊಸ ಅಲೆ ತಲೆದೂರಿದೆ. ನಿರ್ದೇಶನವನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರೂ ಉಂಟು. ದಿವಂಗತ ಬಿ. ವಿ. ಕಾರಂತ, ಆಶೋಕ ಬಾದರದಿನ್ನಿ ಹಾಗೂ ಪ್ರಸನ್ನ ಈ ಹೊಸ ರಂಗಭೂಮಿಯ ನೇತಾರರಾಗಿದ್ದಾರೆ. ಹವ್ಯಾಸಿ ನಟರು ಮತ್ತು ವೃತ್ತಿ ನಿರ್ದೇಶಕರು ಸೇರಿ ನಿರ್ಮಾಣಗೊಂಡ ರಂಗಭೂಮಿ ಇದು. ದೆಹಲಿಯ ನಾಟಕ ಶಾಲೆಯಿಂದ ತರಬೇತಿ ಹೊಂದಿದ ಕನ್ನಡ ನಿರ್ದೇಶಕರು, ನಟರು, ತಾಂತ್ರಿಕ ವರ್ಗ ಈ ಹವ್ಯಾಸಿ ರಂಗಭೂಮಿಗೆ ಒಂದು ಕಳೆ ತಂದರು.

ಇಷ್ಟೆಲ್ಲ ಪ್ರೋತ್ಸಾಹ, ಅಭಿರುಚಿ ಹಲವಾರು ಕಲಾ ಶಕ್ತಿಗಳು ಅದರ ಹಿಂದೆ ಇದ್ದರೂ ಅದು ಏಳು-ಬೀಳನ್ನು ಅನುಭವಿಸುತ್ತಲಿದೆ. ಜನರ ಅಭಿರುಚಿಯನ್ನು ಅರಿಯದ ಅಶ್ಲೀಲ ಸಂಭಾಷಣೆಗೆ ಇಳಿದದ್ದು ಒಂದು ಕಾರಣವಿರಬಹುದು. ಇನ್ನೂ ಒಂದು ಕಾರಣ ನಾಡಿನಾದ್ಯಂತ ಇದಕ್ಕೆ ಪ್ರಚಾರ ಸಿಗಲಿಲ್ಲ. ಮೈಸೂರು, ಬೆಂಗಳೂರು, ಧಾರವಾಡ, ವಿಜಾಪೂರ ಇಂಥ ದೊಡ್ಡ ನಗರಗಳನ್ನು ಹೊರತು ಪಡಿಸಿ ಹಳ್ಳಿಗಳೆಡೆಗೆ ಇವರು ಮುಖ ಮಾಡಲೇ ಇಲ್ಲ. ಹೆಗ್ಗೋಡಿನ ನಿನಾಸಂ ಕೂಡ ಕರಾವಳಿಗೆ ಮಾತ್ರ ಚಟುವಟಕೆಗಳನ್ನು ಸೀಮಿತಗೊಳಿಸಿತು. ನಮ್ಮ ಉತ್ತರ ಕರ್ನಾಟಕದ ಅದೆಷ್ಟೋ ಬೆಳಕು ಕಾಣದ ಹಳ್ಳಿಗಳಿಗೆ ಹೀಗೊಂದು ಹವ್ಯಾಸಿ ನಾಟ್ಯ ಸಂಘ ಇದೆ ಎಂಬುದು ಗೊತ್ತಿಲ್ಲ. ಕಲಾವಿದರ ವರ್ಗ ಪ್ರೇಕ್ಷಕ ವರ್ಗ ಕೂಡಿಯೇ ಮನಸ್ಸು ಮಾಡಬೇಕು. ವರ್ಷಕ್ಕೊಂದು ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ಜಿಲ್ಲೆಯಾದ್ಯಂತ ಬೆನಫಿಟ್ ಶೋ ಮಾಡಿದರೆ (ಅದರಲ್ಲೂ ಗಡಿ ಭಾಗಕ್ಕೆ ಇದರ ಅವಶ್ಯಕಥೆ ಇದೆ.) ಹವ್ಯಾಸಿ ರಂಗಭೂಮಿ ಎಲ್ಲರ ಮನದಲ್ಲಿ ಹಚ್ಚ-ಹಸಿರಾಗಿ ಉಳಿಯಬಹುದು. ರಂಗಾಸಕ್ತರು ನಮ್ಮಲ್ಲಿ ಇದ್ದರೂ ರಂಗಮಂದಿರಗಳ ಕೊರತೆ ನಮ್ಮಲ್ಲಿ ಇದೆ. ಗ್ರಾಮೀಣ ಪ್ರದೇಶದಲ್ಲಿರುವ ನಮ್ಮ ಮಹಾವಿದ್ಯಾಲಯದಲ್ಲಿ ಒಂದು ಒಳ್ಳೆಯ ಕಾರ್ಯಕ್ರಮವನ್ನು ಮಾಡಬೇಕೆಂಬ ಹುಮ್ಮಸ್ಸು ನಮ್ಮಲ್ಲಿದ್ದರೂ

ಅಡಿಟೋರಿಯಂ ಕೊರತೆ ಇದ್ದ ಕಾರಣ ನಮ್ಮ ಕನಸು ನನಸಾಗುವುದು ಕಷ್ಟ ಸಾಹಿತ್ಯ ಪರಿಷತ್ತಿನಿಂದ ಚುನಾಯಿತ ಅಧ್ಯಕ್ಷರು, ಸದಸ್ಯರು, ಅಕ್ಯಾಡೆಮಿಗಳು ತಮ್ಮ ಅಧಿಕಾರ ಅವಧಿಯಲ್ಲಿ ಕವಿಗೋಷ್ಠಿ, ಸಾಹಿತ್ಯ ಸಮ್ಮೇಳನಗಳನ್ನು ಮಾಡಿ ತಮ್ಮ ಅಧಿಕಾರ ಅವಧಿ ಪೂರ್ಣಗೊಳಿಸುವದಕ್ಕಿಂತ ಇಪ್ಪತ್ತುಸಾವಿರಕ್ಕಿಂತ ಹೆಚ್ಚುಜನಸಂಖ್ಯೆ ಹೊಂದಿದ ಗ್ರಾಮಕ್ಕೊಂದು ಅಲ್ಲಿನ ಆಸಕ್ತ ಅಭಿಮಾನಗಳೊಂದಿಗೆ ಮಾತನಾಡಿ ಒಂದು ರಂಗ ಮಂದಿರ ಕಟ್ಟಿದರೆ ನಮ್ಮ ಸಾಂಸ್ಕೃತಿಕ ಚಟುವಟಕೆಗಳಿಗೆ ಮತ್ತೇ ಮರಳಿ ಜೀವ ಬರಬಹುದು. ನಮ್ಮ ಎಲ್ಲ ಯೋಜನೆಗಳು ಪಟ್ಟಣ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿ ಗ್ರಾಮೀಣ ಪ್ರದೇಶ ಉಪೇಕ್ಷೆಗೆ ಒಳಗಾಗುತ್ತಲಿದೆ.

ನಗರ ಪ್ರದೇಶಗಳಲ್ಲಿ ಇತ್ತೀಚಿನ ದಶಕಗಳಲ್ಲಿ ಹವ್ಯಾಸಿ ರಂಗಭೂಮಿಯಲ್ಲಿ ಸಾಕಷ್ಟು ಗುಣಮಟ್ಟ ಸುಧಾರಿಸಿದೆ. ನಿರಂತರವಾದ ಚಟುವಟಿಕೆಗಳು ನಡೆದಿವೆ. ಅವು ಗ್ರಾಮೀಣ ಪ್ರದೇಶದತ್ತ ಹೆಜ್ಜೆ ಹಾಕಬೇಕಾಗಿದೆ. ಎಲ್ಲಿಯವರೆಗೆ ವೃತ್ತಿ ರಂಗಭೂಮಿ ಬದುಕುವುದೋ ಅಲ್ಲಿಯವರೆಗೆ ಹವ್ಯಾಸಿ ರಂಗಭೂಮಿಯು ಉಳಿಯಲು ಸಾಧ್ಯ. ನಾವು ಹೊಟ್ಟೆ ಪಾಡಿಗಾಗಿ ದುಡಿಯುವವರಲ್ಲ ಎಂಬ ಬಿಗುಮಾನದಿಂದ ಹವ್ಯಾಸಿ ಕಲಾವಿದರು ಹೊರಬರಬೇಕು. ಮಾಸ್ತಿಯವರ ಕಾಕನಕೋಟೆ, ಕಾರ್ನಾಡರ ಯಯಾತಿ, ತುಘಲಕ್, ಲಂಕೇಶರ ಕ್ರಾಂತಿ ಬಂತು ಕ್ರಾಂತಿಯಂಥ ಗಟ್ಟಿ ನಾಟಕಗಳು ನೆಲೆಯೂರಬಹುದು. ತಿಳಿದವರಿಗೆ, ಬುದ್ದಿಜೀವಿಗಳಿಗೆ ಮಾತ್ರ ಸೀಮಿತವಾಗದೇ ಎಲ್ಲರೂ ಇದರ ಪ್ರಯೋಜನ ಪಡೆದುಕೊಳ್ಳುವಂತಾಗಬೇಕು. ಹವ್ಯಾಸಿ ರಂಗಭೂಮಿ ಕೆಲವರಿಗೆ ವೃತ್ತಿಯಲ್ಲ, ಅದು ಪ್ರವೃತ್ತಿ, ಆದರೆ ವೃತ್ತಿರಂಗಭೂಮಿ ಹಾಗಲ್ಲ ಇಲ್ಲಿನಟ ನಟಿಯರು ಸಂಪೂರ್ಣವಾಗಿ ರಂಗಭೂಮಿಗೆ ತಮ್ಮನ್ನು ತಾವು ಸಮರ್ಪಿಸಿಕೊಳ್ಳುತ್ತಾರೆ.

**ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಹೆಜ್ಜೆಗುರುತುಗಳು :**

ಸದಾಚಾರ ಸಂಪನ್ನರೂ ಸುಶೀಲರೂ ವಿದ್ವಾಂಸರೂ ಆಗಿದ್ದ ಸಕ್ಕರಿ ಬಾಳಾಚಾರ್ಯರು ಹಾಗೂ ವೆಂಕಣ್ಣಾಚಾರ್ಯ ಅಗಳಗಟ್ಟಿಯವರಿಂದ ಉತ್ತರ ಕರ್ನಾಟಕ ರಂಗಭೂಮಿ ಶ್ರೀಕಾರ ಪಡೆಯಿತು. ಕೃತಪುರ ಮತ್ತುಹಲಸಗಿ ತಂಡಗಳ ನಂತರ ಉತ್ತರ ಕರ್ನಾಟಕದಲ್ಲಿ ಮತ್ತೊಂದು ಪ್ರಭಾವಶಾಲಿ ಮಂಡಳಿ ಹುಟ್ಟಿಕೊಳ್ಳಲು ಕಾಲು ಶತಮಾನಕ್ಕೂ ಹೆಚ್ಚಿನ ಅವಧಿ ಬೇಕಾಯಿತು. 1886ರಲ್ಲಿ ಭೀಮಾಚಾರ್ಯ ಏರಿ ಎನ್ನುವವರು ಧಾರವಾಡದಲ್ಲಿ ಆರಂಭಿಸಿದ ತಂತುಪುರ ನಾಟಕ ಮಂಡಳಿ ಮತ್ತು 1895ರಲ್ಲಿ ಗೋವಿಂದಪ್ಪನವರು ಆರಂಭಿಸಿದ ಗುಳೇದಗುಡ್ಡ ಬಾಲ ಕಂಪನಿಗಳು ಹೆಚ್ಚುಕಾಲ ಬಾಳಲಿಲ್ಲ. ಇದೊಂದು ಪ್ರಾಯೋಗಿಕ ಕಾಲವಾದ್ದರಿಂದ ಇವುಗಳನ್ನು ಪೂರ್ಣ ಪ್ರಮಾಣದ ಸುಸಜ್ಜಿತ ವೃತ್ತಿ ತಂಡಗಳೆಂದು ಕರೆಯಲಾಗದು. ರಂಗಪರಿಕರಗಳಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಯಾಗಿರಲಿಲ್ಲ.

ಆಡುವ ನಾಟಕಗಳಲ್ಲಿಜನಪದ ರಂಗಭೂಮಿಯ ಪ್ರಭಾವ ದಟ್ಟವಾಗಿಯೇ ಇತ್ತು. ವೇಶಭೂಷಣಗಳಲ್ಲಿ ಕೊಂಚ ಬದಲಾವಣೆ, ಪ್ರವೇಶ ಶುಲ್ಕ ಜಾರಿಗೆ ತಂದ ಮಂಡಳಿ ಇವುಗಳಾಗದ್ದರಿಂದ ಇವುಗಳನ್ನು ವೃತ್ತಿ ತಂಡಗಳೆಂದು ಕರೆಯಬಹುದು. ಆದಾಗ್ಯೂ ಮುಂದೊಮ್ಮೆ ಉತ್ತರ ಕರ್ನಾಟಕದ ವೃತ್ತಿರಂಗ ಭೂಮಿ ವೈಭವದ ಉತ್ತುಂಗಕ್ಕೇರಲು ಬೀಜ ಮಂತ್ರವಾದದ್ದಂತು ಸತ್ಯ.

ನಂತರ 1899ರಲ್ಲಿ ಅಮೂಲಾಗ್ರ ಬದಲಾವಣೆಯೊದಿಗೆ ರಂಗಕ್ಕಿಳಿದವರು ಶಿವಮೂರ್ತಿಸ್ವಾಮಿ ಕಣಬರ್ಗಿಮಠರು, ಜನಪದ ರಂಗಭೂಮಿಯಲ್ಲಿ ತುಂಬ ಆಸಕ್ತಿ ಮತ್ತು ಕುತೂಹಲ ಹೊಂದಿದ ಶಿವಮೂರ್ತಿ ಸ್ವಾಮಿಗಳು "ಇಂದ್ರಜೀತುವಧೆ" ಎಂಬ ಬಯಲಾಟ ತಂಡ ಕಟ್ಟಿ ಅದರಲ್ಲಿ ಇಂದ್ರಜೀತುವಿನ ಪಾತ್ರವನ್ನು ಮಾಡಿ ಸೈ ಎನಿಸಿಕೊಂಡಿದ್ದರು. ಗೋಕಾಕಿನಲ್ಲಿ ಆಂಗ್ಲರ ಮಿಲ್ಲಿನಲ್ಲಿ ನೌಕರಿ ಮಾಡುತ್ತಿದ್ದ ಇವರು ಕೆಲಸದ ನಿಮಿತ್ಯ ಆಗಾಗ್ಗೆ ಮುಂಬೈಗೆ ಹೋಗುತ್ತಿದ್ದರು. ಅಲ್ಲಿನ "ಗ್ರ್ಯಾಂಟ" ಎಂಬ ಥೀಯೇಟರ್‌ನಲ್ಲಿ ನಡೆಯುತ್ತಿದ್ದ ಪಾರ್ಸಿ ನಾಟಕಗಳನ್ನು ನೋಡುತ್ತಿದ್ದ ಇವರು ಅಲ್ಲಿನ ರಂಗ ವೈಭವವನ್ನು ಕನ್ನಡ ರಂಗಭೂಮಿಗೆ ತರಲು ನಿಶ್ಚಯಿಸಿ ಸತತ ಎರಡು ವರ್ಷಗಳ ಕಾಲ ಪರಿಶ್ರಮ ಮತ್ತು ತರಭೇತಿಯೊಂದಿಗೆ 1899 ರಲ್ಲಿ "ಶ್ರೀ ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ ಕೊಣ್ಣೂರ" ಎಂಬ ತಂಡದೊಂದಿಗೆ ರಂಗ ಪ್ರವೇಶ ಮಾಡಿದರು. ಪಾರ್ಶಿ ರಂಗವೈಭವವನ್ನು ಕನ್ನಡ ರಂಗಭೂಮಿಗೆ ತರಲು ನಿರ್ಧರಿಸಿದ್ದ ಸ್ವಾಮಿಗಳು ಅದರಂತೆ ಸಾಕಷ್ಟು ಪೂರ್ವ ತಯಾರಿಯನ್ನು ನಡೆಸಿದ್ದರು. ಅವುಗಳನ್ನು ಈ ರೀತಿಯಲ್ಲಿ ವಿವರಿಸಬಹುದು.

1. ಕಥೆಗಾರ ಮಂಟಮುರಿ ಚನ್ನಮಲ್ಲಪ್ಪನವರ ಸಹಾಯದಿಂದ ಚೆನ್ನಾಗಿ ಹಾಡಬಲ್ಲ ದೊಡ್ಡಾಟ ಪಾರಿಜಾತಗಳಲ್ಲಿ ಪಾತ್ರವಹಿಸುತ್ತಿದ್ದ ಯುವಕರನ್ನು ಹುಡುಕಿ ತಂದು ಅವರಿಗೆ ಸಂಗೀತ ಮತ್ತು ಅಭಿನಯಗಳ ತರಬೇತಿ ನೀಡಿದರು.
2. ವಿಶೇಷವಾದ ಆಕರ್ಷಕವಾದ ರಂಗಪರಿಕರಗಳನ್ನು ತಯಾರಿಸಲು ಕೊಲ್ಹಾಪೂರದ ಬಳವಂತ ಪೇಂಟರು, ಗೋವಾದ ರಘುವೀರ ಪೇಂಟರುಗಳ್ನು ಕರೆಯಿಸಿ ಚಿತ್ತಾಕರ್ಷಕ ಪರದೆಗಳ್ನು ಮತ್ತು ಡ್ರೆಸ್‌ಗಳನ್ನು ತಯಾರಿಸಿದರು.
3. ಆಗಿನ ಕಾಲದಲ್ಲಿ ಬರೀ ಪೌರಾಣಿಕ ನಾಟಕಗಳನ್ನಾಡುತ್ತಿದ್ದುದರಿಂದ ಅದಕ್ಕೆ ಬೇಕಾಗುವ ಕಿರೀಟ, ಖಡ್ಗ, ಕಠಾರಿ, ಬಿಲ್ಲು–ಬಾಣ, ಗದೆ, ಅತ್ಯಂತ ಬೆಲೆ ಬಾಳುವ ಝರಿ ಪೀತಾಂಬರಗಳನ್ನು ಮುಂಬೈಯಿಂದ ತಂದರು.
4. ಕಂಪನಿಗೆ ಅಗತ್ಯವಾದ ನಾಭಿ, ಗಡಗಡೆ, ಟ್ರಾನ್ಸಫರ್ ಸೀನುಗಳನ್ನು ಸಿದ್ಧಪಡಿಸಿದರು.

ಹೀಗೆ ಪ್ರತಿಭಾವಂತ ನಟರು ವೈಭವಯುತ ಪರಿಕರಗಳಿಂದ ಕೊಣ್ಣೂರು ಕಂಪನಿ ಅಸ್ತಿತ್ವಕ್ಕೆ ಬಂತು.[4]

ಅಲ್ಲದೇ ಬೇರೆ-ಬೇರೆ ಕವಿಗಳನ್ನು ಕರೆಯಿಸಿ ನಾಟಕಗಳನ್ನು ಬರೆಸುತ್ತಾರೆ. ಶ್ರೀ ವೆಂಕಟರಾವ್ ಪಾಂಡುರಂಗಿಯವರಿಂದ ಶನಿಪ್ರಭಾವ, ಅಮರೇಶ್ವರ ಶಾಸ್ತ್ರೀ ಲಿಂಗಸೂರರವರಿಂದ ಮಹಾತ್ಮ ಬಸವೇಶ್ವರ ಶಿವಲಿಂಗ ಶಾಸ್ತ್ರಿಗಳಿಂದ ಮನೋವಿಜಯ ನಾಟಕಗಳು ರಚನೆಯಾಗುತ್ತವೆ.

ಕೊಣ್ಣೂರು ಮಂಡಳಿಯು ಆಡಿದ ನಾಟಕಗಳು ಹರಿಶ್ಚಂದ್ರ, ವಿರಾಠ ಪರ್ವ ಅರ್ಥಾತ್ ಕೀಚಕ ವಧೆ, ಚಂದ್ರಹಾಸ, ಮಧನ ಮೋಹನ, ಮಹಾತ್ಮಾ ಬಸವೇಶ್ವರ, ಶನಿ ಪ್ರಭಾವ, ತುಕುರಾಮ ಇದಲ್ಲದೇ ಶಿವಮೂರ್ತಿಸ್ವಾಮಿಗಳು ಮಾಡಿದ ಮತ್ತೊಂದು ಕ್ರಾಂತಿಕಾರಕ ಬದಲಾವಣೆ ಎಂದರೆ ವೃತ್ತಿರಂಗಭೂಮಿಗೆ, ಮಹಿಳೆಯರಿಗೆ ಪ್ರವೇಶ ನೀಡಿದ್ದು. ಈ ಹಿಂದೆ ಪಾರಿಜಾತದಲ್ಲಿ ಕೌಜಲಗಿನಿಂಗವ್ವನ ಅಭಿನಯ ನೋಡಿದ್ದ ಸ್ವಾಮಿಗಳು ಸ್ತ್ರೀ ಪಾತ್ರಗಳ ನಯ ನಾಜುಕಿನ ಹಾವ-ಭಾವಗಳಿಗೆ ಸಹಜತೆ ಬರಬೇಕಾದರೆ ಸ್ತ್ರೀ ಪಾತ್ರಗಳಿಗೆ ಮಹಿಳೆಯೇ ಆಗಬೇಕೆಂದು ನಿರ್ಧರಿಸಿದರು. ಕಂಪನಿಯಲ್ಲಿ ಸ್ತ್ರೀ ಪಾತ್ರ ಮಾಡುತ್ತಿದ್ದ ಕಲಾವಿಧರ ವಿರೋಧ, ಮಂಡಳಿಯಲ್ಲಿ ಅನೈತಿಕತೆ ತಾಂಡವವಾಡಬಹುದೆನ್ನುವ ವಾದವನ್ನು ತಿರಸ್ಕರಿಸಿ ಬಳ್ಳಾರಿಯಿಂದ ಲಕ್ಷ್ಮವ್ವಾ (ಲಕ್ಷ್ಮಾಸಾನಿ) ಎಂಬ ಕಲಾವಿಧೆಯನ್ನು ಕರೆಸಿದರು ಆಕೆ ತುಂಬಾ ಸ್ಥೂಲ ಕಾಯದವಳಾದ್ದರಿಂದ ಆಕೆಗೆ ಸಣ್ಣ-ಪುಟ್ಟ ಪಾತ್ರಗಳನ್ನು ಕೊಟ್ಟರು. ನಂತರ ಗುರಲಿಂಗಪ್ಪಾ ಗೊಂಬಿ ಎಂಬ ಕಲಾವಿಧನ ಮೂಲಕ ಎಲ್ಲೂಬಾಯಿ ಗುಳೇದಗುಡ್ಡ ಎಂಬಾಕೆಯನ್ನು ಕರೆಸಿದರು. ಆಕರ್ಷಕ ಮೈಮಾಟ, ಕಂಚಿನ ಕಂಠ, ರಂಗಕ್ಕೆ ಬೇಕಾದ ಧೈರ್ಯ, ಲವಲವಿಕೆಗಳಿಂದ ಯಲ್ಲವ್ವ ಕಂಪನಿಯ ಜನಪ್ರೀಯ ನಟಿಯಾಗಿ ಬೆಳೆಯುತ್ತಾಳೆ. ಜೊತೆಗೆ ಅಗತ್ಯ ಬಿದ್ದಾಗ ಈಕೆ ಪುರುಷ ಪಾತ್ರಗಳನ್ನು ಯಶಸ್ವಿಯಾಗಿ ಅಭಿನಯಿಸುತ್ತಾಳೆ.

ಹೀಗೆ ಉತ್ತರ ಕರ್ನಾಟಕ ರಂಗಭೂಮಿಗೆ ಮಹಿಳೆಯನ್ನು ಕರೆತಂದ ಕೀರ್ತಿ ಶಿವಮೂರ್ತಿ ಸ್ವಾಮಿಗಳಿಗೆ ಸಲ್ಲಬೇಕು. ಅದೇ ರೀತಿ ಉತ್ತರ ಕರ್ನಾಟಕ ವೃತ್ತಿ ರಂಗಭೂಮಿ ಪ್ರವೇಶಿಸಿದ ಮೊದಲ ಮಹಿಳೆಯಾಗಿ ಯಲ್ಲೂಬಾಯಿ ಗುಳೇದಗುಡ್ಡ ವೃತ್ತಿ ರಂಗಭೂಮಿಯ ಇತಿಹಾಸದಲ್ಲಿ ದಾಖಲಾಗುತ್ತಾಳೆ.

ಲಕ್ಷ್ಮಾಸಾನಿ, ಯಲ್ಲೂಬಾಯಿ ಗುಳೇದಗುಡ್ಡ ನಂತರ ಈ ಮಂಡಳಿಗೆ ರೇಣಾವ್ವಾ ಗುಳೇದಗುಡ್ಡ, ಹಣಮಂತೆವ್ವಾ ಗುಳೇದಗುಡ್ಡ ಸೇರ್ಪಡೆಯಾಗುತ್ತಾರೆ.

ಶಿವಮೂರ್ತಿ ಸ್ವಾಮಿಗಳು ರಂಗದ ಮೇಲೆ ತಂದ ಮತ್ತೊಂದು ಮಹತ್ವದ ಬದಲಾವಣೆ ಎಂದರೆ ಹಿಲಾಲುಗಳ, ಸೀಮೆಎಣ್ಣೆ, ಗ್ಯಾಸಗಳ ಬೆಳಕಿನಲ್ಲಿ ನಾಟಕಗಳನ್ನು ಪ್ರದರ್ಶಿಸುತ್ತಿದ್ದ ಆ ಕಾಲದಲ್ಲಿ ಸುಮಾರು 4 ಸಾವಿರ ರೂ.ಗಳನ್ನು ವ್ಯಯಿಸಿ ಡೈನಾಮೋ ತಂದು, ಅದು ಹರಿಸುವ ವಿದ್ಯುತ್ ಬೆಳಕಲ್ಲಿ ನಾಟಕಗಳನ್ನು ಪ್ರದರ್ಶಿಸಿ ಬಣ್ಣದ ಬೆಳಕಿನ ಮತ್ತೊಂದು ಚಮತ್ಕಾರವನ್ನು ಪ್ರೇಕ್ಷಕರಿಗೆ ನೀಡಿದರು.

---

[4] ಡಾ. ರಾಮಕೃಷ್ಣ ಮರಾಠೆ. "ಉತ್ತರ ಕರ್ನಾಟಕ ರಂಗಭೂಮಿ." ಪುಟ 60-61

ಇಷ್ಟೆಲ್ಲಾ ಅದ್ದೂರಿತನದೊಂದಿಗೆ ಚಿಂಚಲಿ, ಸವದತ್ತಿ, ಗೋಕಾಕ, ರಬಕವಿ, ಜಮಖಿಂಡಿ, ಬಿಜಾಪೂರ ಮುಂತಾದ ಕಡೆಗಳಲ್ಲಿ ಯಶಸ್ವಿ ಪ್ರದರ್ಶನಗಳನ್ನು ನೀಡಿ ಜನಮನ್ನಣೆಗಳನ್ನು ಗಳಿಸಿದ್ದ ಕಾಡ ಸಿದ್ಧೇಶ್ವರ ಸಂಗೀತ ನಾಟಕ ಮಂಡಳಿಗೆ "ಶನಿ ಪ್ರಭಾವ" "ಬಸವೇಶ್ವರ" ನಾಟಕಗಳು ಹೆಚ್ಚಿನ ಆದಾಯವನ್ನು ತಂದು ಕೊಟ್ಟವೆ. ಕೊನೆಯ ಟಿಕೇಟ್ ದರ 2 ಆಣೆ ಆಗಿದ್ದಾಗ ಪ್ರದರ್ಶನವೊಂದು 662 ರೂ. ಗಳಿಸಿದ್ದು ಸಣ್ಣ ಮೊತ್ತವೇನಲ್ಲ.

ಕೊಲ್ಹಾಪೂರ ಶಾಹೂ ಮಹಾರಾಜರು, ಬೆಳಗಾವಿಯ ಆಗಿನ ಕಮೀಶನರ್ ಶಫರ್ಡ, ತ್ಯಾಗವೀರ ಶಿರಸಂಗಿ ಲಿಂಗರಾಜರು, ಹೀಗೆ ಹಲವಾರು ಮಹಾನ್‌ಭಾವರು ಶಿವಮೂರ್ತಿ ಸ್ವಾಮಿಗಳ ಆಹ್ವಾನದ ಮೇಲೆ ಮಂಡಳಿಯ ನಾಟಕಗಳನ್ನು ನೋಡಿ ಮೆಚ್ಚಿಕೊಂಡದ್ದುಂಟು.

ಯಾವ ಮರಾಠಿ ನಾಟಕ ಮಂಡಳಿಗಳು ಉತ್ತರ ಕರ್ನಾಟಕಕ್ಕೆ ಲಗ್ಗೆ ಇಟ್ಟು ಸಾಂಸ್ಕೃತಿಕ ದಾಳಿ ನಡೆಸಿ ಪರಿಣಾಮ ಬೀರಿದ್ದವೋ ಯಾವ ಪಾರ್ಶಿ ನಾಟಕಗಳು ವೈಭವವನ್ನು ಮೆರೆಸಿ ಶಿವಮೂರ್ತಿ ಸ್ವಾಮಿಗಳನ್ನು ಈ ರಂಗಕ್ಕೆ ಧುಮುಕಲು ಪ್ರೇರಣೆಯಾಗಿದ್ದವೋ ಅದೇ ನಾಡಿನಲ್ಲಿ (ಮಹಾರಾಷ್ಟ್ರ) ಗಡಿಗಳಲ್ಲಿ ಸಂಚರಿಸಿ ಕನ್ನಡ ರಂಗ ಕಲೆಯ ಹಿರಿಮೆಯನ್ನು ಮೆರೆಸಿದ್ದು ಅವಿಸ್ಮರಣೀಯ. ಮರಾಠಿ ಭಾಷಿಕರ ಪ್ರಭಾವವಿದ್ದ ಬೆಳಗಾವಿ, ಅಥಣಿ, ಸಂಕೇಶ್ವರ ಅಲ್ಲದೇ ಮಹಾರಾಷ್ಟ್ರದ ಮೀರಜ್, ಕೊಲ್ಹಾಪೂರಗಳಲ್ಲಿ ಕ್ಯಾಂಪ ಮಾಡಿ, ಯಶಸ್ವಿ ಪ್ರದರ್ಶನ ನೀಡಿ ಕರ್ನಾಟಕದ ರಂಗಭೂಮಿಯು ಮರಾಠಿಗಿಂತ ಕಡಿಮೆ ಏನಲ್ಲ ಎಂದು ತೋರಿಸಿಕೊಟ್ಟವರು ಶಿವಮೂರ್ತಿ ಸ್ವಾಮಿಗಳು.

ಎರಡು ದಶಕಕ್ಕೂ ಹೆಚ್ಚು ಕಾಲ ನಾಡಿನಾದ್ಯಂತ ಸಂಚರಿಸಿ ವೈಭವಯುತ ಪ್ರದರ್ಶನಗಳನ್ನು ನೀಡಿ, ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಗೆ ಹೊಸ ಕಾಯಕಲ್ಪ ನೀಡಿದ ಈ ವೃತ್ತಿ ರಂಗಮಂಡಳಿ ಹಲವಾರು ಏರಿಳಿತಗಳನ್ನು ಕಂಡಿತು. ಆಗಿನ ಕಾಲದಲ್ಲಿ ಮಂಡಳಿಯೊಂದು ಈಗಿನಂತೆ ದಿನಕ್ಕೆ 2–3 ಪ್ರದರ್ಶನಗಳನ್ನು ನೀಡುತ್ತಿರಲಿಲ್ಲ. ವಾರಕ್ಕೆ 3–4 ಪ್ರದರ್ಶನಗಳಿರುತ್ತಿದ್ದವು. ಗಳಿಕೆ ಎಲ್ಲಾಕಡೆ ಒಂದೇ ರೀತಿಯಾಗಿರುತ್ತಿರಲಿಲ್ಲ. ಕೆಲವು ಕಡೆ ಇದರ ಗಳಿಕೆ ಒಂದು ಪ್ರದರ್ಶನಕ್ಕೆ 20–30ರೂ ಗಳಿಗೂ ಇಳಿಯುತ್ತಿತ್ತು. ಕೆಲವು ಕಡೆ ಕಿಡಿಗೇಡಿಗಳು ಗಲ್ಲಾ ಪೆಟ್ಟಿಗೆಯನ್ನೇ ಅಪಹರಿಸಿದ್ದುಂಟು. ಶಿವಮೂರ್ತಿ ಸ್ವಾಮಿಗಳು ಅತ್ಯಂತ ನಂಬಿಗೆಯಿಟ್ಟ ಮ್ಯಾನೇಜರ್‌ಗಳು ಲೆಕ್ಕ ಪತ್ರದಲ್ಲಿ ಮೋಸ ಮಾಡಿದರು. ಕೆಲ ಕಲಾವಿದರು ದ್ರೋಹ ಬಗೆದರು. ಕಲಾವಿದರು ದುಶ್ಚಟಗಳನ್ನು ಕಲಿಯ ತೊಡಗಿದ್ದರಿಂದ ಸ್ವಾಮಿಗಳಿಗೆ ಕಿರಿಕಿರಿಯಾಯಿತು. ಕಲಾವಿದರಲ್ಲಿನ ಅನಿಯಮಿತತನ ಸ್ವಾಮಿಗಳಿಗೆ ಬೇಸರವಾಯಿತು. ಈ ಎಲ್ಲ ಕಾರಣಗಳಿಂದ ಸ್ವಾಮಿಗಳು ಒಲ್ಲದ ಮನಸ್ಸಿನಿಂದಲೇ 1921ರಲ್ಲಿ ಕಂಪನಿಯನ್ನು ನಿಲ್ಲಿಸಿಬಿಡುತ್ತಾರೆ.

ಈ ಮಂಡಳಿ 1899 ರಿಂದ 1921ರ ವರೆಗೆ ಅಂದರೆ 22 ವರ್ಷಗಳ ಕಾಲ ತನ್ನ ಹಿರಿಮೆಯನ್ನು ಮೆರೆಯಿತು. ನಟನಟಿಯರನ್ನು ವೈಭವದ ರಂಗ ಸಜ್ಜಿಕೆಗಳನ್ನು ಬೆರಗಾಗಿ ನೋಡುವಂಥಹ ವಾತಾವರಣ ನಿರ್ಮಾಣ ಮಾಡಿದ್ದಲ್ಲದೇ ವೃತ್ತಿ ರಂಗಭೂಮಿಯನ್ನು ಜನಪ್ರೀಯಗೊಳಿಸಿತು.

ಇದರ ಪರಿಣಾಮವಾಗಿ ಈ ಅವಧಿಯಲ್ಲಿ ಉತ್ತರ ಕರ್ನಾಟಕದ ರಂಗಭೂಮಿ ಕ್ಷೇತ್ರದಲ್ಲಿ ಹೊಸತಾಗಿ ಹುಟ್ಟಿಕೊಂಡ ಮಂಡಳಿಗಳ ಸಂಖ್ಯೆ ಬರೋಬ್ಬರಿ 13 ಇದರಿಂದ ಶಿವಮೂರ್ತಿಸ್ವಾಮಿಗಳು ರಂಗಭೂಮಿಯನ್ನು ಎಷ್ಟು ಆಕರ್ಷಕ ಕ್ಷೇತ್ರವನ್ನಾಗಿ ಪರಿವರ್ತಿಸಿದರೆಂಬುದನ್ನು ಊಹಿಸಬಹುದು.

ಭೂಮಿಗೆ ಬಿತ್ತಿದ ಎಲ್ಲ ಬೀಜಗಳು ಫಲ ಕೊಡುವುದಿಲ್ಲ. ಯಾಕೆಂದರೆ, ಕೆಲವು ಮೊಳಕೆಯೊಡೆಯುವುದಿಲ್ಲ. ಮೊಳಕೆಯೊಡೆದುದರಲ್ಲಿ ಕೆಲವು ಒಣಗಿ ಹೋದರೆ, ಇನ್ನು ಕೆಲವು ಕ್ರಿಮಿಕೀಟಗಳ ಪಾಲು, ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಕಥೆಯೂ ಹಾಗೆ ಆಯಿತು. ಶಿವಮೂರ್ತಿ ಸ್ವಾಮಿ ಕಣಬರ್ಗಿಮಠರು ಮಂಡಳಿ ಆರಂಭಿಸಿ ಅದನ್ನು ನಿಲ್ಲಿಸುವುದರೊಳಗಾಗಿ ಹುಟ್ಟಿಕೊಂಡ ಕಂಪನಿಗಳ ಸಂಖ್ಯೆಯೇನೋ 13 ಆದರೆ ಅರಂಭಿಸಿದ ಎಲ್ಲ ಕಂಪನಿಗಳೂ ಬಾಳಿ ಬದುಕಲಿಲ್ಲ. ವೃತ್ತಿರಂಗಭೂಮಿ ನೋಡುವವರಿಗೇನೋ ಸ್ವರ್ಗವನ್ನೇ ಭೂಮಿಗಿಳಿಸಿದ ಅನುಭವವನ್ನು ತಂದು ಕೊಡುತ್ತದೆ. ಆದರೆ ಇಂಥ ಮಂಡಳಿಯೊಂದನ್ನು ಕಟ್ಟಿ, ಬೇರೆ ಬೇರೆ ಆಲೋಚನೆಯ ಜನಗಳನ್ನು ಕಟ್ಟಿಕೊಂಡು, ಊರೂರು ಅಲೆಯಬೇಕು. ಎಂತೆಂಥ ಜನಗಳು ಬಂದರೂ ಅವರನ್ನೆಲ್ಲ ಸಂಭಾಳಿಸಬೇಕು. ಆರ್ಥಿಕ ಏರಿಳಿತಗಳನ್ನು ಸಮಾನವಾಗಿ ಸ್ವೀಕರಿಸಬೇಕು. ಈ ಕ್ಷೇತ್ರದಲ್ಲಿ ಮುನ್ನಡೆಯಬೇಕಾದರೆ, ತುಂಬ ಧೈರ್ಯ ಮತ್ತು ಅಪಾರ ಸಂಘಟನಾ ಚಾತುರ್ಯಬೇಕು. ವ್ಯವಹಾರ ಜ್ಞಾನವಂತೂ ಈ ಕ್ಷೇತ್ರದ ಬೀಜಮಂತ್ರ, ಹೀಗಾಗಿ ಹುಟ್ಟಿಕೊಂಡ ಎಲ್ಲ ಮಂಡಳಿಗಳಿಗೂ ತಲೆ ಎತ್ತಿ ನಿಲ್ಲಲು ಸಾಧ್ಯವಾಗಲಿಲ್ಲ. ಆದ್ದರಿಂದ ಸಮಸ್ಯೆಗಳನ್ನು ಮೀರಿ ನಿಂತು, ಸುದೀರ್ಘ ಅವಧಿಯ ವರೆಗೆ ಜನಪ್ರೀಯತೆಯನ್ನು ಬೆಳಸಿಕೊಂಡು, ಜನಮನದಲ್ಲಿ ಅಚ್ಚೊತ್ತಿದ ಕಂಪನಿಗಳು ಮಾತ್ರ ಕೆಲವೇ ಕೆಲವು. ಅವುಗಳನ್ನು ಹೆಸರಿಸುವುದಾದರೆ,

1. ಶಿರಹಟ್ಟಿ ವೆಂಕೋಬರಾಯರ "ಶ್ರೀ ಮಹಾಲಕ್ಷ್ಮೀ ಪ್ರಾಸಾದಿತ ಸಂಗೀತ ನಾಟಕ ಮಂಡಳಿ, ಶಿರಹಟ್ಟಿ" ಸ್ಥಾಪಿಸಿದ ವರ್ಷ 1903.
2. ರಾಮದುರ್ಗದ ನೇಕಾರ ಬಂಧುಗಳು ಸ್ಥಾಪಿಸಿದ "ಆರ್ಯ ಸಂಗೀತ ನಾಟಕ ಮಂಡಳಿ," ರಾಮದುರ್ಗ ಸ್ಥಾಪಿಸಿದ ವರ್ಷ 1906.
3. ಲಕ್ಷ್ಮೇಶ್ವರದ ಬಚ್ಚಾಸಾಗಿ ದೊಡ್ಡಮನಿಯವರ "ಸ್ತ್ರೀ ಸಂಗೀತ ನಾಟಕ ಮಂಡಳಿ," 1908.

4. ಹಲಗೇರಿಯ ಲಿಂಗನಗೌಡ ಪಾಟೀಲರ ನೇತೃತ್ವದಲ್ಲಿ ದೊಡ್ಡ ಜಟ್ಟಿಪ್ಪನವರು ಕಟ್ಟಿದ "ಶ್ರೀ ಹಾಲಸಿದ್ದೇಶ್ವರ ಸಂಗೀತ ನಾಟಕ ಮಂಡಳಿ" ಹಲಗೇರಿ 1911.
5. ಸವಣೂರಿನ ವಾಮನರಾವ ಮಾಸ್ತರರ "ವಿಶ್ವಗುಣಾದರ್ಶ ಸಂಗೀತನಾಟಕ ಮಂಡಳಿ" 1914.
6. ಗರುಡ ಸದಾಶಿವರಾಯರ "ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಳಿ" ಗದಗ 1919.

1903 ರಿಂದ 1921ರ ವರೆಗೆ ಉತ್ತರ ಕರ್ನಾಟಕ ರಂಗಭೂಮಿಯ ಪರಿವರ್ತನಾ ಕಾಲವಾದ್ದರಿಂದ ಒಂದೊಂದು ಮಂಡಳಿಯದು ಒಂದೊಂದು ಸಾಧನೆ. ಹಲವಾರು ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡು ರಂಗಭೂಮಿಗೆ ಕ್ಷಿಪ್ರ ಬದಲಾವಣೆತಂದ ಅವಧಿ. ಆದ್ದರಿಂದ ಮೇಲೆ ಹೆಸರಿಸಲಾದ ಕಂಪನಿಗಳ ಸಾಧನೆ ವಿಶೇಷತೆಗಳನ್ನು ಪ್ರತ್ಯೇಕವಾಗಿ ಗಮನಿಸಿದಾಗ ವೃತ್ತಿ ರಂಗಭೂಮಿ ಬೆಳೆದು ಬಂದ ಇತಿಹಾಸ ಸ್ಪಷ್ಟವಾಗಿ ಗೋಚರಿಸುತ್ತದೆ.

## I. ಶ್ರೀ ಮಹಾಲಕ್ಷ್ಮಿ ಪ್ರಸಾದಿಕ ಸಂಗೀತನಾಟಕ ಮಂಡಳಿ, ಶಿರಹಟ್ಟಿ :

ಅತ್ಯಂತ ಕಿರಿಯ ಅಂದರೆ ತಮ್ಮ 18ನೇ ವಯಸ್ಸಿನಲ್ಲಿ ವೃತ್ತಿರಂಗಮಂಡಳಿಯೊಂದನ್ನು ಕಟ್ಟಿದ ಶಿರಹಟ್ಟಿ ವೆಂಕೋಬರಾಯರ ಧೈರ್ಯ ಮತ್ತು ಸಾಹಸವನ್ನು ಮೆಚ್ಚಲೇ ಬೇಕು. ಬಾಲ್ಯದಲ್ಲಿಯೇ ಅಂಟಿಕೊಂಡ ರಂಗದ ಗೀಳು ಅದ್ಭುತ ಸಂಘಟನಾ ಸಾಮರ್ಥ್ಯ, ಅಂದುಕೊಂಡಿದ್ದನ್ನು ಸಾಧಿಸಬೇಕೆಂಬ ಛಲ, ಈ ಎಲ್ಲಾ ಗುಣಗಳು ವೆಂಕೋಬರಾಯರನ್ನು ಮಂಡಳಿ ಕಟ್ಟಲು ಪ್ರೇರೇಪಿಸಿದವು.

ಶಿವಮೂರ್ತಿಸ್ವಾಮಿ ಕಣಬರ್ಗಿಮಠ ಅವರಂತೆಯೆ ಶಿಸ್ತುಗಾರರಾಗಿದ್ದ ವೆಂಕೋಬರಾಯರೂ ಕೂಡಾ ಸಾಕಷ್ಟು ಮುಂದಾಲೋಚನೆ ಮತ್ತು ತಯ್ಯಾರಿಯೊಂದಿಗೆ ಅಂದರೆ ಒಳ್ಳೋಳ್ಳೆಯ ನಟರು ನಿರ್ದೇಶಕರು, ನಾಟಕ ರಚಿಸುವ ಕವಿಗಳು, ಸಂಗೀತಗಾರರು, ವಾದ್ಯಗಳು ರಂಗಪರಿಕರಗಳೊಂದಿಗೆ ರಂಗಭೂಮಿಗೆ ಪ್ರವೇಶ ಮಾಡಿದರು. 1903ರಲ್ಲಿಯೇ ಮಂಡಳಿಯನ್ನು ಸ್ಥಾಪಿಸಿದ್ದರೂ 1906 ರಿಂದ 1913ರವರೆಗೆ ಕಂಪನಿ ಬೃಹದಾಕಾರವಾಗಿ ಬೆಳೆದು ನಿಂತಿತು. "ಸುಂದೋಪಸುಂದ" ನಾಟಕದ ಪ್ರಥಮ ಪ್ರದರ್ಶನದೊಂದಿಗೆ ಆರಂಭವಾದ ಇವರ ರಂಗಯಾತ್ರೆ, ಗದುಗಿನ ಕಡೆಗೆ ಅಲ್ಲಿಂದ ಹುಬ್ಬಳ್ಳಿ ಧಾರವಾಡಕ್ಕೆ ಮುಂದುವರೆಯಿತು. ಇಷ್ಟರಲ್ಲಿಯೇ ಕಂಪನಿ ಅಪಾರವಾಗಿ ಬೆಳೆದಿತ್ತು. ಆಗ 1908ನೇ ಇಸ್ವಿ ಮುಂದೆ ಎರಡು ವರ್ಷ ಉತ್ತರ ಕರ್ನಾಟಕದ ನಾನಾ ಕಡೆ ಕ್ಯಾಂಪು ಮಾಡಿದ ಕಂಪನಿ 1910ರಲ್ಲಿ ಬೆಂಗಳೂರು ಕ್ಯಾಂಪ ಮಾಡಿತು. ಉತ್ತರ ಕರ್ನಾಟಕದ ತಂಡವೊಂದು ದಕ್ಷಿಣ ಕರ್ನಾಟಕಕ್ಕೆ ಮೊಟ್ಟಮೊದಲು ಕಾಲಿಟ್ಟಿದ್ದು ಬಹುಶಃ ಇದೇ ತಂಡವಿರಬೇಕು. ಯಾಕೆಂದರೆ, ಈ ಮೊದಲಿನ ಕೊಣ್ಣೂರ ಕಂಪನಿ ಬಳ್ಳಾರಿಯಿಂದ ಆಂಧ್ರದ ಕಡೆಗೆ ಪ್ರವಾಸಮಾಡಿತ್ತು. ಪುನಃ ಬೆಂಗಳೂರು ಕಡೆ

ಹೋಗಿರಲ್ಲಿಲ್ಲವೆಂಬುದು ಗಮನಾರ್ಹ. ಅಷ್ಟರಲ್ಲಿ ಕಂಪನಿಗೆ ಹೊಸ ಹೊಸ ನಾಟಕಗಳೂ ಸೇರಿಕೊಂಡಿದ್ದವು. ಸಂಗೀತ ಅಭಿನಯಗಳೆರಡಕ್ಕೂ ಪ್ರಾಶಸ್ತ್ಯವಿತ್ತು.

"ಇವರ ರಂಗ ಸಂಗೀತದ ಜನಪ್ರೀಯತೆಯಿಂದ ನಾಟಕದ ಕೀರ್ತಿ ಮೈಸೂರು ಅರಮನೆಗೂ ತಲುಪಿತು. ಮಹಾರಾಜರ ಆಮಂತ್ರಣದ ಮೇರೆಗೆ ಅವರ ರಂಗಮಂದಿರದಲ್ಲಿ 'ಭೋಜ ಪ್ರಬಂಧ' ಮತ್ತು 'ಪ್ರಲ್ಹಾದ' ನಾಟಕಗಳು ಪ್ರದರ್ಶನಗೊಂಡವು. ರಾಜರು ಆನಂದ ಭರಿತರಾಗಿ ಕಲೆಗೆ ಉತ್ತೇಜನವೆಂದು ಎರಡು ಸಾವಿರ ರೂ. ಪ್ರೋತ್ಸಾಹಧನ ನೀಡಿ ವೆಂಕೋಬರಾಯ, ವಾಮನರಾಯ, ಗೋವಿಂದಾಚಾರ್ಯ, ಚನ್ನಯ್ಯ, ಕೊಟ್ರಯ್ಯ ಮತ್ತು ಮಲ್ಲೂರಪ್ಪ ಇವರಿಗೆಲ್ಲ ಬಂಗಾರದ ಪದಕನೀಡಿ ಗೌರವಿಸಿದರು. ರಾಜಮರ್ಯಾದೆಯಿಂದ ಸಂಘದ ಕೀರ್ತಿ ಇನ್ನಷ್ಟು ಬೆಳಗುವಂತಾಯಿತು."[5]

ಕಂಪನಿಯ ಪ್ರಮುಖ ನಟರು ಕೈಕೊಡುವ ಪದ್ಧತಿ ಬಹುಶಃ ಈ ಕಂಪನಿಯಿಂದಲೇ ಆರಂಭವಾಯಿತೇನೋ 1913ರಲ್ಲಿ ಕಂಪನಿಯ ಪ್ರಬುದ್ಧ ನಟರಾಗಿದ್ದ, ವಾಮನರಾವ ಮಾಸ್ತರ, ಗೋವಿಂದಾಚಾರ್ಯ, ಚನ್ನಯ್ಯ, ಮಲ್ಲೂರಪ್ಪ, ಏಕಕಾಲದಲ್ಲಿ ಕಂಪನಿ ತೊರೆದರು. ಧೃತಿಗೆಡದ ವೆಂಕೋಬರಾಯರು ಮತ್ತೆ ಹೊಸಬರನ್ನು ಹುಡುಕಿತಂದು ಕಂಪನಿಯನ್ನು ಮೊದಲಿನ ಸ್ಥಿತಿಗೆ ತಂದರು.

ಕಂಪನಿಯಿಂದ ಏಕಕಾಲದಲ್ಲಿ ಎರಡು ಕಡೆ ನಾಟಕಗಳನ್ನು ಪ್ರಚಾರ ಮಾಡಿದ ಮೊದಲ ಕಂಪನಿಯೂ ಇದೆ ಆಗಿದೆ. ಅದೂ ಒಂದೇ ಊರಲ್ಲಿ ಇದು ನಡೆದದ್ದು ಕಂಪನಿ ಧಾರವಾಡಕ್ಕೆ ಕ್ಯಾಂಪ ಮಾಡಿದಾಗ ಒಬ್ಬರ ಒಡೆತನಕ್ಕೆ ಸೇರಿದ್ದ ಗದಗ ಮತ್ತು ವಿಕ್ಟೋರಿಯಾ ಥೇಟರಗಳಲ್ಲಿ (ಮುಂದೆ ಅರಿಶಿಣಗೋಡಿ ಮತ್ತು ಎನ್. ಬಸವರಾಜರಂಥವರು 3–4 ಕಡೆಗೆ ಕಂಪನಿಯ ಶಾಖೆಗಳನ್ನು ತೆರೆಯಲು ಇವರೆ ಪ್ರೇರಣೆಯಾಗಿರಲೂ ಸಾಕು). ಇವರು ಬೇರೆ ಬೇರೆ ನಾಟಕಗಳನ್ನು ಪ್ರದರ್ಶಿಸಿದರು. ಎರಡು ಥೇಟರುಗಳು ಅಕ್ಕಪಕ್ಕದಲ್ಲಿಯೂ ಇದ್ದುದರಿಂದ ಪಾತ್ರದಾರಿಗಳು ಎರಡು ಕಡೆ ಪಾತ್ರ ನಿರ್ವಹಿಸಿದರು.

ಕರ್ನಾಟಕವಷ್ಟೇ ಅಲ್ಲ ನೆರೆಯ ರಾಜ್ಯಗಳ ಕಡೆಗೆ ಮುಂದುವರೆದ ಇವರ ರಂಗಯಾತ್ರೆ ಮದ್ರಾಸ, ಕೊಯಿಮುತ್ತೂರ, ಮಹಾರಾಷ್ಟ್ರದ ಮಿರಜ, ಸಾಂಗಲಿ, ಇಚಲಕರಂಜಿ, ಸೊಲ್ಲಾಪೂರಗಳಲ್ಲಿ ತಿಂಗಳುಗಟ್ಟಲ್ಲೇ ಕ್ಯಾಂಪಮಾಡಿ, ಕನ್ನಡಿಗರಲ್ಲದವರೂ ಕನ್ನಡ ನಾಟಕಗಳನ್ನು ನೋಡುವಂತೆ ಆಕರ್ಷಿಸಿದ ಇವರ ಸಾಧನೆ ರಂಗಭೂಮಿ ಇತಿಹಾಸದಲ್ಲೊಂದು ಮೈಲಿಗಲ್ಲೇ ಸರಿ. 1929ರಲ್ಲಿ ಕಂಪನಿ ಮಂಗಳೂರಿನಲ್ಲಿ ಕ್ಯಾಂಪ ಮಾಡಿದಾಗ, ಅಲ್ಲಿಗೆ ಸೇವಾದಳದ ಕಾರ್ಯಕ್ರಮಒಂದರಲ್ಲಿ ಭಾಗವಹಿಸಲು ಬಂದಿದ್ದ ಪಂಡಿತ ಜವಾಹರಲಾಲ ನೆಹರೂರವರು ಇವರ ನಾಟಕವನ್ನು ನೋಡಿ ಸಂತೋಷಭರಿತರಾಗಿ ಇವರ ಕಲಾಸೇವೆಯ ಬಗ್ಗೆ ಪ್ರಶಂಸೆ ವ್ಯಕ್ತಪಡಿಸುತ್ತಾರೆ. ಇದೊಂದು ಐತಿಹಾಸಿಕ ಘಟನೆಯೇ ಸರಿ.

---

[5] ಡಾ. ರಾಮಕೃಷ್ಣ ಮರಾಠೆ. 'ಉತ್ತರ ಕರ್ನಾಟಕದ ರಂಗಭೂಮಿ.' ಪುಟ 70–71.

ಜಾಹೀರಾತು ವ್ಯವಸ್ಥೆ ಅಷ್ಟೊಂದು ಪ್ರಭಾವಶಾಲಿಯಾಗಿ ಬೆಳೆದಿರದ ಆಗಿನ ಕಾಲದಲ್ಲಿ ವ್ಯವಹಾರ ಚತುರರೂ, ದೇಶಪ್ರೇಮಿಗಳೂ ಆಗಿದ್ದ ವೆಂಕೋಬರಾಯರು ಸಮಾಜದ ಗಣ್ಯ ವ್ಯಕ್ತಿಗಳನ್ನು ಕಂಪನಿಗೆ, ಆಮಂತ್ರಿಸಿ ನಾಟಕ ತೋರಿಸುತ್ತಿದ್ದರು. ಇದರಿಂದ ಕಂಪನಿಯ ಪ್ರಚಾರ, ಆದಾಯ ಎರಡೂ ಹೆಚ್ಚುತ್ತಿತ್ತು. ಉಡುಪಿಯಲ್ಲಿ ಕ್ಯಾಂಪ ಇದ್ದಾಗ ಅಷ್ಟ ಮಠದ ಶ್ರೀಗಳು, ಜಮಖಂಡಿಯಲ್ಲಿದ್ದಾಗ ಸಂಸ್ಥಾನಿಕರಾಗಿದ್ದ ರಾಜಾಸಾಹೇಬರು, ಸಾಂಗಲಿಯಲ್ಲಿದ್ದಾಗ ಅಲ್ಲಿಯ ಸಂಸ್ಥಾನಿಕರು, ಬಾಲಗಂಗಾಧರ ತಿಲಕರು ಇನ್ನೂ ಹಲವಾರು ಜನಗಣ್ಯರು ಇವರ ನಾಟಕಗಳನ್ನು ನೋಡಿ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಇನ್ನು ಇವರ ರಂಗವೈಭವವಂತೂ ಹೇಳತೀರದು. ಆಗಿನ ಕಾಲದಲ್ಲಿ ಇವರದೇ ಅತ್ಯಂತ ದೊಡ್ಡ ಕಂಪನಿಯಾಗಿತ್ತು. ಈ ಅವಧಿಯಲ್ಲಿಯೇ (1919) ಆಗಲೇ ಆರಂಭವಾಗಿದ್ದ ಇನ್ನೊಂದು ಪ್ರಮುಖ ಕಂಪನಿ ಗರುಡ ಸದಾಶಿವರಾಯರದಾಗಿತ್ತು. ಗರುಡರ ಕಂಪನಿಯ ಸಾಮಾನುಗಳು ಹನ್ನೊಂದು ಎತ್ತಿನಗಾಡಿಯಲ್ಲಿ ಸಾಗಿಸುವಷ್ಟಿದ್ದರೆ, ವೆಂಕೋಬರಾಯರ ಸಾಮಾನುಗಳು 47 ಎತ್ತಿನಗಾಡಿಯಲ್ಲಿ ಸಾಗಿಸುವಷ್ಟಿದ್ದವು. ಬಾಳೆ ಹೊಸೂರು ರಾಮರಾಯರು ವೆಂಕೋಬರಾಯರ ಕಂಪನಿಯನ್ನು ಒಂದು ಚಿಕ್ಕ ಸಂಸ್ಥಾನವೆಂದೇ ಕರೆದರೆಂದರೆ, ಇದು ಎಷ್ಟೊಂದು ವೈಭವಪೂರ್ಣವಾಗಿ ಬಾಳಿದ ಕಂಪನಿಯೆಂಬುದು ಅರ್ಥವಾಗುತ್ತದೆ. ಆಗಿನ ಕಾಲದಲ್ಲಿ ತಹಶೀಲದಾರರಿಗೆ ತಿಂಗಳಿಗೆ 40ರೂ ಇದ್ದಾಗ ಇವರು ಪೇಂಟರಗಳಿಗೆ 100–150 ರೂಪಾಯಿ ಸಂಬಳ ಕೊಡುತ್ತಿದ್ದರಂತೆ. ಅದರಲ್ಲೀ ಮುತ್ತುವೇಲು ಎಂಬ ಪರದೆ ಬರೆಯುವ ಪೇಂಟರಗೆ 350 ರೂ ಕೊಡುತ್ತಿದ್ದರೆಂದರೆ ನಂಬಲೂ ಕಷ್ಟ ಅಲ್ಲವೇ? ಮನುಷ್ಯ ಹುಟ್ಟಿನ ಜತೆಗೆ ಸಾವನ್ನು ಕಟ್ಟಿಕೊಂಡೆ ಹುಟ್ಟುವಂತೆ ಯಾವುದೇ ಆರಂಭಕ್ಕೂ ಅಂತ್ಯವೆನ್ನುವುದು ಇದ್ದೆ ಇದೆ. ಹಾಗೆಯೇ ವೆಂಕೋಬರಾಯರ ಕಂಪನಿಗೆ 1932 ರಿಂದ ಶನಿದೆಶೆ ಆರಂಭವಾಯ್ತು. ಸ್ವತಃ ವೆಂಕೋಬರಾಯರು ಅನಾರೋಗ್ಯಕ್ಕೆ ತುತ್ತಾದರು. ಆದಾಯದಲ್ಲಿ ಇಳಿಕೆಯಾಗಿ ಕಂಪನಿಯ ಸಾಲ ಹೆಚ್ಚಾಗತೊಡಗಿತು. ಸಾಲಕ್ಕಾಗಿ ಅಮೂಲ್ಯ ರಂಗಸಜ್ಜಿಕೆಗಳನ್ನು ಒತ್ತೆ ಇಡಬೇಕಾಯಿತು. ಪರಿಸ್ಥಿತಿ ಮತ್ತಷ್ಟು ಹದಗೆಡತೊಡಗಿದಾಗ 1934ರಲ್ಲಿ ಇಲಕಲ್ ಕ್ಯಾಂಪಿನಲ್ಲಿ ಕಂಪನಿ ನಿಂತೇ ಹೋಯಿತು. ಮೂರು ದಶಕಗಳ ಇವರ ರಂಗಸೇವೆಯಲ್ಲಿ ಕನ್ನಡ ರಂಗಭೂಮಿ ಘನತೆ ಗೌರವವನ್ನು ಪಡೆಯಿತು. ಕನ್ನಡ ರಂಗಭೂಮಿ ತಲೆಎತ್ತಿನಿಂತಿತು. ಕರ್ನಾಟಕವಲ್ಲದೆ ನೆರೆಯ ರಾಜ್ಯಗಳಲ್ಲಿಯೂ ಈ ಕಂಪನಿಯ ಕೀರ್ತಿ ಬೆಳೆದು ನಿಂತಿತು. ಉತ್ತರ ಕರ್ನಾಟಕದ ಭಾಗಗಳಲ್ಲಿ ಬಂದಾಗ ದಿ। ಎಸ್. ನಿಜಲಿಂಗಪ್ಪ, ವೈಕುಂಠಬಾಳಿಗಾ, ದಿ. ದೇವರಾಜ ಅರಸು ಮುಂತಾದವರೆಲ್ಲ ನಾವೆಲ್ಲ ಶಿರಹಟ್ಟಿಕಂಪನಿಯ ನಾಟಕಗಳನ್ನು ನೋಡಿದ್ದೇವೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರಂತೆ.

ಅಚ್ಚುಕಟ್ಟಾದ ಅಭಿನಯ ತರಬೇತಿ, ಶಿಸ್ತು, ಸಂಗೀತ ಶಿಕ್ಷಣ ಮುಂತಾದವುಗಳನ್ನು ನೀಡುತ್ತಲೇ ಬೆಳೆದ ಈ ಕಂಪನಿ ಅನೇಕ ಪ್ರಬುದ್ಧ ನಟ ನಟಿಯರನ್ನು ಉತ್ತರ ಕರ್ನಾಟಕದ ವೃತ್ತಿರಂಗಭೂಮಿಗೆ ಕೊಡುಗೆಯಾಗಿ ನೀಡಿದ್ದನ್ನು ಮರೆಯುವಂತಿಲ್ಲ.

## II. ಆರ್ಯ ಸಂಗೀತ ನಾಟಕ ಮಂಡಳಿ ರಾಮದುರ್ಗ :

ಶಿವಮೂರ್ತಿ ಸ್ವಾಮಿಗಳ ಕೊಣ್ಣೂರು ಕಂಪನಿ, ವೆಂಕೋಬರಾಯರ ಶಿರಹಟ್ಟಿಕಂಪನಿಗಳು ತಮ್ಮ ವೈಭವಯುತ, ಆಕರ್ಷಕ ರಂಗಯಾತ್ರೆಯಿಂದ ನಾಡಿನಾದ್ಯಂತ ತುಂಬ ಪ್ರಭಾವ ಬೀರಿದವು. ಕಲಾಭಿಮಾನಿಗಳಿಗೆ ರಸದೌತಣ ನೀಡಿದ ಈ ಕಂಪನಿಗಳು ಕಲೆಯಲ್ಲಿ ತೀವ್ರ ಆಸಕ್ತಿ, ಸಂಗೀತದ ಒಲವುಳ್ಳ ಅನೇಕರಿಗೆ ನಾಟಕ ಕಂಪನಿಮಾಡಲು ತುಂಬ ಪ್ರೇರಣೆ ನೀಡಿದವೆಂದೇ ಹೇಳಬೇಕು. ಈ ಕಂಪನಿಯಿಂದ ಪ್ರಭಾವಿತರಾದ ರಾಮದುರ್ಗದ ಕೆಲಯುವಕರು ಸೇರಿ "ಆರ್ಯ ಸಂಗೀತ ನಾಟಕ ಮಂಡಳಿ ರಾಮದುರ್ಗ" ಎಂಬ ತಂಡವನ್ನು ಪ್ರಾರಂಭಿಸಿದರು. ದೇವಾಂಗ ಸಮಾಜಕ್ಕೆ ಸೇರಿದ ಈ ಯುವಕರು ನೇಕಾರಿಕೆ ವೃತ್ತಿಯನ್ನು ಮಾಡುತ್ತಿದ್ದರು. ರಾಮದುರ್ಗದವರೇ ಆದ ಈರಪ್ಪ ಚಂದರಗಿ, ದೇವಕಾರೆಪ್ಪಾ, ಗೌಡ್ರಆರಿ, ರಾಚನಗೌಡ ಆರಿ, ರಾಮಚಂದ್ರಕಟ್ಟಿ, ಪತ್ರೆಪ್ಪ ಅಕ್ಷರದ, ತಿರುಕಪ್ಪ ಬರಡೂರ, ಸಂಕಪ್ಪ ಮುಗಳಿ ಎಂಬ ಕಲಾವಿದರೆಲ್ಲ ಈ ಮಂಡಳಿಯ ಸಂಸ್ಥಾಪಕರು.

**ಈ ಮಂಡಳಿಯ ವಿಶೇಷತೆಗಳು :**

**ಸಾಮೂಹಿಕ ಮಾಲಿಕತ್ವ :** ಈ ಮಂಡಳಿಗೆ ಒಬ್ಬರೆ ಮಾಲೀಕರ ಒಡೆತನವಿಲ್ಲದೆ, ಸಾಮೂಹಿಕ ಮಾಲಿಕತ್ವದಲ್ಲಿ ಹುಟ್ಟಿಕೊಂಡ ಮೊದಲ ವೃತ್ತಿಮಂಡಳಿ.

**ಸಾಮಾನ್ಯರೆ ಎಲ್ಲ :** ಈ ಮಂಡಳಿಯ ಎಲ್ಲ ಕಲಾವಿದರೂ ಸಾಮಾನ್ಯರೆ ಆಗಿದ್ದು, ಜೀವನಕ್ಕಾಗಿ ನೇಕಾರಿಕೆಯನ್ನು ಅವಲಂಬಿಸಿದವರು. ದುಡಿದ ಹಣದಲ್ಲಿ ಎಲ್ಲರೂ ಸೇರಿಸಿ ರಂಗಪರಿಕರ, ಖರ್ಚಿ, ಮೊದಲಾದವನ್ನು ಕೂಡಿಸಿಕೊಂಡವರು. ಮಂಡಳಿಯ ಸಂಘಟನೆ ಪ್ರದರ್ಶನ ಪದ್ಧತಿಗಳು ವೃತ್ತಿರಂಗಭೂಮಿಗೆ ತಕ್ಕಂತೆ ಇದ್ದರೂ ಇವರು ಉಪಜೀವನಕ್ಕಾಗಿ ಮಂಡಳಿಯ ಆದಾಯವನ್ನು ಅವಲಂಭಿಸಿರಲಿಲ್ಲ. ಜಾತ್ರೆಗಳ ಹಂಗಾಮಿನಲ್ಲಿ ಮಾತ್ರ ತಿರುಗಾಟ.

ಇವರು ನೇಕಾರಿಕೆ ವೃತ್ತಿಯವರಾಗಿದ್ದರಿಂದ ರಂಗಕಲೆಯನ್ನು ಅಭಿರುಚಿಗಾಗಿ, ಮತ್ತು ಮನರಂಜನೆ ಪ್ರತಿಷ್ಠೆಗಳಿಗಾಗಿ ಹಮ್ಮಿಕೊಂಡಿದ್ದರು. ಹೀಗಾಗಿ ಜಾತ್ರೆಗಳ ಹಂಗಾಮಿನಲ್ಲಿ ಮಾತ್ರ ಪ್ರದರ್ಶನಗಳನ್ನು ಇಟ್ಟುಕೊಳ್ಳುತ್ತಿದ್ದರು. ಬದಾಮಿ ಬನಶಂಕರಿ ಜಾತ್ರೆ, ಗೊಡಚಿ ವೀರಭದ್ರೇಶ್ವರ ಜಾತ್ರೆಗಳಲ್ಲಿ

ತಪ್ಪದೇ ಕ್ಯಾಂಪ ಮಾಡುತ್ತಿದ್ದರು. ವರ್ಷಕ್ಕೊಮ್ಮೆ ತಮ್ಮ ಸ್ವಂತ ಊರಾದ ರಮದುರ್ಗದಲ್ಲಿ ಕ್ಯಾಂಪ ಮಾಡುತ್ತಿದ್ದರು.

**ಆದಾಯ ಪರಿಕರಗಳಿಗಾಗಿ :**

ರಾಮದುರ್ಗದಲ್ಲಿ ಕ್ಯಾಂಪ ಮಾಡಿದಾಗ ಖರ್ಚು ಕಡಿಮೆ ಇರುತ್ತಿತ್ತು. ಬಂದ ಆದಾಯವನ್ನು ಹೊಸ ನಾಟಕದ ರಂಗ ಪರಿಕರಗಳಿಗಾಗಿ ಬಳಸುತ್ತಿದ್ದರು.

ಈ ಕಲಾವಿದರು ಗುರುಡರು ರಚಿಸಿದ "ಚವತಿಯ ಚಂದ್ರ" ಎಂಬ ನಾಟಕದ ಚೋಪಡಿ (ಹಸ್ತಪ್ರತಿ) ಕದ್ದು ತಂದು ತಾವು ಆಡಿದರು. ಇದು ಗೊತ್ತಾಗಿ ಗರುಡರು ಇವರ ಮೇಲೆ ಕೇಸು ಹಾಕುವುದಾಗಿ ಬೆದರಿಕೆ ಹಾಕಿದರು. ಕೊನೆಗೊಮ್ಮೆ ಇವರ ಪ್ರದರ್ಶನವನ್ನು ನೋಡಿ ಮೆಚ್ಚಿಕೊಂಡು ಪ್ರದರ್ಶನದ ಹಕ್ಕನ್ನು ಬಿಟ್ಟುಕೊಟ್ಟರಂತೆ.

**ದೀರ್ಘಕಾಲ ಬಾಳಿಕೆ :**

ಒಬ್ಬರೆ ಕಟ್ಟಿದ ತಂಡಗಳೆ ಅಲ್ಪಕಾಲದಲ್ಲೆ ಮುಚ್ಚಿಕೊಂಡ ಉದಾಹರಣೆಗಳು ವೃತ್ತಿರಂಗಭೂಮಿಯ ಇತಿಹಾಸದಲ್ಲಿ ಬೇಕಾದಷ್ಟು ಸಿಗುತ್ತವೆ. ಆದರೆ ಸಾಮೂಹಿಕ ಮಾಲಿಕತ್ವ ಹೊಂದಿದ ತಂಡ ಅತ್ಯಂತ ದೀರ್ಘಕಾಲಬಾಳಿತು. 1906ರಲ್ಲಿ ಹುಟ್ಟಿಕೊಂಡ ಈ ಮಂಡಳಿಯನ್ನು 1950ರವರೆಗೆ ಸಂಸ್ಥಾಪಕ ಕಲಾವಿದರೆ ಮುನ್ನಡೆಸಿದರು. ಅಲ್ಲಿಂದ ತರಭೇತಿ ಪಡೆದ ಯುವಕರು ಮಂಡಳಿಯನ್ನು 1970ರವರೆಗೂ ಬಾಳಿಬದುಕಿಸಿದ್ದು ಆಶ್ಚರ್ಯವನ್ನು ಹುಟ್ಟಿಸುತ್ತದೆ.

**ಪುರುಷರೇ ಎಲ್ಲಾ :**

ಇಷ್ಟೊಂದು ದೀರ್ಘಕಾಲದವರೆಗೆ ಬಾಳಿದ ಈ ಕಂಪನಿಯಲ್ಲಿ ಕೊನೆಯರವರೆಗೂ ಮಹಿಳೆಯರಿಗೆ ಪ್ರವೇಶ ನೀಡಲಿಲ್ಲ. ಕೊನೆಯವರೆಗೂ ಪುರುಷರೇ ಸ್ತ್ರೀಪಾತ್ರಧಾರಿಗಾಗಿ ಅಭಿನಯಿಸಿರುವುದು ಈ ಮಂಡಳಿಯ ವಿಶೇಷತೆ. ಸಾಮೂಹಿಕ ಒಡೆತನದಲ್ಲಿದ್ದರೂ ದೀರ್ಘಕಾಲಬಾಳಿದ ಯಶಸ್ಸಿನ ಗುಟ್ಟು ಇದೇ ಆಗಿರಬಹುದೇನೋ?

**III. ಶ್ರೀ ಹಾಲಸಿದ್ದೇಶ್ವರ ಸಂಗೀತ ನಾಟಕಮಂಡಳಿ ಹಲಗೇರಿ :**

ರಾಮದುರ್ಗದ ಆರ್ಯ ಸಂಗೀತ ನಾಟಕ ಮಂಡಳಿಯು ಸಾಮಾನ್ಯ ಕಲಾವಿದರ ಆಸಕ್ತಿ ಮತ್ತು ಪಾಲುದಾರಿಕೆಯಲ್ಲಿ ಆರಂಭವಾದರೆ, ಹಲಗೇರಿ "ಹಾಲಸಿದ್ದೇಶ್ವರ ಸಂಗೀತ ನಾಟಕ ಮಂಡಳಿ" ನಿಜಅರ್ಥದಲ್ಲಿ ಕಂಪನಿಯ ಸ್ವರೂಪದಲ್ಲೇ ಆರಂಭವಾಯ್ತು. ಇದೇ ಇದರ ವಿಶೇಷ. ಅಂದರೆ ಊರಿನ ಗ್ರಾಮಸ್ಥರು ಕಂಪನಿಕಟ್ಟಲು ಶೇರುಗಳನ್ನು ಮಾರಿ ಹಣ ಸಂಗ್ರಹಿಸಿದರು. ಶೇರು ಕೊಂಡವರು

ರಿಯಾಯತಿ ದರದಲ್ಲಿ ನಾಟಕ ನೊಡಬಹುದಾಗಿತ್ತು. ಅಲ್ಲದೆ ಕಂಪನಿಗಳಿಸುವ ಲಾಭದಲ್ಲಿ ಪಾಲುಗಾರಿಕೆಯನ್ನೂ ಸಾರಲಾಯಿತು. ಲಿಂಗನಗೌಡ ಪಾಟೀಲ ಎಂಬುವರ ನೇತ್ರತ್ವದಲ್ಲಿ 1911ರಲ್ಲಿ ಕಂಪನಿ ಆರಂಭವಾಯಿತು. ನಾಟಕಗಳ ಆಯ್ಕೆ ತರಬೇತಿ ಪ್ರದರ್ಶನದ ಜವಾಬ್ದಾರಿಯಲ್ಲಿ ದೊಡ್ಡ ಜಟ್ಟೆಪ್ಪನವರು ನೋಡಿಕೊಳ್ಳುತ್ತಿದ್ದರು. ಪ್ರಾರಂಭದಲ್ಲಿ "ರಾಕ್ಷಿಸಿ ಮಹತ್ವಾಕಾಂಕ್ಷೆ" ಎಂಬ ಖಾಡಿಲ್ಕರರ ಮರಾಠಿ ನಾಟಕವನ್ನು ಅನುವಾದಿಸಿ ಪ್ರಯೋಗಕ್ಕೆ ಅಳವಡಿಸಿದರು. ಜಟ್ಟೆಪ್ಪನವರು ಪ್ರತಿಭಾವಂತ ನಟರಾಗಿದ್ದಲ್ಲದೇ ತರುಣ ಕಲಾವಿದರನ್ನು ಪಳಗಿಸುವ ಅನುಭವಿಕರಾಗಿದ್ದರು. ಇವರು ನಾಯಕ ನಟರಾದರೆ ನಾಯಕಿಯಗಿ ರಾಚಪ್ಪನವರು, ಮುದ್ದುವೀರಾಚಾರ್ಯರ ಸಂಗೀತ, ಪ್ರಬುದ್ಧ ನಟರಾದ ಅಬ್ಬಿಗೇರಿ ವೀರಯ್ಯ, ಚಿಂದೋಡಿ ವೀರಪ್ಪ, ಕಡಪಟ್ಟಿ ಬಸಲಿಂಗಯ್ಯ ಮುಂತಾದವರು ಕಂಪನಿಯ ಆಸ್ತಿಯಾಗಿದ್ದರು.

ಕಂಪನಿ ಉತ್ತಮ ಬೆಳವಣಿಗೆ ಹೊಂದಲು ಏಳು ವರ್ಷಬೇಕಾಯಿತು. ಅಷ್ಟರಲ್ಲಾಗಲೇ ಕಂಪನಿಗಾಗಿ ಹಣ ಹಾಕಿದವರು ಅದನ್ನು ಹಿಂಪಡೆಯಲು ಮುಂದಾದರು. ಕಂಪನಿ ಸುಗಮವಾಗಿ ಸಾಗಲು ಇದರಿಂದ ಅಡಚಣೆಯಾಯಿತು. ಜಟ್ಟೆಪ್ಪನವರು ಸಾಲಮಾಡಿ ಅವರನ್ನೆಲ್ಲ ಸಮಾಧಾನ ಪಡಿಸಿದರು. ಸಮಸ್ಯೆ ಬಗೆಹರಿಯುವ ಬದಲು ಮತ್ತೊಂದು ಸ್ವರೂಪ ಪಡೆಯಿತು. ಸಾಲಗಾರರ ಕಾಟ ಶುರುವಾಯಿತು. ಜಟ್ಟೆಪ್ಪನವರು ಸಾಲಗಾರರಿಂದ ಮುಖಮರೆಸಿಕೊಳ್ಳಲು ಬ್ಯಾಡಗಿ ಕ್ಯಾಂಪಿನಲ್ಲಿ ನಾಟಕ ಥೇಟರದಿಂದ ನಾಟಕ ಮುಗಿದ ತಕ್ಷಣ ಸಾಲಗಾರರ ಕಣ್ಣು ತಪ್ಪಿಸಿ ರೈಲು ನಿಲ್ದಾಣದವರೆಗೆ ನಡೆದು ಹೋಗಿ ಮರುದಿನ ನಾಟಕ ಶುರುವಾಗುವ ಹೊತ್ತಿಗೆ ಬಂದು ರಂಗಪಾರ್ಟಿಯೊಳಗೆ ಹೊಕ್ಕು ಬಿಡುತ್ತಿದ್ದರಂತೆ. ಇದು ಬಹಳ ದಿನ ನಡೆಯಲಿಲ್ಲ. ಆಗ ಜಟ್ಟೆಪ್ಪನವರು ಆಡಳಿತವನ್ನೆಲ್ಲ ಲಿಂಗನಗೌಡರಿಗೆ ಒಪ್ಪಿಸಿ ತಾವು ಕಲಾವಿದರಾಗಿ ಮಾತ್ರ ಮುಂದುವರಿಯುತ್ತಾರೆ. ಲಿಂಗನಗೌಡರು ಮತ್ತು ಶಿವಪ್ಪ ದೇಸಾಯಿ ಎಂಬುವರೊಂದಿಗೆ ಹಾಗೂ ಹೀಗೂ ಮತ್ತೆರಡು ವರ್ಷ ಕಂಪನಿಯನ್ನು ಮುನ್ನಡೆಸುತ್ತಾರಾದರೂ ಕೊನೆಗೆ ಶಿವಪ್ಪ ದೇಸಾಯಿಯವರು ಶಿರಹಟ್ಟಿ ಕ್ಯಾಂಪಿನಲ್ಲಿದ್ದಾಗ ಸಾಮಾನುಗಳನ್ನೆಲ್ಲ ಒತ್ತೆ ಇಟ್ಟು ಕಂಪನಿಯಿಂದ ಹೊರನಡೆದು ಬಿಡುತ್ತಾರೆ.

1920ರಲ್ಲಿ ಚಿಕ್ಕಜಟ್ಟಪ್ಪ ಎಂಬುವರು ಪ್ರಯತ್ನಪಟ್ಟು ಪುನಃ ಕಂಪನಿಯನ್ನು ಆರಂಭಿಸುತ್ತಾರೆ. ದೊಡ್ಡ ಜಟ್ಟಪ್ಪನವರು ಸಾಥಕೊಡುತ್ತಾರೆ. ವ್ಯವಸ್ಥಾಪಕರಾಗಿ ಮಿಲಿಟರಿ ವಿರುಪಾಕ್ಷಪ್ಪ, ಕಲಾವಿದರಾಗಿ ಹಳ್ಳಿಗುಡಿ ಸದಾಶಿವಪ್ಪ, ಮರ್ದಾನ್‌ಜಾನ್, ಲೀಲಾವತಿ ರಾಮದುರ್ಗ ಜೊತೆಗೂಡುತ್ತಾರೆ. ರಿತ್ತಿ ಜಾತ್ರೆಯಿಂದ ಕಂಪನಿ ಆರಂಭವಾಗಿ ಚೇತರಿಸಿಕೊಳ್ಳತೊಡಗುತ್ತದೆ.

ಮುಂದೆ ತುಮಕೂರಿನಲ್ಲಿ ಒಳ್ಳೆಯ ಪ್ರೋತ್ಸಾಹ ಸಿಗುತ್ತದೆ. ಇದರಿಂದ ಉತ್ತೇಜಿತರಾಗಿ ಜಟ್ಟಪ್ಪನವರು ಬೆಂಗಳೂರಿಗೆ ಕ್ಯಾಂಪಮಾಡಲು ನಿರ್ಧರಿಸಿ ತಿಂಗಳುಗಟ್ಟಲೆ ಬೆಂಗಳೂರಿನಲ್ಲಿ ಪ್ರಚಾರ ಮಾಡಿಸುತ್ತಾರೆ. ಪ್ರಚಾರಕ್ಕಾಗಿ ಆಗಿನ ಕಾಲದಲ್ಲೇ 7000/-ರೂಗಳನ್ನು ಖರ್ಚುಮಾಡುತ್ತಾರೆ. ಒಂದು ದಿನ ಗುಬ್ಬಿ ವೀರಣ್ಣನವರಿಂದ ನಾಟಕ ಉದ್ಘಾಟನೆಯಾಗುತ್ತದೆ. ನಾಟಕ ಹೇಮರೆಡ್ಡಿ ಮಲ್ಲಮ್ಮ, ಇಷ್ಟೆಲ್ಲ ಪ್ರಚಾರ ಮಾಡಿದರೂ ಮೊದಲ ದಿನದ ಕಲೆಕ್ಷನ್ ಬರೀ 50 ರೂಪಾಯಿಯಾಗಿತ್ತು. ಗಾಬರಿಯಾದ ಜಟ್ಟಪ್ಪನವರ ಕ್ಯಾಂಪಬದಲಿಸಲು ಯೋಚಿಸುತ್ತಾರೆ. (ಆಗಲೇ ದೊಡ್ಡ ದೊಡ್ಡ ನಗರಗಳಲ್ಲಿ ಸಿನಿಮಾಗಳು ಜನರನ್ನು ಆಕರ್ಷಿಸತೊಡಗಿದ್ದವು). ಆದರೆ ಗುಬ್ಬಿ ವೀರಣ್ಣನವರ ಸಲಹೆಯಂತೆ ಟಿಕೇಟಕೊಡುವವರಿಂದ ಹಿಡಿದು ಗೇಟಕೀಪರಗಳವರೆಗೆ ಹೆಣ್ಣು ಮಕ್ಕಳನ್ನು ನಿಯಮಿಸುತ್ತಾರೆ. ಉಪಾಯ ಫಲಿಸುತ್ತದೆ. ನಾಟಕಕ್ಕೆ ನೂಕುನುಗ್ಗುಲು ಹೆಚ್ಚಾಗಿ ಮುಂಗಡ ಟಿಕೇಟ್ ಕೊಡುವ ಹಂತಕ್ಕೆ ಬರುತ್ತದೆ.

"ಈ ಕಂಪನಿಯು ಅಳವಡಿಸಿಕೊಂಡ ಮತ್ತೊಂದು ವಿಶೇಷವೆಂದರೆ, ನಾಟಕದಲ್ಲಿ ಹಾಸ್ಯಕ್ಕೆ ಪ್ರಾಧಾನ್ಯತೆ ನೀಡಿದ್ದು. ಅದ್ದೂರಿ ರಂಗಸಜ್ಜಿಕೆಗೆ ಶಿರಹಟ್ಟಿ ಕಂಪನಿ, ಸಂಗೀತಕ್ಕೆ ವಾಮನರಾಯರ ಕಂಪನಿ ಹೆಸರು ಪಡೆದಿದ್ದರೆ ಹಲಗೇರಿ ಕಂಪನಿ ಹಾಸ್ಯಕ್ಕೆ ಪ್ರಸಿದ್ಧಿ ಪಡೆಯಿತು. ಪ್ರೇಕ್ಷಕರ ಮನರಂಜನೆ ಎದೆಹಗುರ ಮಾಡಿ ಹೊಟ್ಟೆತುಂಬ ನಗಿಸುವುದೇ ತಮ್ಮ ನಾಟಕದ ಉದ್ದೇಶವೆಂಬುದನ್ನು ಜಟ್ಟೆಪ್ಪನವರು ಸಾರಿ ಹೇಳಿದರು."[6]

ಚಿಕ್ಕ ಜಟ್ಟೆಪ್ಪನವರು ಹಾಸ್ಯಪಟುವಾಗಿ ಜನಪ್ರೀಯರಾದರು. 1929ರಲ್ಲಿ ಮೈಸೂರಿನ ಅರಸರಾದ ನಾಲ್ವಡಿ ಕೃಷ್ಣರಾಜರು ಜಗಮೋಹನ ಪ್ಯಾಲೇಸನಲ್ಲಿ ಕಂಪನಿಯ "ಸ್ತ್ರೀ" ಮತ್ತು "ಬಿ.ಎ" ನಾಟಕಗಳನ್ನು ವೀಕ್ಷಿಸಿ ಚಿಕ್ಕ ಜಟ್ಟಪ್ಪನವರಿಗೆ "ವಿನೋದ ಪಟು" ಎಂಬ ಪ್ರಶಸ್ತಿಯನ್ನು ಕೊಡುತ್ತಾರೆ.

"ನೇರವಾಗಿ ಪ್ರೇಕ್ಷಕರನ್ನೆ ಹಾಸ್ಯಮಾಡಿ ಪ್ರಶ್ನೆಕೇಳಿ ಸಮಾಜದ ದೋಷಗಳನ್ನು ತಿದ್ದಿ, ಕಚಕುಳಿ ಇಟ್ಟು ನಗಿಸಿ, ಆದನೋವನ್ನು ಆ ಕ್ಷಣ ಮರೆಯುವಂತೆ ಮಾಡಿದರು. ಇದು ಹಾಸ್ಯದ ಹೊಸಹಾದಿ ಎನಿಸಿತು. ಇದರ ರುಚಿ ಕಂಡ ಪ್ರೇಕ್ಷಕರು ಮತ್ತೆ ಮತ್ತೆ ಮುಗಿಬಿದ್ದು ಅದೇ ನಾಟಕಗಳನ್ನು ನೋಡಿದರು."[7]

ಕಲಾವಿದರ ಕೊರತೆ ಆರ್ಥಿಕ ಮುಗ್ಗಟ್ಟಿನಿಂದ ಹಲಗೇರಿ ಕಂಪನಿ 1954ರಲ್ಲಿ ನಿಂತು ಬಿಡುತ್ತದೆ.

---

[6] ಡಾ. ಹೆಚ್. ಕೆ. ರಂಗನಾಥ, "ವೃತ್ತಿರಂಗಭೂಮಿ," ಪುಟ 143.
[7] ಡಾ. ಎಚ್. ಕೆ. ರಂಗನಾಥ, "ವೃತ್ತಿರಂಗಭೂಮಿ," ಪುಟ 144.

## IV. "ಸ್ತ್ರೀ ಸಂಗೀತ ನಾಟಕ ಮಂಡಳಿ" ಲಕ್ಷ್ಮೇಶ್ವರ

ವೃತ್ತಿರಂಗಭೂಮಿಯು ಬೆಳೆದ ಬಗೆಯನ್ನು ಪ್ರಮುಖ ಬದಲಾವಣೆಗಳನ್ನು (1921ರವರೆಗೆ) ಗಮನಿಸುತ್ತಿರುವ ನಾವು ಈ ಹಂತದಲ್ಲಿ ಮತ್ತೊಂದು ಪ್ರಮುಖ ಬೆಳವಣಿಗೆ ಎಂದರೆ ವೃತ್ತಿರಂಗಭೂಮಿಗೆ ಮಹಿಳೆಯೊಬ್ಬಳು ಪ್ರವೇಶಿಸಬೇಕಾದರೆ ವೃತ್ತಿರಂಗಭೂಮಿ ಆರಂಭವಾಗಿ 30 ವರ್ಷಗಳು ಕಳೆಯಬೇಕಾಯಿತು. ಇದಾದ ಸುಮಾರು 8–10 ವರ್ಷಗಳಲ್ಲಿ ಮಹಿಳೆಯೊಬ್ಬಳು ಕಂಪನಿಯೊಂದನ್ನೇ ಸ್ಥಾಪಿಸಿ ಅದರ ಒಡತಿಯಾಗಿ, ನಿರ್ದೇಶಕಿಯಾಗಿ ಬಿಡುತ್ತಾಳೆ. ಅವರ ಹೆಸರೇ ಗ್ವಾಲೇರ್ ಘರಾಣೆಯ ಅಭಿಜಾತ ಗಾಯಕಿ ಲಕ್ಷ್ಮೇಶ್ವರದ ಬಚ್ಚಾಸಾನಿ ದೊಡ್ಡಮನಿ.

"ಲಕ್ಷ್ಮೇಶ್ವರದ ಲಕ್ಷ್ಮೀ ಲಿಂಗಕ್ಕೆ ಕಲಾಸೇವೆಯನ್ನು ಸಲ್ಲಿಸುತ್ತಿದ್ದ ಪ್ರಸಿದ್ಧ ದೇವದಾಸಿ ಮನೆತನ ಬಚ್ಚಾಸಾನಿಯವರದು. ಅವರದು ದೊಡ್ಡ ಕುಟುಂಬ ಅಂತೆಯೇ ಅವರ ಮನೆಗೆ ದೊಡ್ಡಮನಿ ಎಂಬ ರೂಢನಾಮ ಅಂಕಿತನಾಮವೂ ಆಯಿತು."[8]

ಬಚ್ಚಾಸಾನಿಯವರ "ಸ್ತ್ರೀ ಸಂಗೀತ ನಾಟಕ ಮಂಡಳಿ" ಹೆಸರಿಗೆ ತಕ್ಕಂತೆ ಸ್ತ್ರೀಯರದೇ ಆಗಿತ್ತು. ಎಲ್ಲಾ ಪಾತ್ರಗಳಿಂದ ಹಿಡಿದು ಟಿಕೀಟು ಕೊಡಲಿಕ್ಕೆ, ಹ್ಯಾಂಡಬಿಲ್ ಹಂಚಲಿಕ್ಕೆ, ಗೇಟಕೀಪರ್‌ಗಳವರೆಗೂ ಮಹಿಳೆಯರೆ ಇರುತ್ತಿದ್ದರು. ಯಾಕೆಂದರೆ ಬಚ್ಚಾಸಾನಿಯ ಕುಟುಂಬವೇ ಅಷ್ಟೊದೊಡ್ಡದಿತ್ತು. ಇವರಿಗೆ ಸಣ್ಣರಾಜವ್ವ, ದೊಡ್ಡಸಾಬವ್ವ, ಸಣ್ಣಸಾಬವ್ವ, ದೊಡ್ಡ ದಾದವ್ವ, ಸಣ್ಣದಾದವ್ವ, ಮಂಜವ್ವ, ಹೀರವ್ವ ಈ ಏಳುಜನ ತಂಗಿಯರು.

"ಕಂಪನಿ ಸ್ಥಾಪಿಸುವುದಕ್ಕೆ ಮೊದಲು ಬಚ್ಚಾಸಾನಿಯಾಗಲೀ ಅವರ ಸಹೋದರಿಯರಾಗಲಿ ಬೇರೆ ಕಂಪನಿಗಳಲ್ಲಿ ಕೆಲಸ ಮಾಡಿದ ಬಗ್ಗೆ ದಾಖಲೆಗಳಿಲ್ಲ. ಆದಾಗ್ಯೂ ಇಂಥ ಸಾಹಸ ಮಾಡಲು ಬಚ್ಚಾಸಾನಿಗೆ ದೊಡ್ಡ ಕುಟುಂಬವನ್ನು ಸಲಹುವ ಹೊಣೆಗಾರಿಕೆಯೇ ಕಾರಣವಿದ್ದಿರಬಹುದು. ಅದಲ್ಲದೆ ಆ ಹೊತ್ತಿಗಾಗಲೇ ವೃತ್ತಿರಂಗಭೂಮಿ ಶಿವಮೂರ್ತಿಸ್ವಾಮಿ ಕಣಬರ್ಗಿ ಮಠ, ಶಿರಹಟ್ಟಿ ವೆಂಕೋಬರಾಯರ ಶ್ರಮದಿಂದ ಆಕರ್ಷಕ ಕ್ಷೇತ್ರವಾಗಿ ಕ್ಷಿಪ್ರಗತಿಯಲ್ಲಿ ಬೆಳೆಯುತ್ತಿತ್ತು. ಹೊಸ ಕಂಪನಿ ಸ್ಥಾಪಿಸುವ ಉತ್ಸಾಹಿಗಳ ಸಂಖ್ಯೆಯೂ ಹೆಚ್ಚಾಗತೊಡಗಿತ್ತು. ಅದಲ್ಲದೆ ಆಗಿನ ನಾಟಕಗಳಲ್ಲಿ ಸಂಗೀತಕ್ಕೆ ಮಹತ್ವದ ಸ್ಥಾನವಿದ್ದಿತಾದ್ದರಿಂದ, ಸಂಗೀತದ ಗಣಿಯೇ ಆಗಿದ್ದ ಬಚ್ಚಾಸಾನಿ ಇಂಥ ಸಾಹಸಕ್ಕೆ ಕೈಹಾಕಿರಬಹುದಾಗಿದೆ. ಇದರ ಸ್ಥಾಪನೆಯ ನಿಖರ ಇಸ್ವಿ ಗೊತ್ತಾಗಿಲ್ಲ. 1908 ರಿಂದ 10ನೇ ಇಸ್ವಿ ಇರಬಹುದು. "ಪಂಪನ ಪುಲಿಗೆರೆಯ ನಾಡಿನ ಈ ಲಕ್ಷ್ಮೇಶ್ವರದ ಸಂಗೀತ ನಾಟಕ ಮಂಡಳಿ ಈ

---

[8] ಡಾ. ಎಸ್. ಎಸ್. ಕೋತಿನ. "ರಂಗ ಕಲಾವಿದೆ ಸೋನುಬಾಯಿ ದೊಡ್ಡಮನಿ." ಪುಟ 2

ಶತಮಾನದ ಪ್ರಥಮ ದಶಕದ ಕೊನೆಯಲ್ಲಿ ಅಥವಾ ಅದರ ಹಿಂದು ಮುಂದೆ ಉದಯವಾಗಿ ಉಚ್ಛ್ರಾಯ ಕಾಲವನ್ನು ಕಂಡಿರಬೇಕೆಂದು ತೋರುತ್ತದೆ."[9]

ಕಂಪನಿಯ ಒಡತಿ ಬಚ್ಚಾಸಾನಿ ಸ್ವತಃ ಪಾತ್ರ ವಹಿಸುತ್ತಿದ್ದರು. ಶ್ರೀ ಕೃಷ್ಣನಾಟಕದಲ್ಲಿ ಬಚ್ಚಾಸಾನಿ ಮೀಸೆಕಟ್ಟಿಕೊಂಡು ಕಂಸನಾಗಿ ಕಾಣಿಸಿಕೊಂಡಾಗ ಈ ಮೀಸೆಯ ಕಂಸ ಹೆಣ್ಣೆಂದು ಗುರುತಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲವಂತೆ.

ಈ ಕಂಪನಿಯ ಏಳ್ಗೆ, ಗಳಿಕೆ, ಸಂಚಾರದ ಯಾವ ವಿವರಗಳೂ ಲಭ್ಯವಿಲ್ಲವಾದ್ದರಿಂದ ಈ ಕಂಪನಿ ಉಚ್ಛ್ರಾಯ ಸ್ಥಿತಿಯನ್ನಂತೂ ತಲುಪಿದ್ದು ಎನ್ಕೆಯವರ ಲೇಖನದಿಂದಲೇ ಗೊತ್ತಾಗುತ್ತದೆ. ಅಲ್ಲದೆ ಕಂಪನಿ ಲಕ್ಷ್ಮೇಶ್ವರ, ಶಿರಹಟ್ಟಿ, ಗದಗ, ಹುಬ್ಬಳ್ಳಿ ಹೀಗೆ ಸಮೀಪದ ಸ್ಥಳಗಳಿಗೆ ಸಂಚರಿಸುತ್ತಿದ್ದಿರಬೇಕೆಂದು ಎನ್ಕೆಯರವರ ಅಭಿಪ್ರಾಯ.

ಈ ತಂಡದ ಬಗ್ಗೆ ಡಾ. ಎಚ್. ಕೆ. ರಂಗನಾಥರು ಕರ್ನಾಟಕ ರಂಗಭೂಮಿ ಎಂಬ ಪುಸ್ತಕದಲ್ಲಿ "ಸ್ತ್ರೀ ಕಲಾವಿದರೇ ಕೂಡಿಕೊಂಡು ನಾಟಕಮಂಡಳಿಯನ್ನು ಯಶಸ್ವಿಯಾಗಿ ನಡೆಯಿಸಿದ ಪ್ರಸಿದ್ಧ ಗಾಯಕಿ ಬಚ್ಚಾಸಾನಿ ಪ್ರಮುಖಳು ಅವಳ ಮಂಡಳಿಗೆ ಕನ್ನಡ ಜನ ತುಂಬ ಉತ್ತೇಜನ ಕೊಟ್ಟಿತು," ಎಂದಿದ್ದಾರೆ. ಈ ವಿವರಗಳಿಂದ ತಿಳಿದು ಬರುವುದೇನೆಂದರೆ, ಮಹಿಳೆಯೊಬ್ಬಳು ಪ್ರಥಮವಾಗಿ ವೃತ್ತಿಮಂಡಳಿಯನ್ನು ಸ್ಥಾಪಿಸಿದ್ದು ಇದೇ ಮೊದಲನೇಯದಾಗಿದೆ ಅಷ್ಟೇ ಅಲ್ಲ, ಕಲಾವಿದರೆಲ್ಲ ಮಹಿಳೆಯರೆ ಆಗಿರುವ ಪ್ರಥಮ ಮಂಡಳಿಯೂ ಇದೆ ಎಂಬ ಹೆಗ್ಗಳಿಕೆ ಈ ತಂಡದಾಗಿದ್ದು ನಂತರದ ದಿನಗಳಲ್ಲಿ ಕಂಪನಿಕಟ್ಟುವ ಮಹಿಳೆಯರಿಗೆ ಬಚ್ಚಾಸಾನಿಯೇ ಸ್ಫೂರ್ತಿಯ ಸೆಲೆಯಾಗುತ್ತಾಳೆ.

1924–25ರ ನಡುವೆ ಈ ಮಂಡಳಿ ನಿಂತು ಹೋದಬಗ್ಗೆ ತಿಳಿದುಬರುತ್ತದೆ.

## V. "ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ" ಸವಣೂರ :

ಹೊಸಮಂಡಳಿಯೊಂದನ್ನು ಸ್ಥಾಪಿಸಲೆಂದೇ ವಾಮನರಾವ ಮಾಸ್ತರರು ಶಿರಹಟ್ಟಿ ವೆಂಕೋಬರಾಯರ ಮಂಡಳಿಯನ್ನು ಬಿಟ್ಟು ಬಂದವರು. ಬ್ಯಾಂಕಿನಿಂದ ಎರಡು ಸಾವಿರ ರೂ. ಸಾಲ, ಧಾರವಾಡದ ಮಧ್ವರಾವ್ ಬಳ್ಳಾರಿಯವರ ಸಹಾಯದಿಂದ 1914 ಜೂನ್ ತಿಂಗಳು ರಾಣಿ ಬೆನ್ನೂರಿನಲ್ಲಿ "ಕವಿರತ್ನ ಕಾಳಿದಾಸ" ನಾಟಕ ಪ್ರದರ್ಶನದೊಂದಿಗೆ ಮಂಡಳಿಯನ್ನು ಆರಂಭಿಸಿದರು. ಪ್ರಾರಂಭದಲ್ಲಿ ಶಿರಹಟ್ಟಿ ಕಂಪನಿಯ ನಾಟಕಗಳನ್ನೇ ಹೆಸರು ಬದಲಿಸಿ ಆಡಲಾಗುತ್ತಿತ್ತು. ವಾಮನರಾಯರ ಹಾಡುಗಾರಿಕೆಯೇ ಮಂಡಳಿಗೆ ಜೀವಾಳ. ಜೊತೆಗೆ ರಾಣೆಬೆನ್ನೂರ ಮಲ್ಲಪ್ಪ, ಗುರುರಾವ ದೇಶಪಾಂಡೆ. ಮಿಶ್ರೀಕೋಟಿ ಕೇಶವಭಟ್ಟ, ಬೇವೂರ ಬಾದಶಹಾ. ಸಂಗನಬಸಪ್ಪ ಕುಕನೂರ ಇವರೆಲ್ಲಾ ಶಾಸ್ತ್ರೀಯ ಸಂಗೀತದಲ್ಲಿ ಪಳಗಿದವರೇ ಆದ್ದರಿಂದ ನಾಟಕಗಳಲ್ಲಿ ಸಂಗೀತದ್ದೇ ಮೇಲುಗೈಯಾಯ್ತು.

---

[9] ಡಾ. ಎನ್ಕೆ ಕುಲಕರ್ಣಿ. "ರಂಗತೋರಣ," 1995.

ವೃತ್ತಿರಂಗಭೂಮಿಯ ಪ್ರಾಯೋಗಿಕ ಕಾಲಘಟ್ಟ ಇದಾಗಿದ್ದರಿಂದ ವಾಮನರಾಯರು ಮಾಡಿದ ಕೆಲವು ಪ್ರಯೋಗಗಳೆಂದರೆ, 1) ಮಂಡಳಿಗೆ ಶಾಸ್ತ್ರಬದ್ಧ ಸಂಗೀತ ಅಳವಡಿಸಿದರು, 2) ಜನಪ್ರೀಯ ಮರಾಠಿನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು, 3) ಮರಾಠಿ ಮತ್ತು ಹಿಂದಿ ಜನಪ್ರೀಯ ಚಾಲ ಚೀಜಗಳನ್ನು ಆಧರಿಸಿ ರಂಗಗೀತೆಗಳನ್ನು ಅಳವಡಿಸಿದರು. 4) ಜನಪ್ರೀಯ ಶೈಲಿ ದೃಶ್ಯಮಾಧ್ಯಮಕ್ಕೆ ಒಪ್ಪುವ ಹಾಗೆ ಸಾಧ್ವಿಸಕ್ಕುಬಾಯಿ, ಭಕ್ತ ಪುಂಡಲೀಕ, ಸಂದೇಹ ಸಾಮ್ರಾಜ್ಯ ನಾಟಕಗಳನ್ನು ರಚಿಸಿದರು.

ಈ ತಂಡದ ಇನ್ನೊಂದು ಕೊಡುಗೆಯೆಂದರೆ, ರಂಗಭೂಮಿ ಮತ್ತು ಸಂಗೀತಕ್ಷೇತ್ರಗಳಲ್ಲಿ ದಂತಕಥೆಗಳಂತೆ ಮೆರೆದ ಪಂಡಿತ ಬಸವರಾಜ ಮನ್ಸೂರ, ಪಂಡಿತ ಮಲ್ಲಿಕಾರ್ಜುನ ಮನ್ಸೂರ, ಗಾನಕೋಗಿಲೆ ಗಂಗೂಬಾಯಿ ಗುಳೇದಗುಡ್ಡ, ಅವರಲ್ಲದೆ ಡಿ. ದುರ್ಗಾದಾಸರಂತಹ ಮಹಾನ ನಟರನ್ನು ರಂಗಭೂಮಿಗೆ ಪರಿಚಯಿಸಿದ್ದು ಇದೇ ಮಂಡಳಿ.

ಪ್ರಾರಂಭದಲ್ಲಿ ಬಸವಣಕೊಪ್ಪದ ಗಿರಿಗೌಡರು ಮಂಡಳಿಯ ಪ್ರಮುಖ ಸ್ತ್ರೀಪಾತ್ರದಾರಿಯಾಗಿದ್ದರೆ. ನಂತರದಲ್ಲಿ ಬಸವರಾಜ ಮನ್ಸೂರ ಮತ್ತು ಮಲ್ಲಿಕಾರ್ಜುನ ಮನ್ಸೂರರು ಸೇರಿಕೊಂಡರು.

ನಂತರದ ವರ್ಷಗಳಲ್ಲಿ ಗುಳೇದಗುಡ್ಡದ ಗುರುಲಿಂಗಪ್ಪ ಗೊಂಬಿಯೊಂದಿಗೆ ವೃತ್ತಿಮಂಡಳಿಯ ಪ್ರಥಮ ನಟಿ ಎಲ್ಲೂಬಾಯಿ ಗುಳೇದಗುಡ್ಡಕೂಡ ಮಂಡಳಿಯನ್ನು ಸೇರಿಕೊಂಡಳು. ಈಕೆಯ ಸಾಕುಮಗಳೇ ಗಂಗೂಬಾಯಿ ಗುಳೇದಗುಡ್ಡ. ಕೂಸಿದ್ದಾಗಿನಿಂದಲೇ ರಂಗಭೂಮಿಯಲ್ಲಿ ಆಡಿಬೆಳೆದ ಗಂಗೂಬಾಯಿಯ ಕಲಾವ್ಯಕ್ತಿತ್ವ ರೂಪುಗೊಂಡಿದ್ದೆ ಈ ಮಂಡಳಿಯಲ್ಲಿ. ವಾಮನರಾಯರು ಈಕೆಯನ್ನು ನಾಯಕಿಯ ಪಾತ್ರಕ್ಕೆ ಸಿದ್ಧಗೊಳಿಸಿದ್ದರು. ಅಭಿನಯ, ಸಂಗೀತ, ಸಂಭಾಷಣೆಯ ಗುಣಧರ್ಮವನ್ನು ಅರಿತುಕೊಂಡು ಗಂಗೂಬಾಯಿ ಹಂತ ಹಂತವಾಗಿ ಬೆಳೆಯುತ್ತಾಳೆ. ಮೋಹಕ ಮೈಮಾಟ, ಸುಮಧುರ ಕಂಠ ಪಾತ್ರಕ್ಕೆ ತಕ್ಕ ಅಭಿನಯದಿಂದ ಜನಾಕರ್ಷಣೆಯಾದಳು.

"ವಾಮನರಾವ, ಗಂಗೂಬಾಯಿ, ಅಪೂರ್ವ ಕಲಾ ಜೋಡಿಯಾಗಿ ರಸಿಕಪ್ರೇಕ್ಷಕರ ಕಣ್ಮಣಿಗಳಾದರು. ಪದ್ಮಾವತಿ ಪರಿಣಯದಲ್ಲಿ ಶ್ರೀನಿವಾಸ ಪದ್ಮಾವತಿ, ಸಾಧ್ವಿಸಕ್ಕೂಬಾಯಿಯಲ್ಲಿ ಮಾಧವ–ಸಕ್ಕೂಬಾಯಿ, ಸಂದೇಹ ಸಾಮ್ರಾಜ್ಯದಲ್ಲಿ ಆನಂದಸೇಟ ಶತತಾರೆಯಾಗಿ ಇವರು ಅಭಿನಯಿಸುತ್ತಿದ್ದರೆ ಜನರು ರಂಗಭೂಮಿಗೆ ಮುಗಿಬೀಳುತ್ತಿದ್ದರು. ಇವರು ಹಾಡುತ್ತಿದ್ದರೆ ಸಂಗೀತ ಸ್ಪರ್ಧೆ ಏರ್ಪಟ್ಟಂತೆ."[10]

ಬೆಂಗಳೂರು, ತುಮಕೂರು, ಗದಗ, ಅಥಣಿ, ಬಾಗಲಕೋಟ, ಹೀಗೆ ಮಂಡಳಿ ಎಲ್ಲ ಕಡೆ ನಾಟಕಗಳನ್ನು ಯಶಸ್ವಿ ಪ್ರಯೋಗಗಳನ್ನು ಪ್ರಯೋಗಿಸುತ್ತದೆ. 1921ರಲ್ಲಿ ಧಾರವಾಡ ದಾವಣಗೆರೆಗಳಲ್ಲಿ

---

[10] ರಾಮಕೃಷ್ಣ ಮರಾಠೆ. "ಉತ್ತರ ಕರ್ನಾಟಕ ವೃತ್ತರಂಗಭೂಮಿ." ಪುಟ–೪೪

ಸಂಚರಿಸಿ, ಬೆಂಗಳೂರಿಗೆ ಮತ್ತೆ ಮಂಡಳಿ ಹೋಗುತ್ತದೆ. ಇಲ್ಲಿ ಸತತ ಒಂದು ವರ್ಷ ಕಾಲ ನಾಟಕ ಆಡಿದರೆಂದರೆ, ಮಂಡಳಿಯ ನಾಟಕಗಳು ಅದೆಷ್ಟು ಜನಪ್ರಿಯ ಗೊಂಡಿದ್ದವೆಂಬುದಕ್ಕೆ ಸಾಕ್ಷಿಯಾಗುತ್ತದೆ. ಮಂಡಳಿಯ ಜನಪ್ರೀಯತೆಯನ್ನು ಕೇಳಿತಿಳಿದ ಆಗಿನ (1922) ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಯರು, ಮಂಡಳಿಯನ್ನು ಅರಮನೆಗೆ ಆಮಂತ್ರಿಸಿ ಜಗನ್‌ಮೋಹನ್ ರಂಗ ಮಂದಿರದಲ್ಲಿ ಸಾಧ್ವಿಸಕ್ಕೂಬಾಯಿ, ಭಕ್ತ ಪ್ರಹ್ಲಾದ, ಭಕ್ತ ಪುಂಡಲೀಕ, ನಾಟಕಗಳನ್ನು ಆಡಿಸಿ ನೋಡುತ್ತಾರೆ. ಜೊತೆಗೆ ಸಂತೃಪ್ತರಾಗಿ ಸಾವಿರಾರು ರೂಪಾಯಿಗಳ ಕಾಣಿಕೆ ನೀಡಿ ಗೌರವಿಸುತ್ತಾರೆ. ಈ ಮಂಡಳಿಯಿಂದ ಮಹಾರಾಜರು ಅದೆಷ್ಟು ಪ್ರಭಾವಿತರಾಗಿದ್ದರೆಂದರೆ ಮತ್ತೆ ಒಂದು ತಿಂಗಳೊಳಗೆ ಮಂಡಳಿಯನ್ನು ಆಹ್ವಾನಿಸಿ ಶ್ರೀನಿವಾಸ ಕಲ್ಯಾಣ ನಾಟಕ ನೋಡುತ್ತಾರೆ.

ಐದಾರು ತಿಂಗಳು ಮೈಸೂರಿನಲ್ಲಿ ಕ್ಯಾಂಪ ಮಡಿದ ಮಂಡಳಿಯು ಉತ್ತರಕರ್ನಾಟಕದತ್ತ ಪ್ರಯಾಣ ಮುಂದುವರೆಸುತ್ತದೆ. 1923ರಲ್ಲಿ ಗಂಗೂಬಾಯಿ ಇದ್ದಕ್ಕಿದ್ದಂತೆ ಹೊರ ನಡೆದು ಬಿಡುತ್ತಾಳೆ. ಕಂಪನಿಯ ಆದಾಯ ಕುಸಿಯುತ್ತದೆ. ಗಂಗೂಬಾಯಿ ಇಲ್ಲದೆ ನಾಟಕಗಳು ಕಳೇಕಟ್ಟಲಿಲ್ಲ. ವಾಮನರಾಯರು ಪರಿಸ್ಥಿತಿಯನ್ನು ನಿಭಾಯಿಸಲು ಹೆಂಡತಿಯ ಮೈ ಮೇಲಿನ ಆಭರಣಗಳನ್ನು ಮಾರಬೇಕಾಗುತ್ತದೆ ಎಷ್ಟೇ ಪ್ರಯತ್ನಿಸಿದರೂ ಕಂಪನಿಯ ಆದಾಯ ಸುಧಾರಿಸಲಿಲ್ಲ. ಸಾಲ ಬೆಳೆಯಿತು, ಆರು ತಿಂಗಳು ಗಟ್ಟಲೇ ಕಲಾವಿದರ ಸಂಬಳ ನಿಂತು ಬಿಡುತ್ತದೆ. ಇನ್ನೂ ಕಂಪನಿ ನಡೆಸಲು ಸಾಧ್ಯವಿಲ್ಲವೆನಿಸಿ, ಕಲಾವಿದರ ಸಂಬಳಕೊಟ್ಟು ಮಂಡಳಿಯನ್ನೂ ಮುಚ್ಚಲು ವಾಮನರಾಯರು ನಿರ್ಧರಿಸಿರುವಾಗಲೇ, ಗಂಗೂಬಾಯಿ ಮಂಡಳಿಗೆ ಮರಳಿ ಬರುತ್ತಾಳೆ. ಮಂಡಳಿ ಮತ್ತೆ ಚೇತರಿಸಿಕೊಳ್ಳುತ್ತದೆ. ಮೈಸೂರು ಮಹಾರಾಜರಿಂದ ಮತ್ತೆ ಆಹ್ವಾನಬರುತ್ತದೆ. ಐದುಸಾವಿರ ರೂಪಾಯಿಗಳ ಬಹುಮಾನ ದೊರೆಯುತ್ತದೆ.

ನಂತರ ತುಮಕೂರು, ಧಾರವಾಡ, ಹುಬ್ಬಳ್ಳಿ, ಬಿಜಾಪೂರ ಕ್ಯಾಂಪಮಾಡಿ ಮಂಡಳೀ ಬಾಗಲಕೋಟೆಗೆ ಬಂದಾಗ ಗಂಗೂಬಾಯಿ ಮತ್ತೆ ಮಂಡಳಿಯನ್ನು ತೊರೆಯುತ್ತಾಳೆ. ಕಂಪನಿಗೆ ಮತ್ತೆ ಗ್ರಹಚಾರ ಕಾಡುತ್ತದೆ. ಅದರೂ ಛಲಬಿಡದ ವಾಮನರಾಯರು ಗಂಗಬಾಯಿಯ ಸ್ಥಾನತುಂಬಬಲ್ಲ ನಟಿಗಾಗಿ ಶೋಧಿಸುತ್ತಾರೆ. ಸಂಜೀವಮ್ಮ ಎಂಬುವಳು ಆ ಸ್ಥಾನ ತುಂಬುತ್ತಾಳೆ.

ಸಂಜೀವಮ್ಮ ಮತ್ತು ಅವಳ ಸಹೋದರಿ ಹಣಮಂತೆವ್ವ (ಅಂಜನಾ) ಕರ್ನಾಟಕ ಸಂಗೀತದಲ್ಲಿ ಹೆಸರುಮಾಡಿದವರಾಗಿದ್ದರು. ಜೊತೆಗೆ ಮರಾಠಿ ನಾಟಕವನ್ನು ಅನುವಾದಿಸಿ ವೀರ ಅಭಿಮನ್ಯುವೆಂಬ ನಾಟಕವನ್ನು ಮೂರುನಾಲ್ಕು ತಿಂಗಳ ತರಭೇತಿಯ ನಂತರ ಪ್ರದರ್ಶನಕ್ಕೆ ಸಿದ್ಧಮಾಡುತ್ತಾರೆ. ರಂಗಪರಿಕರ

ಚಿತ್ತಾಕರ್ಷಕ ಸೀನರಿಗಳಿಗಾಗಿ ವಾಮನರಾಯರು ಸಾಕಷ್ಟು ಖರ್ಚನ್ನು ಮಾಡುತ್ತಾರೆ. ಕಂಪನಿ ಮರಳಿ ತನ್ನ ವೈಭವಕ್ಕೆ ಮರಳುತ್ತದೆ.

1932ರ ತನಕ ವೈಭವ ಉಳಿಸಿಕೊಂಡ ಮಂಡಳಿ ರಾಯರ ದೇಹಾರೋಗ್ಯ ಕೆಟ್ಟಿದ್ದರಿಂದ ಮತ್ತೆ ಸಂಕಷ್ಟಕ್ಕೆ ಸಿಲುಕುತ್ತದೆ. ಹಾಗೂ ಹೀಗೂ 1934ರ ವರೆಗೆ ದಿನಗಳೆದ ಮಂಡಳಿ ಬೆಳಗಾಂವಿಯ ಶಿವಾನಂದ ಥೇಟರಿನಲ್ಲಿ ಇದ್ದಾಗ ಆರ್ಥಿಕ ತೊಂದರೆ ಮಿತಿಮೀರುತ್ತದೆ. ಪರಿಣಾಮ ಎರಡು ದಶಕಗಳ ಕಾಲ ವೈಭವಯುತ ರಂಗಯಾತ್ರೆ ನಡೆಸಿದ ವಿಶ್ವಗುಣಾದರ್ಶ ನಾಟಕ ಮಂಡಳಿ ಬಾಗಿಲು ಮುಚ್ಚಿಬಿಡುತ್ತದೆ.

ಒಟ್ಟಾರೆಯಾಗಿ ಗಮನಿಸಬೇಕಾದ ಅಂಶವೆಂದರೆ ಇದು ವರೆಗಿನ ತಂಡಗಳಲ್ಲಿ ವ್ಯಕ್ತಿ ಆಧಾರಿತವಾಗಿ ಬೆಳೆದ ಮೊದಲ ವೃತ್ತಿತಂಡ ಇದಾಗುತ್ತದೆ. ಮಂಡಳಿಯಲ್ಲಿ ವಾಮನರಾವ್ ಮತ್ತು ಗಂಗೂಬಾಯಿ ಜೋಡಿ ಇದ್ದಾಗ ಮೆರೆದ ಮಂಡಳಿ ಗಂಗೂಬಾಯಿಯ ನಿರ್ಗಮನದ ನಂತರ ಕುಸಿದು ಬಿಡುತ್ತದೆ. ಗಂಗೂಬಾಯಿ ಮತ್ತು ವಾಮನರಾಯರ ಅಪೂರ್ವ ರಂಗ ಜೋಡಿಯೇ ಮಂಡಳಿಯ ವೈಭವಕ್ಕೆ ಕಾರಣವಾದದನ್ನು ಇಲ್ಲಿ ಕಾಣುತ್ತೇವೆ.

## VI. ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಳಿ ಗದಗ

ಉತ್ತರ ಕರ್ನಾಟಕದ ರಂಗಭೂಮಿಯ ಇತಿಹಾಸದಲ್ಲಿ ಬರುವ ಮತ್ತೊಂದು ಮರೆಯಲಾಗದ ಹೆಸರೆಂದರೆ ಗರುಡ ಸದಾಶಿವರಾಯರು ಮತ್ತು ಅವರೇ ಸ್ಥಾಪಿಸಿದ ಶ್ರೀ ದತ್ತಾತ್ರೇಯ ಸಂಗೀತ ನಾಟಕಮಂಡಳಿ.

ಮೊದಲು ನಟರಾಗಿ, ನಾಟಕರಚನೆಕಾರರಾಗಿ, ಅಭಿನಯ ತರಭೇತಿ ಶಿಕ್ಷಕರಾಗಿ (ಪ್ರ್ಯಾಕ್ಟೀಸ್ ಮ್ಯಾನೇಜರ) ಆಗ ಅಸ್ತಿತ್ವದಲ್ಲಿದ್ದ ಕಂಪನಿಗಳಲ್ಲಿ ಕೆಲಸಮಾಡುತ್ತಿದ್ದ ಗರುಡರಿಗೆ ಕಂಪನಿ ಕಟ್ಟುವ ಕನಸಿತ್ತಾದರೂ ಅದಕ್ಕೆ ಬೇಕಾಗುವ ಆರ್ಥಿಕ ಸಾಮರ್ಥ್ಯಅವರಿಗಿರಲಿಲ್ಲ. 1919 ರಲ್ಲಿ ಸದಾಶಿವರಾಯರು ಹೊಂಬಳ ಶಂಕರಗೌಡರ ಕಂಪನಿಯಲ್ಲಿ ನಾಟಕ ತರಭೇತುದಾರರಾಗಿ ಕೆಲಸ ಮಾಡುತ್ತಿದ್ದರು. ಯಾವದೋ ಮನಸ್ತಾಪಕ್ಕಾಗಿ ಗರುಡರು ವೃತ್ತಿಬಿಟ್ಟು ಹೊರಬಂದಾಗ, ಹೊಂಬಳ ಕಂಪನಿಯ ಆಡಳಿತ, ಆರ್ಥಿಕತೆ, ಎರಡೂ ಕುಸಿದು ಬಿದ್ದವು ಕಂಪನಿ ಮುಚ್ಚಿಬಿಟ್ಟಿತು.

ಇದರ ಪರಿಣಾಮ ಕಂಪನಿಯ ನಟರೆಲ್ಲ ಗರುಡರ ಆಶ್ರಯಕ್ಕೆ ಬರುತ್ತಾರೆ ಆಗ ಕಂಪನಿ ಕಟ್ಟುವುದು ಗರುಡರಿಗೆ ಅನಿವಾರ್ಯವಾಗುತ್ತದೆ. ನಟರೇನೋ ಸಿಕ್ಕರು. ಉಳಿದ ಪರಿಕರಗಳಿಗೆ ಹಣ ಇರಲಿಲ್ಲ. ಆಗ ಅವರ ನೆರವಿಗೆ ಸ್ವತಃ ಅವರ ಪತ್ನಿ ಭೀಮಾಬಾಯಿಯವರೇ ಮುಂದೆಬರುತ್ತಾರೆ. ಮೈಮೇಲಿನ ಆಭರಣಗಳನ್ನೆಲ್ಲ ಬಿಚ್ಚಿಕೊಡುತ್ತಾರೆ.

1919 ನವ್ವೆಂಬರ 16 ರಂದು ಗುಲಬರ್ಗಾ ಜಿಲ್ಲೆಯ ಅಪಜಲಪೂರ ತಾಲೂಕಿನ ಪ್ರಸಿದ್ಧ ದತ್ತಕ್ಷೇತ್ರ ಗಾಣಗಾಪುರದಲ್ಲಿ ಇವರ ಕಂಪನಿ ಆರಂಭವಾಗುತ್ತದೆ. ಅದಕ್ಕಾಗಿಯೇ ಮಂಡಳಿಗೆ ದತ್ತಾತ್ರೇಯ ಹೆಸರಿಡಲಾಗುತ್ತದೆ.

ಕಂಪನಿಯ ವಿಶೇಷವೆಂದರೆ ಅದ್ದೂರಿ ಆಡಂಬರಗಳ ಅರ್ಬಟವಿಲ್ಲದೆ ಸತ್ವಯುತ ಸಾಹಿತ್ಯ, ಸಂಭಾಷಣೆ ಮತ್ತು ಪ್ರಬುದ್ಧ ಅಭಿನಯ ಕೌಶಲಗಳಿಂದಲೇ ಜನಮನ ಗೆದ್ದಿದ್ದು, ಪ್ರಸಿದ್ಧಿಪಡೆದದ್ದು. ಆರ್ಥಿಕ ತೊಂದರೆಯೇ ಇಂಥದೊಂದು ಪ್ರಯತ್ನಕ್ಕೆ ಕಾರಣವಾಗಿರಬೇಕು. ಯಾಕೆಂದರೆ ಗರುಡರು ಆರ್ಥಿಕ ದೃಡತೆ ಬಂದಮೇಲೆ ಅಂದರೆ 1934 ರಲ್ಲಿ 'ಶಕ್ತಿಮಹಿಮೆ' ನಾಟಕದ ರಂಗಸಜ್ಜಿಕೆ, ವೇಷಭೂಷಣಗಳಿಗೆ ಆರುಸಾವಿರ ರೂಪಾಯಿ ವೆಚ್ಚಮಾಡುತ್ತಾರೆ. ಅಷ್ಟೇ ಅಲ್ಲ "ಕೃಷ್ಣಲೀಲಾ" ನಾಟಕದಲ್ಲಿ ಸಿಂಹಾಸನಕ್ಕೆ ಅಂತಲೇ ಬಂಗಾರದ ಅಲಂಕಾರ, ಗೋಪಿಕೆಯರಿಗಾಗಿ ಆರು ಬೆಳ್ಳಿಯ ಕೊಡಗಳನ್ನು ಮಾಡಿಸಿದ್ದುಂಟು.

ಪ್ರಾರಂಭದಲ್ಲಿ ಗುಡಿಸೀತಾರಾಮ್‌ಭಟ್, ಹಮ್ಮಿಗಿ ನೀಲಕಂಠಪ್ಪ, ಮುರಗೋಡ ಗಂಗಾಧರಪ್ಪ, ಮೊರಬದ ಹಣಮಂತಪ್ಪ, ನೀಲಕಂಠ ಬುವಾ ಮುಂತಾದ ಪ್ರಬುದ್ಧ ನಟರಿಂದ ಆರಂಭಿಸಿದ ಗರುಡರ ರಂಗಯಾತ್ರೆ "ಬಲಿಸಿಂಹತಾರಾ" 'ಶ್ರೀ ಶರಣಬಸವ" "ವಿಕ್ರಮಶಶಿಕಲಾ" ನಾಟಕಗಳನ್ನಾಡುತ್ತ ಯಶಸ್ಸಿನ ಮೆಟ್ಟಿಲುಗಳನ್ನೇರತೊಡಗುತ್ತದೆ. ಗದಗ, ಶಿವಮೊಗ್ಗ, ಶೃಂಗೇರಿ ಮಾರ್ಗವಾಗಿ ಬೆಂಗಳೂರಿಗೆ ಬಂದಾಗ ಅಲ್ಲಿ ವಾಮನರಾಯರ ವಿಶ್ವಗುಣಾಧರ್ಶ, ವೆಂಕೋಬರಾಯರ "ಶ್ರೀ ಮಹಾಲಕ್ಷ್ಮಿ" ಮತ್ತು ಗುಬ್ಬಿವೀರಣ್ಣನವರ ಶ್ರೀ ಚನ್ನಬಸವೇಶ್ವರ ಮಂಡಳಿಗಳು ಬೀಡು ಬಿಟ್ಟಿರುತ್ತವೆ. ಸಂಗೀತ ಮತ್ತು ವಾಮನ ರಾವ್- ಗಂಗೂಬಾಯಿ ರಂಗಜೋಡಿಯ ಜನಪ್ರೀಯತೆ. ಅದ್ದೂರಿ ಆಡಂಬರಕ್ಕೆ ಹೆಸರಾದ ವೆಂಕೋಬರಾಯರು, ಗುಬ್ಬಿ ವೀರಣ್ಣನವರ ಮಂಡಳಿ ಎದರು ಸೆಣೆಸುವದು ಅಷ್ಟು ಸುಲಭವೇನೂ ಆಗಿರಲಿಲ್ಲ ಗರುಡರಿಗೆ. ಆದರೆ ಗರುಡರು ಯೋಗ್ಯ ರಂಗಮಂದಿರವಿಲ್ಲದೆ ಭರ್ಜರಿದೃಶ್ಯಾವಳಿಗಳಿಲ್ಲದೆ ಕೇವಲ ಅಭಿನಯ ಕೌಶಲ ಮತ್ತು ಸಾಹಿತ್ಯದಿಂದಲೇ "ಶ್ರೀಶರಣ ಬಸವ" ನಾಟಕವನ್ನು ಪ್ರದರ್ಶಿಸಿ ಅಮೋಘ ಯಶಸ್ಸನ್ನು ಗಳಿಸಿದರು. ನಂತರ ಆಡಿದ 'ಎಚ್ಚಮ ನಾಯಕ' 'ಪಾದುಕಾ ಪಟ್ಟಾಭಿಷೇಕ' ನಾಟಕಗಳಂತೂ ಜನರಿಗೆ ಹುಚ್ಚೇಹಿಡಿಸಿದವು. ಇಲ್ಲಿ ರಾಯರ ಅಭಿನಯದ ಬಗ್ಗೆ ಹೇಳುವುದಾದರೆ, ಬೆಂಗಳೂರಿನ ಹೆಸರಾಂತ ಸಾಹಿತಿ- ಗಮಕಿ ಟಿ.ಎನ್ ಮಲ್ಲಪ್ಪನವರು ದಿನಾಲು ಸ್ನೇಹಿತ ಗರುಡರೊಂದಿಗೆ ಮಾತುಕತೆಯಾಡಲು ಹೋಗುತ್ತಿದ್ದರು. ಗರುಡರ "ಪಾದುಕಾಪಟ್ಟಾಭಿಷೇಕ" ನಾಟಕ ಪ್ರಯೋಗ ನಡೆವಾಗ

ದಶರಥನ ಪಾತ್ರವಹಿಸುತ್ತಿದ್ದ ಗರುಡರು ರಾಮ ವನವಾಸಕ್ಕೆ ಹೋಗುವ ಸನ್ನಿವೇಶ ಬಂದೊಡನೆ ಮಲ್ಲಪ್ಪನವರಿಗೆ. ನೀವು ಪ್ರೇಕ್ಷಕರ ನಡುವೆ ಕುಳಿತುಕೊಳ್ಳಿ ಈ ದಿನವೂ ನಿಮ್ಮನ್ನು ಅಳಿಸುತ್ತೇನೆ ಎಂದು, ದಿನಾಲು ಅಳಿಸುತ್ತಿದ್ದರಂತೆ. ಈ ದಿನ ಅಳಬಾರದೆಂದು ಮಲ್ಲಪ್ಪನವರು ಅದೆಷ್ಟು ಪಟ್ಟು ಹಿಡಿದು ಕುಳಿತರೂ ರಾಯರ ಅಮೋಘ ಅಭಿನಯದಲ್ಲಿ ಮೈಮರೆತು ದಿನಾಲು ಅತ್ತುಬಿಡುತ್ತಿದ್ದರಂತೆ ಅಂಥ ಅಭಿನಯ ರಾಯರದ್ದು.

ರಂಗಭೂಮಿಯ ಬಗ್ಗೆ ಅದಮ್ಯ ಪ್ರೀತಿ ಇದ್ದ ಸದಾಶಿವರಾಯರು ರಾಷ್ಟ್ರ ಪೇಮಿಯೂ ಆಗಿದ್ದರು. ಸ್ವಾತಂತ್ರ್ಯದ ಚಳುವಳಿ ಕಾವೇರುತ್ತಿದ್ದ ಕಾಲದಲ್ಲಿ 'ಲಂಕಾದಹನ' 'ಮಾಯಾಬಜಾರ' ನಂಥ ಪೌರಾಣಿಕ ನಾಟಕಗಳನ್ನಾಡಿ ಸ್ವಾತಂತ್ರ್ಯದ ಬಗ್ಗೆ ಜನಜಾಗೃತಿ ಮೂಡಿಸಿದವರು. ಗಾಂಧಿಜಿಯವರ ಕರೆಯಂತೆ ಸ್ವತಃ ಖಾದಿಧರಿಸುವದರೊಂದಿಗೆ ಮಂಡಳಿಯ ಎಲ್ಲರೂ ಖಾದಿ ಧರಿಸುವಂತೆ ಪ್ರೇರೇಪಿಸಿದವರು. ನೂರು ಭಾಷಣ ಮಾಡುವ ಕೆಲಸವನ್ನು ಸದಾಶಿವರಾಯರ ಒಂದು ನಾಟಕ ಮಾಡುತ್ತಿತ್ತು. ಆಂಗ್ಲ ಸರಕಾರದ ಕೆಂಗಣ್ಣಿಗೆ ಗುರಿಯಾಗಿ ಭೂಗತರಾಗಿ ಹೋರಾಟದಲ್ಲಿ ತೊಡಗಿದ ಅದೆಷ್ಟೋ ಸ್ವಾತಂತ್ರ್ಯ ಹೋರಾಟಗಾರರಿಗೆ ಆಶ್ರಯವನ್ನಿತ್ತರು. ಮಂಡಳಿ ಆದಾಯದಲ್ಲಿ ಕೆಲಭಾಗವನ್ನು ಸ್ವಾತಂತ್ರ್ಯಯೋಧರಿಗೆ ಅವರ ಕುಟುಂಬದವರಿಗೆ ಸಲ್ಲಿಸಿದರು. ಇದು ಗರುಡ ಸದಾಶಿವರಾಯರು ಸಮಾಜಕ್ಕೆ ಸ್ಪಂದಿಸಿದ ರೀತಿಯನ್ನು ಪ್ರತಿನಿಧಿಸುತ್ತದೆ.

ಅಲ್ಲದೆ 'ಮಹಾತ್ಮಾ ಜೀಸಸ್' ಎಂಬ ಕ್ರಿಸ್ತನ ಮಹಾನ್ ಜೀವನ ದರ್ಶನವನ್ನು ಕನ್ನಡದಲ್ಲಿ ನಾಟಕ ರಚಿಸಿ ಪ್ರದರ್ಶಿಸುವ ಮೂಲಕ ಸರ್ವಧರ್ಮ ಸಮಾನತೆ ಸಾರಿದರು.

"1924 ರಿಂದ 1929 ರ ಅವಧಿಯಲ್ಲಿ ಗರುಡರ ದಕ್ಷ ಆಡಳಿತ, ಅಭಿನಯ ತರಬೇತಿ, ಕಾಲಕ್ಕೆ ತಕ್ಕ ಬದಲಾವಣೆಗಳಿಂದ ಈ ಮಂಡಳಿ ಕರ್ನಾಟಕಕ್ಕೆ ಮಾದರಿಯಾಗಿ ನಿಂತಿತು. ಜಗನ್ನಾಥರಾಯರ ಸಂಗೀತ ಸಂಯೋಜನೆ ಸಾಂಬಯ್ಯನವರ ಮೇಲ್ವಿಚಾರಣೆ 40 ಜನ ಶಿಸ್ತಿನ ಸಿಪಾಯಿಗಳಿಂದ ಅತಿರಥ ಕಲಾವಿದರು 20 ಜನ ರಂಗ ಕರ್ಮಿಗಳಿಂದ ಸಂಘ ಸಂಭ್ರಮಿಸುತ್ತಿತ್ತು".[11]

ಹೀಗೆ ಮಂಡಳಿಯ ಸಾಧನೆ, ವೈಭವ, ಅಭಿನಯ, ಮೆಚ್ಚಿ ಅನೇಕರು ಮೆಚ್ಚುಗೆ ಮಾತನ್ನಾಡಿದ್ದಾರೆ. ಇವರಲ್ಲಿ ದ.ರಾ.ಬೇಂದ್ರೆ, ಶಿವರಾಂ ಕಾರಂತ, ಎನ್ಕೆ ಪ್ರಮುಖರು.

---

[11] ಉತ್ತರ ಕರ್ನಾಟಕದ ರಂಗಭೂಮಿ – ಡಾ। ರಾಮಕೃಷ್ಣ ಮರಾಠೆ ಪುಟ –96

ಗರುಡರ ಮಂಡಳಿ ಬರೀ ನಾಟಕ ಪ್ರದರ್ಶನ ಮಾಡಲಿಲ್ಲ. ಅದೊಂದು ತರಬೇತಿ ಶಾಲೆಯೂ ಆಗಿರುತಿತ್ತು. ರಂಗಮಂದಿರ ದೇವಮಂದಿರವಾಗಿತ್ತು. ತರಬೇತಿ ಪಡೆಯುವ ಹುಡುಗರ ಬೇಕುಬೇಡಗಳನ್ನೆಲ್ಲ ಸ್ವತಃ ನೋಡಿಕೊಳ್ಳುತ್ತಿದ್ದ ಗರುಡರ ಪತ್ನಿ ಶ್ರೀಮತಿ ಭೀಮಾಬಾಯಿ ಹುಡುಗರಿಗೆ ತಾವು ಮನೆಬಿಟ್ಟು ಬಂದವರೆಂಬ ಭಾವನೆಯನ್ನು ಎಂದೂ ತರಗೊಡಲಿಲ್ಲ.

ಗರುಡರ ಅಭಿನಯ ತರಭೇತಿ ಶಾಸ್ತ್ರಬದ್ಧವಾಗಿತ್ತು. ರಸಪೋಷಿತ ಭಾವಾಭಿವ್ಯಕ್ತ ಕಲೆ ಕರಗತವಾಗಬೇಕೆಂದು ತಾಲಿಮಿನಲ್ಲಿ ನಟರೆದುರು ಶಿಕ್ಷಕರಾಗಿ ಕೂಡುತ್ತಿದ್ದರು. ಹತ್ತುಬಾರಿ ಹೇಳಿದರೂ ನಟರು ತಪ್ಪಿದರೆಂದರೆ ಅಂತವರಿಗೆ ಕಠಿಣಶಿಕ್ಷೆ ಕಾದಿರುತ್ತಿತ್ತು.

1942 ರ ನಂತರ ಮಂಡಳಿ ಇಳಿಮುಖವಾಗತೊಡಗಿತು. ಅದಾಗಲೇ ಚಲನಚಿತ್ರಗಳು ಬರತೊಡಗಿದ್ದವು. ನಟರ ನಿಷ್ಠೆ ಕಡಿಮೆಯಾಗತೊಡಗಿತ್ತು. ಶಿಸ್ತು ಮತ್ತು ಆರ್ಥಿಕ ಕುಸಿತವುಂಟಾಯಿತು. ಇದೇ ಹೊತ್ತಿನಲ್ಲಿ ಗರುಡರ ಕಣ್ಮಣಿಯಾಗಿದ್ದ ಆರುವರ್ಷದ ಕಿರಿಯ ಮಗಳು ತೀರಿ ಹೋದಳು. ಇವೆಲ್ಲದರಿಂದ ರಾಯರು ಮಂಡಳಿ ನಡೆಸುವ ಸಾಮರ್ಥ್ಯ ಕಳೆದುಕೊಂಡರು. ಆಗಲೇ ಅರವತ್ತು ವಸಂತಗಳನ್ನು ದಾಟಿದ ರಾಯರು ವೈರಾಗ್ಯ ತೊಟ್ಟು ಸನ್ಯಾಸ ಸ್ವೀಕರಿಸಿದರು.

ಸಹೋದರ ಸಾಂಬಯ್ಯ ಮತ್ತು ಅವರ ಮಕ್ಕಳ ಸಾರಥ್ಯದಲ್ಲಿ ಮತ್ತೆರಡು ವರ್ಷ ಮಂಡಳಿ ಮುನ್ನಡೆಯತಾದರೂ 1944 ರಲ್ಲಿ ಕಾಲು ಸೋತು ನಿಂತುಬಿಟ್ಟಿತು.

ಮೇಲೆ ತಿಳಿಸಿದ ಶಿವಮೂರ್ತಿಸ್ವಾಮಿ ಕಣಬರ್ಗಿ ಮಠರ "ಶ್ರೀ ಕಾಡಸಿದ್ದೇಶ್ವರ ಸಂಗೀತ ನಾಟಕ ಮಂಡಳಿಯಿಂದ" ಗರುಡ ಸದಾಶಿವರಾಯರ "ದತ್ತಾತ್ರೇಯ ನಾಟಕ ಮಂಡಳಿಯವರೆಗೆ ಅವಲೋಕಿಸಲಾದ ಈ ಏಳೂ ತಂಡಗಳ ಅವಲೋಕನ ಇಡೀ ಉತ್ತರ ಕರ್ನಾಟಕದ ರಂಗಭೂಮಿಯ ಅವಲೋಕನ ಆಗಿದೆ. ಈ ಒಂದೊಂದು ತಂಡವು ಒಂದೊಂದು ವೈಶಿಷ್ಟ್ಯಗಳಿಂದ ಕೂಡಿ ಉತ್ತರ ಕರ್ನಾಟಕದ ರಂಗಭೂಮಿಯು ಹಂತ ಹಂತವಾಗಿ ಸಾಗಿಬಂದದಾರಿ, ಮಾಡಿಕೊಂಡ ಬದಲಾವಣೆ, ಏರಿಳಿತ ಇವೆಲ್ಲವುಗಳು ಪ್ರಾತನಿಧಿಕ ಮಂಡಳಿಗಳಾಗಿವೆ.

ಮೊಟ್ಟಮೊದಲು ಶಿವಮೂರ್ತಿಸ್ವಾಮಿ ಕಣಬರ್ಗಿಮಠರು ನಟರಿಗೆ ಸೂಕ್ತ ತರಬೇತಿ, ವಿಪುಲವಾದ ರಂಗಪರಿಕರಗಳು, ಸ್ತ್ರೀ ಪಾತ್ರಗಳಿಗೆ ಸ್ತ್ರೀಯರನ್ನೇ ಸೇರಿಸಿಕೊಂಡಿದ್ದು, ಟ್ರಾನ್ಸಫರ್ ಸೀನರಿಗಳ ಸೇರ್ಪಡೆ, ಗ್ಯಾಸ್ ದೀಪಗಳ ಬದಲಿಗೆ ಡೈನಾಮೋಗಳಿಂದ ವಿದ್ಯುತ್‌ದೀಪ ಉರಿಸಿದ್ದು, ವೃತ್ತಿರಂಗಭೂಮಿಗೆ ಮೊಟ್ಟಮೊದಲು ಇವೆಲ್ಲವುಗಳನ್ನು ಪರಿಚಯಿಸಿದರು.

ಅದರಂತೆ ಶಿರಹಟ್ಟಿ ವೆಂಕೋಬರಾಯರು ಅದ್ದೂರಿತನಕ್ಕೆ ಇನ್ನಷ್ಟು ಹೆಸರಾದರು. ಏಕಕಾಲದಲ್ಲಿ ಅಕ್ಕಪಕ್ಕದ ಥಿಯೇಟರಗಳಲ್ಲಿ ಅದೇ ನಟರಿಂದ ಎರಡೂ ಕಡೆ ನಾಟಕ ಪ್ರದರ್ಶಿಸಿದಲ್ಲದೆ 47 ಎತ್ತಿನ ಗಾಡಿಗಳಲ್ಲಿ ಹೇರುವಷ್ಟು ರಂಗಪರಿಕರಗಳನ್ನಿಟ್ಟು ಚಲಿಸುವ ಸಂಸ್ಥಾನ ಎನಿಸಿಕೊಂಡರು. ಮುತ್ತುವೇಲು ಎಂಬ ಪೇಂಟರನಿಗೆ ತಿಂಗಳಿಗೆ 350 ರೂಗಳವರೆಗೂ ಸಂಬಳ ಕೊಟ್ಟದುಂಟು. ಇವರಿಬ್ಬರೂ ಬಾಲ್ಯಾವಸ್ಥೆಯಲ್ಲಿಯೇ ಇದ್ದ ಉತ್ತರ ಕರ್ನಾಟಕದ ರಂಗಭೂಮಿಗೆ ಆಡಂಬರ, ವೈಭವಗಳ ಲೇಪನದೊಂದಿಗೆ ಪ್ರೌಢಾವಸ್ಥೆಗೆ ತಂದರಲ್ಲದೇ ವೃತ್ತಿರಂಗಭೂಮಿಯನ್ನು ಆಕರ್ಷಕ ಕ್ಷೇತ್ರವಾಗಿ ಪರಿವರ್ತನೆಗೊಳಿಸಿದರು.

ಇನ್ನು ಹಲವಾರು ಯುವಕರು ಸೇರಿ ತಂಡವನ್ನು ಕಟ್ಟಿ ಅದನ್ನು ಅರ್ಧಶತಮಾನಕ್ಕೂ ಹೆಚ್ಚುಕಾಲ ಬಾಳಿಸಿದ ಕೀರ್ತಿ ರಾಮದುರ್ಗದ "ಆರ್ಯ ಸಂಗೀತ ನಾಟಕ ಮಂಡಳಿ"ಯ ನೇಕಾರರ ಬಂಧುಗಳಿಗೆ ಸಲ್ಲಬೇಕು. ಉದರ ಪೋಷಣೆಗಾಗಿ ಮಂಡಳಿಯನ್ನು ಅವಲಂಭಿಸದ ಈ ಯುವಕರು ಕೇವಲ ರಂಗಕಲೆಯ ಬಗೆಗಿನ ಅಭಿರುಚಿ, ಆಸಕ್ತಿಗಳಿಂದಲೇ ಮಂಡಳಿಯೊಂದನ್ನು ಕಟ್ಟಿ ಬೆಳೆಸಿದ ರೀತಿ ಬೆರಗುಗೊಳಿಸುವಂತದ್ದು. ಹೊಟ್ಟೆಪಾಡಿಗೆ ನೇಕಾರಿಕೆಯನ್ನು ಅವಲಂಭಿಸಿದ್ದು, ಜಾತ್ರಾ ಸಂದರ್ಭಗಳಲ್ಲಿ ಮಾತ್ರ ಬೇರೆ ಬೇರೆ ಊರುಗಳಲ್ಲಿ ನಾಟಕ ಪ್ರದರ್ಶಿಸಿದ್ದು, ಸಮಕಾಲಿನ ತಂಡಗಳಲ್ಲಿ ಮಹಿಳೆಯರ ಪ್ರವೇಶವಾಗಿದ್ದರೂ ಕೊನೆಯವರೆಗೂ ಮಂಡಳಿಗೆ ಮಹಿಳೆಯರನ್ನು ಸೇರಿಸದೆ ಇದ್ದದು ಗರುಡರ ಜನಪ್ರಿಯ ನಾಟಕದ ಹಸ್ತಪ್ರತಿಯನ್ನು ಕದ್ದು ತಂದು ಆಡಿದ್ದು (ನಂತರ ಇದು ಸಾಮಾನ್ಯವಾಯಿತು) ಈ ಮಂಡಳಿಯ ವೈಶಿಷ್ಟ್ಯಗಳೆಂದು ಹೇಳಬೇಕು.

ಇನ್ನು ಹಲಗೇರಿಯ "ಹಾಲಸಿದ್ದೇಶ್ವರ ಸಂಗೀತ ನಾಟಕ ಮಂಡಳಿ" ಸ್ಥಾಪನೆಯಾದದ್ದು ಮತ್ತೊಂದು ಮೈಲಿಗಲ್ಲು. ಯಾಕೆಂದರೆ ಈಗಿನ ಕೈಗಾರಿಕೆಗಳು ಜನರಿಂದ ಶೇರು ಹಣ ಸಂಗ್ರಹಿಸುವ ಅಥವಾ ಸಹಕಾರಿ ಸಂಘಗಳು ಶೇರು ಸಂಗ್ರಹಿಸುವ ಮಾದರಿಯಲ್ಲಿಯೇ ಜನರಿಂದ ಶೇರು ಸಂಗ್ರಹಿಸಿ ರಿಯಾಯತಿ ದರದಲ್ಲಿ ಅವರಿಗೆ ನಾಟಕ ನೋಡಲು ಅವಕಾಶ ಕಲ್ಪಿಸಿ ಬಂದ ಲಾಭದಲ್ಲಿ ಅವರಿಗೂ ಹಂಚುವ ಹೊಸ ಪರಿಕಲ್ಪನೆಯೊಂದಿಗೆ ಈ ಮಂಡಳಿ ಆರಂಭವಾಯಿತು.. ವೃತ್ತಿರಂಗಭೂಮಿಯ ಇತಿಹಾಸದಲ್ಲಿಯೇ ಇದೊಂದು ಅಳಿಸಲಾಗದ ದಾಖಲೆಯೇ ಸರಿ, ಆದರೆ ಇವರ ನಂತರದ ದಿನಗಳಲ್ಲಿ ಮತ್ತೊಂದು ಇಂಥ ಪ್ರಯತ್ನ ಯಾರೂ ಮಾಡದೇ ಇರುವುದು ವಿಷಾದನೀಯ. ಆದರೆ ಆರ್ಥಿಕ ಮುಗ್ಗಟ್ಟಿನಿಂದ ಈ ವ್ಯವಸ್ಥೆ ಬಹುಕಾಲ ಬಾಳಲಿಲ್ಲವೆನ್ನುವುದೂ ಅಷ್ಟೇ ಸತ್ಯ. ಈ ಮಂಡಳಿಯ

ಮತ್ತೊಂದು ವೈಶಿಷ್ಟ್ಯವೆಂದರೆ, ಮಂಡಳಿಯ ಏರಿಕೆಯ ದಿನಗಳಲ್ಲಿ ಪ್ರಚಾರಕ್ಕೆ ವಿಶೇಷ ಒತ್ತು ನೀಡಿದ್ದು. ಆಗಿನ ದಿನಗಳಲ್ಲಿ (1935 ರ ಸುಮಾರು) ಬೆಂಗಳೂರಿನಲ್ಲಿ ಪ್ರಚಾರಕ್ಕಾಗಿ 7000 ರೂಪಾಯಿ ಖರ್ಚು ಮಾಡಿದ್ದು, ಅದು ಫಲ ನೀಡದಿದ್ದಾಗ ಗುಬ್ಬಿವೀರಣ್ಣವರ ಸಲಹೆಯಂತೆ ಟಕೇಟು ಮಾರುವದರಿಂದ ಹಿಡಿದು ಗೇಟ ಕೀಪರವರೆಗೆ ಮಹಿಳೆಯರನ್ನೆ ನೇಮಿಸಿ ಯಶಸ್ಸು ಕಂಡದ್ದು. ಅದಲ್ಲದೆ ಆಡುವ ನಾಟಕಗಳಿಗೆ ಹಾಸ್ಯಕ್ಕೆ ಪ್ರಧಾನ್ಯತೆ ನೀಡಿ ರಂಗಪ್ರಯೋಗಗಳಿಗೆ ಹೊಸ ಆಯಾಮ ನೀಡಿದ್ದು ಈ ಮಂಡಳಿಯು ವೃತ್ತಿರಂಗಭೂಮಿಗೆ ನೀಡಿದ ಮತ್ತೊಂದು ಕೊಡುಗೆ ಎಂದೇ ಹೇಳಬೇಕು.

ಈ ಹಂತದಲ್ಲಿ ಮಹಿಳೆಯೊಬ್ಬಳು ತಂಡವನ್ನು ಕಟ್ಟಿಬೆಳಿಸಿದ್ದು ವೃತ್ತಿರಂಗಭೂಮಿಯ ಇತಿಹಾಸದಲ್ಲಿನ ಮತ್ತೊಂದು ತಿರುವು. ಅವಳ ಹೆಸರು 'ಬಚ್ಚಾಸಾನಿ ದೊಡ್ಡಮನಿ' 1901 ರಲ್ಲಿ ವೃತ್ತಿರಂಗಭೂಮಿಗೆ ಕಾಲಿಟ್ಟ ಮೊದಲ ಮಹಿಳೆ ಎಲ್ಲೂಬಾಯಿ ಗುಳೇದಗುಡ್ಡ ಎನಿಸಿದರೆ ಮುಂದೇ ಎಂಟೇ ವರುಷಗಳಲ್ಲಿ ಸ್ತ್ರೀ ಸಂಗೀತ ನಾಟಕ ಮಂಡಳಿಯೊಂದನ್ನು ಸ್ಥಾಪಿಸಿದ ದಾಖಲೆ ಬಚ್ಚಾಸಾನಿಯದಾಗುತ್ತದೆ. ಅಷ್ಟರಲ್ಲಾಗಲೇ ರಂಗಭೂಮಿ ಆಕರ್ಷಣೆ ಹೆಚ್ಚುತ್ತಿದ್ದ ಕಾಲ. ಏಳುಮಂದಿ ಸಹೋದರಿಯರಿದ್ದ ದೊಡ್ಡ ಕುಟುಂಬದ ಬಚ್ಚಾಸಾನಿ ಉದರ ಪೋಷಣೆಗಾಗಿ ಇಂಥ ಒಂದು ಸಾಹಸಕ್ಕೆ ಕೈಹಾಕಿದ್ದರೂ, ವೃತ್ತಿ ರಂಗಭೂಮಿಯ ಇತಿಹಾಸದಲ್ಲಿ ಅಳಿಸಲಾಗದ ಹೆಸರಾಗಿ ಸೇರ್ಪಡೆಗೊಂಡು, ಮುಂದೆ ಅನೇಕ ಮಹಿಳೆಯರು ಇಂಥ ಸಾಹಸ ಮಾಡಲು ಪ್ರೇರಣೆಯಾಗುತ್ತಾಳೆ. ಮಂಡಳಿಯ ಎಲ್ಲ ಕೆಲಸಕಾರ್ಯಗಳನ್ನು ಮಹಿಳೆಯರೇ ನಿರ್ವಹಿಸುತ್ತಿದ್ದುದು ಈ ಮಂಡಳಿಯ ಮತ್ತೊಂದು ವಿಶೇಷ ವೃತ್ತಿಮಂಡಳಿಯಲ್ಲಿ ಮಹಿಳೆಯರಿಗಿದ್ದ ಇತಿಮಿತಿಗಳನ್ನು ತೆರವುಗೊಳಿಸಿದವಳು ಬಚ್ಚಾಸಾನಿ, ಈ ರಂಗದಲ್ಲಿದ್ದ ಮಹಿಳೆಯರ ಆತ್ಮವಿಶ್ವಾಸವನ್ನು ಹಿಗ್ಗಿಸಿದಾಕೆಯೂ ಹೌದು.

ವ್ಯಕ್ತಿಯೊಬ್ಬಳು ತನ್ನ ಪ್ರತಿಭೆ ಹಾಗೂ ಸೌಂದರ್ಯಗಳಿಂದ ಕಂಪನಿಯೊಂದನ್ನು ಬೆಳೆಸಬಲ್ಲಳೆಂಬುದಕ್ಕೆ ರಂಗಭೂಮಿಯ ಇತಿಹಾಸದಲ್ಲಿ ಸಾಕ್ಷಿಯಾಗಿ ಉಳಿದಾಕೆ ಗಂಗೂಬಾಯಿ ಗುಳೇದಗುಡ್ಡ. ಈಕೆಗೆ ತಕ್ಕಸಾಥ್ ನೀಡಿ ಅಪ್ರತಿಮ ಕಲಾವಿದೆಯನ್ನಾಗಿ ರೂಪಿಸಿದ್ದು ವಾಮನರಾಯರು. "ವಿಶ್ವಗುಣಾದರ್ಶ ನಾಟಕ ಮಂಡಳಿ" ರಂಗಭೂಮಿಯ ಪರಿಪಾಠದಲ್ಲಿ ಸಾಕಷ್ಟು ಬದಲಾವಣೆಯನ್ನು ತಂದಿತು. ಮಂಡಳಿಯಲ್ಲಿ ಸಂಗೀತವನ್ನು ಶಾಸ್ತ್ರಬದ್ಧವಾಗಿ ಬಳಸಲ್ಪಟ್ಟಿತು. ಮರಾಠಿ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರದರ್ಶಿಸಲಾಯಿತು. ಪ್ರಪ್ರಥಮವಾಗಿ ಬೆಂಗಳೂರಿನಲ್ಲಿ ವರ್ಷಾನುಗಟ್ಟಲೇ ನಾಟಕಗಳನ್ನು ಪ್ರದರ್ಶಿಸಿದ ಕೀರ್ತಿ ಈ ಮಂಡಳಿಯದ್ದು, ಅದಕ್ಕೂ ಹೆಚ್ಚಾಗಿ ಅಪರೂಪದ ಸೌಂದರ್ಯ.

ಮಧುಕರಕಂಠ, ಅದ್ಭುತ ಸಂಗೀತಜ್ಞಾನ, ಅಭಿನಯ ಕೌಶಲ ಹೊಂದಿದ್ದ ಗಂಗೂಬಾಯಿ ಗುಳೇದಗುಡ್ಡ ಈ ಮಂಡಳಿಯ ಪ್ರಮುಖ ಆಕರ್ಷಣೆಯಾಗಿದ್ದಳು. ಅಷ್ಟೇ ಅಲ್ಲ ಆಸ್ತಿಯೂ ಆಗಿದ್ದಳು. ಗಂಗೂಬಾಯಿ ವಾಮನರಾಯರ ಕಂಪನಿಯನ್ನು ಎರಡೆರಡು ಬಾರಿ ಬಿಟ್ಟಾಗಲೂ ಕಂಪನಿ ಕುಸಿತ ಕಂಡದ್ದೆ ಇದಕ್ಕೆ ಸಾಕ್ಷಿ.

ಇನ್ನು ಗದುಗಿನ ದತ್ತಾತ್ರೇಯ ನಾಟಕ ಮಂಡಳಿಯ ಗರುಡ ಸದಾಶಿವರಾಯರು ವೃತ್ತಿರಂಗಭೂಮಿಗೆ ನೀಡಿದ್ದು ಮತ್ತೊಂದು ಆಯಾಮ. ಅದುವರೆಗೆ ಮಂಡಳಿಗಳು ಅದ್ದೂರಿ ಆಡಂಬರಗಳಿಗೆ ಆಧ್ಯತೆ ನೀಡುತ್ತ ಬಂದಿದ್ದ ಕಾಲದಲ್ಲಿ ಅದ್ದೂರಿತನವಿಲ್ಲದೇ, ಪ್ರಬುದ್ಧ ಅಭಿನಯ, ಸತ್ವಯುತ ಸಾಹಿತ್ಯ, ಸಂಬಾಷಣೆಗಳಿಂದಲೂ ರಂಗಭೂಮಿಯನ್ನು ಆಕರ್ಷಕಗೊಳಿಸಬಹುದೆಂಬುದನ್ನು ಸಿದ್ಧಮಾಡಿ ತೋರಿಸಿದರು. ಬೆಂಗಳೂರಿನಲ್ಲಿ ಸರಿಯಾದ ಥಿಯೇಟರ ಇಲ್ಲದೆ ವೈಭವ ಆಡಂಬರ ಇಲ್ಲದೆ ಅಕ್ಕಪಕ್ಕದಲ್ಲಿ ಶಿರಹಟ್ಟಿ ವೆಂಕೋಬಾಚಾರ್ಯರು, ಗುಬ್ಬಿವೀರಣ್ಣ ನಂಥವರನ್ನು ಪೈಪೋಟಿಯಲ್ಲಿ ಗೆದ್ದದ್ದೆ ಇದಕ್ಕೆ ಸಾಕ್ಷಿ. ಆರ್ಥಿಕ ಅನುಕೂಲತೆ ಇಲ್ಲದಾಗ ಆಡಂಬರ, ವೈಭವಗಳಿಂದ ವಿಮುಖರಾಗಿದ್ದ ಗರುಡರು ಮಂಡಳಿ ಸುಸ್ಥಿತಿಗೆ ಬಂದಾಗ ಅದ್ದೂರಿತನಕ್ಕೂ ಹೆಸರಾದದ್ದು ಅಷ್ಟೇ ಸತ್ಯ. ಇದು ಗರುಡರು ರಂಗಭೂಮಿಗೆ ಕೊಟ್ಟ ವಿನೂತನ ಕೊಡುಗೆ. ಜೊತೆಗೆ ಕವಿಗಳನ್ನು ಕರೆಸಿ ಅವರಿಂದ ನಾಟಕ ಬರೆಯಿಸಿ ನಿರ್ದೇಶಿಸುತ್ತಿದ್ದ ಕಾಲದಲ್ಲಿ, ಗರುಡರು ಸ್ವತಃ ನಾಟಕಗಳನ್ನು ರಚಿಸಿ ನಿರ್ದೇಶಿಸಿದರು. ರಾಷ್ಟ್ರೀಯವಾದಿಗಳೂ, ಅಪ್ಪಟ ದೇಶಪ್ರೇಮಿಗಳೂ, ಆಗಿದ್ದ ಗರುಡರು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯುತ್ತಿದ್ದ ಕಾಲದಲ್ಲಿ ಜನರಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹೊತ್ತಿಸಲು ರಂಗಭೂಮಿಯನ್ನು ಬಳಸಿದ್ದು ಇವರ ಮತ್ತೊಂದು ಸಾಧನೆ. ಇವರ ಹಲವಾರು ನಾಟಕಗಳಲ್ಲಿ ಸ್ವಾತಂತ್ರ್ಯ ಪ್ರತಿಪಾದನೆಯ ಸಂಭಾಷಣೆಗೆ ಪ್ರತಿಯಾಗಿ ಪ್ರೇಕ್ಷಕರು "ಭೋಲೋ ಭಾರತಮಾತಾಕಿ ಜೈ" ಎಂದು ಘೋಷಣೆ ಕೂಗಿದ್ದುಂಟು. ಸ್ವಾತಂತ್ರ್ಯ ಹೋರಾಟಗಾರರಿಗೆ ಆಶ್ರಯ, ಹಣದ ಸಹಾಯ, ಇಡೀ ಮಂಡಳಿಗೆ ಖಾದಿ ದೀಕ್ಷೆ ನೀಡಿದ್ದು, ಇವೆಲ್ಲಾ ಗರುಡರ ಸಾಮಾಜಿಕ ಜವಾಬ್ದಾರಿಗಳನ್ನು ಸಾಕ್ಷೀಕರಿಸಿವೆ.

ಹೀಗೆ ಶಿವಮೂರ್ತಿಸ್ವಾಮಿ ಕಣಬರಗಿಮಠರಿಂದ ಹಿಡಿದು ಗರುಡ ಸದಾಶಿವರಾಯರವರೆಗೆ ಇದುವರೆಗೆ ನಾವು ಗಮನಿಸಿದ್ದು 1900 ರಿಂದ 1940 ರ ವರೆಗೆ ಉತ್ತರ ಕರ್ನಾಟಕದ ರಂಗಭೂಮಿ ನಡೆದುಬಂದ ಇಡೀ ದಾರಿಯ ದಿಕ್ಸೂಚಿಯೇ ಆಗಿದೆ. ಈ ಅವಧಿಯಲ್ಲಿ ಈ ಮಂಡಳಿಯೊಂದಿಗೆ ಹೆಸರಿಸಲೇ ಬೇಕಾದ ಮಂಡಳಿಗಳೂ ಇವೆ. ಆದರೆ ಇವು ಮೇಲೆ ಉಲ್ಲೇಖಿಸಲಾದ ವೃತ್ತಿಮಂಡಳಿಗಿಂತ ಭಿನ್ನವಾಗಿರಲಿಲ್ಲ. ರಂಗಭೂಮಿಗೆ ಹೊಸದೇನನ್ನು ಪರಿಚಯಿಸಲಿಲ್ಲ. ಆದಾಗ್ಯೂ ಪಡೆದ ಜನಪ್ರಿಯತೆ.

ನಡೆಸಿದ ಪ್ರದರ್ಶನ, ಅದ್ದೂರಿತನ ಬಹಳದಿನ ಬಾಳಿಕೆ ದೃಷ್ಟಿಯಿಂದಲಾದರೂ ಅವುಗಳ ಹೆಸರನ್ನು ಇಲ್ಲಿ ಪ್ರಸ್ತಾಪಿಸಲೇಬೇಕು.

1. ಅಬ್ಬಿಗೇರಿ ಬಸನಗೌಡರ "ಕನ್ನಡ ಸಾಹಿತ್ಯ ಸೇವಾ ಸಂಗೀತ ನಾಟಕ ಮಂಡಳಿ (1928 ರಿಂದ 1930) ಗೌಡರು ಆಗಿನ ಕಾಲದಲ್ಲಿ 50–60 ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ಮಂಡಳಿಯನ್ನು ಆರಂಭಿಸಿದರು. ಅದು ಸ್ವಾತಂತ್ರ್ಯಹೋರಾಟ ತೀವ್ರಗೊಳ್ಳುತ್ತಿದ್ದ ಕಾಲವಾದ್ದರಿಂದ ಅದಕ್ಕೆ ಸ್ಪಂದಿಸಿದ ಮಂಡಳಿ, ಜನರಲ್ಲಿ ಹೋರಾಟದ ಕೆಚ್ಚನ್ನು ಹೆಚ್ಚಿಸಲು 'ಕಿತ್ತೂರ ಚನ್ನಮ್ಮ' 'ಜಾನ್ಸಿರಾಣಿ ಲಕ್ಷ್ಮೀಬಾಯಿ', 'ನರಗುಂದ ಬಂಡಾಯ'ದಂಥ ರಾಷ್ಟ್ರಾಭಿಮಾನ ಉಕ್ಕಿಸುವ ನಾಟಕಗಳನ್ನಾಡಿ ಬ್ರಿಟೀಷರ ಕೆಂಗಣ್ಣಿಗೆ ಗುರಿಯಾಯಿತು. ಇವರ ನಾಟಕ ನೋಡಿದ ಪ್ರೇಕ್ಷಕರು ವಿದೇಶಿ ಬಟ್ಟೆಗಳನ್ನು ಸುಟ್ಟು ಹಾಕಿದರು. ಸಿಂದಿಯ ಮರಗಳನ್ನು ಕಡಿದರು. ಅಷ್ಟೇ ಅಲ್ಲ ನಾಗನೂರಿನ ರಾಚನಾಯ್ಕರ ಮನೆತನದ ಹೆಣ್ಣುಮಗಳೊಬ್ಬಳು ಕಲೆಕ್ಟರನನ್ನೇ ಚಪ್ಪಲಿಯಿಂದ ಹೊಡೆದಳಂತೆ, ಇದರ ಪರಿಣಾಮವಾಗಿ ಈ ಮಂಡಳಿಯ ಪ್ರದರ್ಶನಗಳನ್ನು ಬ್ರಿಟೀಷ ಸರಕಾರ ನಿಷೇಧಿಸಿತು. ಬಸನಗೌಡರು ದಿಲ್ಲಿಯತನಕ ಹೋಗಿ ಪ್ರಯತ್ನಿಸಿದರೂ ಪ್ರಯೋಜನವಾಗದೆ ಮಂಡಳಿ ಬೇಗನೆ ಮುಚ್ಚುವಂತಾಯಿತು.



2. ಗದುಗಿನ ಶ್ರೀಮಂತ ವ್ಯಾಪಾರಿಗಳಾದ ಯರಾಶಿ ಭರಮಪ್ಪನವರ "ಶ್ರೀ ವಾಣಿವಿಲಾಸ ಸಂಗೀತ ನಾಟಕ ಮಂಡಳಿ (1929) ಅಮೀರಜಾನ, ಗೋಹರಜಾನ್ ಕರ್ನಾಟಕೀಯವರನ್ನು ರಂಗಕ್ಕೆ ಪರಿಚಯಿಸಿದ ಈ ಮಂಡಳಿ "ಕಿತ್ತೂರ ರುದ್ರಮ್ಮ" ನಾಟಕಕ್ಕೆ 50 ಸಾವಿರ ರೂಪಾಯಿಗಳ ಬೆಲೆಬಾಳುವ ದೃಶ್ಯಾವಳಿಗಳು, ಎರಡೆರಡು ಆರ್ಗನ್, 12 ಜತೆ ತಬಲಾ, 10 ಜತೆ ಸಾರಂಗಿ, ಸಾರಂಗಿ ನುಡಿಸುವ ಕಲಾವಿದರನ್ನು ದಿಲ್ಲಿಯಿಂದ ಕರೆಸಿ ಆಡಿಸಿದ್ದು ಈ ಮಂಡಳಿಯ ವಿಶೇಷ.

3. ಶ್ರೀ ಬಸವೇಶ್ವರ ಸಂಗೀತ ನಾಟಕ ಮಂಡಳಿ, ಲೋಕಸೇವಾ ಸಂಗೀತ ನಾಟಕ ಮಂಡಳಿ ಸಂಪಗಾಂವಿ" (1928–1942) ಮಹಾನ್ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಚನ್ನಪ್ಪ ವಾಲಿ ಮತ್ತು ಇತರ ನಾಲ್ಕುಜನ ಇದರ ಸ್ಥಾಪಕರು. ಸಹಜವಾಗಿ ಮಂಡಳಿ ಕ್ರಾಂತಿಕಾರಿ ನಾಟಕಗಳನ್ನೇ ಹೆಚ್ಚಾಗಿ ಪ್ರದರ್ಶಿಸಿತು. ಪರಿಣಾಮವಾಗಿ ಪದೇ ಪದೇ ಬ್ರಿಟೀಷರ ಕಿರುಕುಳ ತೊಂದರೆಗಳೇ ಎದುರಾದವು. "ಕ್ರಾಂತಿವೀರ ಸಂಗೊಳ್ಳಿರಾಯಣ್ಣ" "ವೀರ ಸಿಂಧೂರ ಲಕ್ಷ್ಮಣ" 'ಕಿತ್ತೂರ ಚನ್ನಮ್ಮ'. ಮೊದಲಾದವು ಈ ಮಂಡಳಿಯ ಪ್ರಮುಖ ನಾಟಕಗಳು.

## 4. ಶ್ರೀ ಗುರು ಕೆ.ಬಿ.ಆರ್ ಡ್ರಾಮಾ ಕಂಪನಿ, ದಾವಣಗೇರೆ.

1928 ರಿಂದ ಇಂದಿನವರೆಗೂ ಉತ್ತರ ಕರ್ನಾಟಕದಾದ್ಯಂತ ಹೆಸರು ಮಾಡಿದ ಶ್ರೀ ಕರಿಬಸವೇಶ್ವರ ನಾಟಕ ಮಂಡಳಿ ದಾವಣಗೆರೆ, ಚಿಂದೋಡಿ ಶಾಂತವೀರಪ್ಪನವರು ಇದರ ಸಂಸ್ಥಾಪಕರು. ವೃತ್ತಿರಂಗಭೂಮಿಯ ಇತಿಹಾಸದಲ್ಲೇ ಅತ್ಯಂತ ಹೆಸರು ಮಾಡಿದ ಚಿಂದೋಡಿ ಲೀಲಾ ಇವರ ಮಗಳು ಇತ್ತೀಚಿನವರೆಗೂ (ನಿಧನರಾಗುವವರೆಗೂ) ಇವರೇ ಮಂಡಳಿಯನ್ನು ಮುಂದುವರೆಸಿಕೊಂಡು ಬಂದಿದ್ದರು. ಈಗ ಇವರ ಅಣ್ಣನ ಮಗ ಚಿಂದೋಡಿ ಶ್ರೀಕಂಠೇಶ ಇದನ್ನು ನಡೆಸುತ್ತಿದ್ದಾರೆ 82 ವರ್ಷಗಳ ಈ ಮಂಡಳಿ ಶತಮಾನದತ್ತ ಮುನ್ನಡೆಯುತ್ತಿರುವುದು ಒಂದು ದಾಖಲೆಯೇ ಸರಿ.

## 5. ಲಲಿತ ಕಲೋದ್ಧಾರಕ ನಾಟಕ ಮಂಡಳಿ, ಬಿಜಾಪುರ.

ಶ್ರೀ ಅರವಿಂದ ನಾಟಕ ಮಂಡಳಿ

ಜಯ ಅರವಿಂದ ನಾಟಕ ಮಂಡಳಿ

1930 ರಿಂದ 1942 ಅವಧಿಯಲ್ಲಿ ಒಂದು ನಿಂತೊಡನೆ ಮತ್ತೊಂದರಂತೆ ಈ ಮಂಡಳಿಗಳನ್ನು ಸ್ಥಾಪಿಸಿದವರು ಹಿರಿಯ ನಾಟಕಕಾರ ದಿ। ಕಂದಗಲ್ ಹನುಮಂತರಾಯರು.

## 6. ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ, ಗೋಕಾಕ

ಹೆಸರಾಂತ ಕಂಪನಿಗಳಲ್ಲಿ ನಟ, ನಿರ್ದೇಶಕ, ಗವಾಯಿಗಳಾಗಿ ಹೆಸರಾಗಿದ್ದ ತುಕಾರಾಮ ಬುವಾ ಅವರು 1933 ರಲ್ಲಿ ಈ ಮಂಡಳಿಯನ್ನು ಸ್ಥಾಪಿಸಿದರು. ತಂದೆಯಂತೆ ಮಗ ಬಸವಣ್ಣೆಪ್ಪ ಹೊಸಮನಿಯವರೂ 1985 ರ ವರೆಗೆ ಮಂಡಳಿಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದರು. ಉತ್ತರ ಕರ್ನಾಟಕದ ಕೆಲವೇ ಹೆಸರಾಂತ ಮಂಡಳಿಗಳಲ್ಲಿ ಇದೂ ಒಂದು.

## 7. ಭಾಗ್ಯೋದಯ ನಾಟಕ ಮಂಡಳಿ, ಅಥಣಿ

ಖ್ಯಾತ ಹಾರ್ಮೋನಿಯಂ ವಾದಕ ಅಥಣಿಯ ಭೀಮಪ್ಪ ಹೂಗಾರ ತಾರಾಪತ್ನಿ ಕಾಶಿಬಾಯಿ ನಾಲ್ವತ್ತವಾಡ ಈ ಮಂಡಳಿಯ ಸ್ಥಾಪಕರು. 1933 ರಿಂದ 1942 ರ ವರೆಗೆ ಮಂಡಳಿ ಇತ್ತು.

## 8. ಶ್ರೀ ಗಜಾನನ ನಾಟ್ಯಸಂಘ, ಜಮಖಂಡಿ

ಸ್ಥಾಪಕರು ದತ್ತಂಭಟ್ಟ ಒಡೆಯರ್ (ಅವಧಿ 1935 ರಿಂದ 1980 ರ ವರೆಗೆ) ದತ್ತಂಭಟ್ಟರೆ ನಡೆಸಿದ್ದಾರೆ ನಂತರ ಕೆಲವು ವರ್ಷ ಅವರ ಮಕ್ಕಳು ನಡೆಸಿದ್ದಾರೆ.

## 9. ಶ್ರೀ ವಿಶ್ವರಂಜನಿ ನಾಟಕ ಮಂಡಳಿ, ತಡವಲ್ಗಾ

ಸ್ಥಾಪಕರು ವಿಷ್ಣುಪಂತ ಕುಲಕರ್ಣಿ ಮತ್ತು ಹಕ್ಕಂಡಿ ವೀರಪ್ಪ (ಅವಧಿ 1935 ರಿಂದ 1938) ದ್ರೌಪದಿ ಸ್ವಯಂವರ ನಾಟಕದ ಸ್ವಯಂವರ ಸನ್ನಿವೇಶ ಒಂದಕ್ಕೆ ಆಗಿನ ಕಾಲದಲ್ಲಿ 50 ಸಾವಿರ ರೂಪಾಯಿಗಳನ್ನು ಖರ್ಚುಮಾಡಿದ್ದು ಈ ಮಂಡಳಿಯ ಹೆಗ್ಗಳಿಕೆ ಹಂದಿಗನೂರ ಸಿದ್ರಾಮಪ್ಪ, ಬಸವರಾಜ, ಮನಸೂರು, ಸಂಗನ ಬಸಪ್ಪ ಕುಕನೂರ, ಶಾಂತಪ್ಪ ಡಂಬಳ, ಸುಶೀಲಾ ಬಸರೂರ ರಂಥ ಮಹಾನ್ ಕಲಾವಿದರ ಅಭಿನಯದಿಂದ ಉತ್ತುಂಗಕ್ಕೇರಿದ ಮಂಡಳಿ ಇವರೆಲ್ಲರ ನಿರ್ಗಮನದಿಂದಾಗಿ ಅಲ್ಪಾಯುಷಿಯಾಯಿತು.

## 10. ಕಲಾ ಪ್ರಕಾಶ ನಾಟಕ ಮಂಡಳಿ, ಧಾರವಾಡ.

ಪ್ರಬುದ್ಧ ನಟ, ಗಾಯಕ ಬಸವರಾಜ ಮನಸೂರ ಇದರ ಸ್ಥಾಪಕರು (1936 ರಿಂದ 1945 ರ ವರೆಗೆ) ಬಸವರಾಜ ಮನಸೂರು ಮತ್ತು ಗಾನರತ್ನ ಗಂಗೂಬಾಯಿ ಗುಳೇದಗುಡ್ಡ ಇವರು ಮಂಡಳಿಯ ಪ್ರಮುಖ ಆಕರ್ಷಣೆಯಾಗಿದ್ದರು. ಸೊಲ್ಲಾಪುರದ ಸಂಗೀತಾ ಥಿಯೇಟರಿನಲ್ಲಿ ಮಂಡಳಿ ಕ್ಯಾಂಪ ಮಾಡಿ 'ಶ್ರೀ ಸಿದ್ಧರಾಮೇಶ್ವರ' ನಾಟಕ ಆಡುತ್ತಿದ್ದಾಗ ಅಲ್ಲಿ ಈ ನಾಟಕಗಳ ಪ್ರಯೋಗ ನಡೆಯತೊಡಗಿದವು. ಆದರೆ ಗಳಿಕೆಯಲ್ಲಿ ಈ ಮಂಡಳಿ ಮರಾಠಿ ನಾಟಕವನ್ನು ಮೀರಿಸಿದ್ದು ಈ ಮಂಡಳಿಯ ವೈಶಿಷ್ಟ್ಯ

## 11. ನೂತನ ನಾಟಕ ಮಂಡಳಿ

ಸ್ಥಾಪಕರು ವೆಂಕಟರಾವ್ ರಾಮದುರ್ಗ ಮತ್ತು ಸೋನುಬಾಯಿ ದೊಡ್ಡಮನಿ. (1936 ರಿಂದ 1947). ಕರ್ನಾಟಕದ ಉದ್ದಗಲಕ್ಕೂ ಸಂಚರಿಸಿ ಜನಾಧರ ಗಳಿಸಿತು. ಈ ಮಂಡಳಿಯ ಪ್ರಮುಖ ನಾಟಕ ಸತ್ಯಹರಿಶ್ಚಂದ್ರ, 1943 ರಲ್ಲಿ ಮಂಡಳಿ ಹುಬ್ಬಳ್ಳಿಯಲ್ಲಿತ್ತು. "ರಾಜಾ ಹರಿಶ್ಚಂದ್ರ" ಚಲನಚಿತ್ರ ಬಿಡುಗಡೆಯಾಗಿ ಹುಬ್ಬಳ್ಳಿಯಲ್ಲೂ ಪ್ರದರ್ಶಿತವಾಗತೊಡಗಿತು. ಚಲನ ಚಿತ್ರದಿಂದಾಗಿ ನಾಟಕದ ಆದಾಯ ಕುಸಿಯಬಹುದೆಂಬ ಭಯದಿಂದ ಮಂಡಳಿಯ ವ್ಯವಸ್ಥಾಪಕರು ನಾಟಕ ಬದಲಿಸುವ ಆಲೋಚನೆ ಮಾಡಿದರು. ಆದರೆ ಹರಿಶ್ಚಂದ್ರ ಪಾತ್ರದಾರಿ ಹಂದಿಗನೂರ ಸಿದ್ರಾಮಪ್ಪ ಒಪ್ಪಲಿಲ್ಲ. ಹರಿಶ್ಚಂದ್ರ

ನಾಟಕವನ್ನೇ ಆಡುವದೆಂದರು. ವಿಚಿತ್ರವೆಂದರೆ ಈ ನಾಟಕ ತಿಂಗಳಾನುಗಟ್ಟಲೇ ಜನದಟ್ಟಣೆಯ ಪ್ರದರ್ಶನ ಕಂಡಿತು. ಅದೇ ಬಿಡುಗಡೆಯಾದ ಚಲನಚಿತ್ರದೆದುರೇ ಅದೇ ನಾಟಕ ಆಡಿ ಚಿತ್ರರಂಗವನ್ನು ಎದುರಿಸಿದ್ದು ಈ ಮಂಡಳಿಯ ವಿಶೇಷವೇ ಸರಿ.

1878 ರಿಂದ 1900 ರ ವರೆಗಿನ ಅವಧಿಯನ್ನು ವೃತ್ತಿ ರಂಗಭೂಮಿಯ ಪ್ರಾಯೋಗಿಕ ಕಾಲವೆಂದು ಕರೆಯಬಹುದಾದರೆ 1900 ರಿಂದ 1940 ರ ವರೆಗಿನ ಅವಧಿಯನ್ನು ವೃತ್ತರಂಗಭೂಮಿಯ ಸುವರ್ಣಯುಗವೆಂದೇ ಹೇಳಬೇಕು. ಈ ಕೆಳಗಿನ ಕಂಪನಿಗಳ ಸ್ಥಾಪನೆಯ ವಿವರವೇ ಅದಕ್ಕೆ ಸಾಕ್ಷಿ. ಪ್ರತಿ ಹತ್ತು ವರ್ಷದ ಅವಧಿಯಲ್ಲಿ ಹುಟ್ಟಿಕೊಂಡ ಮಂಡಳಿಗಳ ಅಂಕಿಸಂಖ್ಯೆ ವಿವರ ಈ ಕೆಳಗಿನಂತಿದೆ. (ಉತ್ತರ ಕರ್ನಾಟಕದ ವಿವರ ಮಾತ್ರ)

**ಇದು ಏರಿಕೆಯ ಕಾಲ**

| ಕಾಲ | ಹುಟ್ಟಿದ ಮಂಡಳಿಗಳ ಸಂಖ್ಯೆ |
|---|---|
| 1869–1879 ರ ವರೆಗೆ | 02 |
| 1886–1896 ರ ವರೆಗೆ | 02 |
| 1899–1909 ರ ವರೆಗೆ | 03 |
| 1911–1921 ರ ವರೆಗೆ | 08 |
| 1925–1935 ರ ವರೆಗೆ | 25 |
| **ಇಳಿಕೆಯ ಕಾಲ** | |
| 1936–1946 ರ ವರೆಗೆ | 16 |
| 1949–1959 ರ ವರೆಗೆ | 09 |
| 1960–1970 ರ ವರೆಗೆ | 10 |
| 1975–1985 ರ ವರೆಗೆ | 05 |

ನಂತರದ ಅವಧಿಯಲ್ಲಿ ಆಗೊಂದು ಈಗೊಂದರಂತೆ ಮಂಡಳಿಗಳು ಹುಟ್ಟಿಕೊಂಡವಾದರೂ ಅಲ್ಪಾಯುಷಿಯಾದ ಅವು ಗಮನಸೆಳೆಯಲಿಲ್ಲ. ಶೇಖಮಾಸ್ತರರ ಶ್ರೀಗುರು ಕುಮಾರೇಶ್ವರ ನಾಟ್ಯಸಂಘ

ಹಾನಗಲ್ಲ ಮತ್ತು ರಾಜು ತಾಳಿಕೋಟೆಯುವರ ಶ್ರೀಗುರು ಖಾಸ್ಗತೇಶ್ವರ ನಾಟ್ಯಸಂಘ ತಾಳೀಕೋಟೆ ಬಿಟ್ಟರೆ, ಹೇಳಿಕೊಳ್ಳುವಂತಹ ಮತ್ತ್ಯಾವ ಮಂಡಳಿಗಳು ಹುಟ್ಟಿಕೊಳ್ಳಲಿಲ್ಲ.

ಮೇಲಿನ ಅಂಕಿಅಂಶಗಳನ್ನು ಗಮನಿಸಿದರೆ 1899 ರ ವರೆಗೆ ಕೇವಲ ನಾಲ್ಕು ಸಂಸ್ಥೆಗಳು ಹುಟ್ಟಿಕೊಂಡರೆ, 1900ರ ನಂತರ ಹುಟ್ಟಿಕೊಂಡ ಮಂಡಳಿಗಳ ಸಂಖ್ಯೆ ಏರುಗತಿಯಲ್ಲೇ ಸಾಗುತ್ತದೆ. ಅದರಲ್ಲೂ 1925 ರಿಂದ 1935 ರ ಅವಧಿಯಲ್ಲಿ 25 ಮಂಡಳಿಗಳು ಸ್ಥಾಪನೆಯಾದದ್ದು ಗಮನಾರ್ಹ. ನಂತರದ ದಿನಗಳಲ್ಲಿ ಇವುಗಳ ಸಂಖ್ಯೆ ಇಳಿಮುಖವಾದದ್ದು ಗಮನಿಸಬಹುದು. 1940 ರ ವರೆಗಿನ ಅವಧಿಯಲ್ಲಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯು ವೈಭವಯುತವಾಗಿ ಮೆರೆಯಿತು.

ಹೀಗೆ 40ರ ದಶಕದ ವರೆಗೆ ಉತ್ತರ ಕರ್ನಾಟಕ ವೃತ್ತಿ ರಂಗಭೂಮಿ ಉಚ್ಛ್ರಾಯ ಸ್ಥಿತಿಗೆ ಏರಲು ಹಲವಾರು ಕಾರಣಗಳಿವೆ ಅವುಗಳನ್ನು ಈ ರೀತಿಯಾಗಿ ಹೇಳಬಹುದು.

**1) ಮನರಂಜನೆಯ ಹೊಸ ಸಾಧನ :**

ಅದುವರೆಗೆ ದೊಡ್ಡಾಟ, ಬಯಲಾಟ, ಸಣ್ಣಾಟಗಳನ್ನು ಮನರಂಜನೆಗಾಗಿ ಅವಲಂಬಿಸಿದ್ದ ಜನ ಹೊಸತನದಿಂದ ಕೂಡಿದ ನಾಟಕಗಳು ಜನಕ್ಕೆ ಮನರಂಜನೆಯ ಹೊಸ ಹಾದಿಯನ್ನು ತೆರೆದವು. ಹೀಗಾಗಿ ಆಕರ್ಷಿತರಾದ ಜನ ನಾಟಕಗಳನ್ನು ನೋಡುವದರ ಮೂಲಕ ಅವುಗಳನ್ನು ಪ್ರೋತ್ಸಾಹಿಸತೊಡಗಿದರು. ಇದರಿಂದ ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ನಿರೀಕ್ಷೆಗೂ ಮೀರಿ ಬೆಳೆಯತೊಡಗಿತು.

**2) ಆಡಂಬರ, ವೈಭವಗಳ ಆಕರ್ಷಣೆ :**

ಅದುವರೆಗೆ ಅದೇ ಅಟ್ಟ, ಹಿಲಾಲ ದೀಪಗಳು ಹೊಸತನವಿಲ್ಲದ ಪ್ರದರ್ಶನಗಳಿಂದ ಏಕತಾನತೆಗೆ ಒಗ್ಗಿಕೊಂಡಿದ್ದ ಪ್ರೇಕ್ಷಕರು ವೃತ್ತಿರಂಗಭೂಮಿತಂದ ಆಕರ್ಷಕ ರಂಗಪರಿಕರ ಝಗಮಗಿಸುವ ವಿದ್ಯುತ್ ದೀಪಗಳು, ವೈವಿಧ್ಯಮಯ ದೃಶ್ಯಾವಳಿಗಳು, ಪ್ರದರ್ಶನ ವಿಧಾನ ಇವುಗಳಿಗೆ ಮಾರು ಹೋಗಿ ಹೆಚ್ಚು ಹೆಚ್ಚಾಗಿ ಪ್ರದರ್ಶನಗಳನ್ನು ಮುಗಿಬಿದ್ದು ನೋಡಿದರು.

**3) ಸಂಗೀತದ ಆಕರ್ಷಣೆ :**

ಆಗಿನ ದಿನಗಳಲ್ಲಿ ಶಾಸ್ತ್ರೀಯ ಸಂಗೀತವನ್ನು ಆಸ್ವಾದಿಸಬಲ್ಲ ತಜ್ಞ ಪ್ರೇಕ್ಷಕರಿರುತ್ತಿದ್ದರು. ಇವರೆಲ್ಲ ಸಾಮಾನ್ಯವಾಗಿ ಪ್ರತಿಷ್ಠಿತ ವರ್ಗದವರೇ ಆಗಿರುತ್ತಿದ್ದರು. ಇವರಿಗೆ ಸಂಗೀತ ಕಛೇರಿಗಳನ್ನು ಬಿಟ್ಟರೆ ಸಂಗೀತ ಕೇಳುವ ಬೇರೆ ಅವಕಾಶವಿರುತ್ತಿರಲಿಲ್ಲ. ಈ ಅವಕಾಶವನ್ನು ವೃತ್ತಿಮಂಡಳಿಗಳು ನೀಡಿದವು.

ಆಗಿನ ನಾಟಕಗಳಲ್ಲಿ ಸಂಗೀತಕ್ಕೆ ಹೆಚ್ಚಿನ ಪ್ರಾಧಾನ್ಯತೆಯಿತ್ತು. ಸಂಗೀತ ಬಲ್ಲವರೇ ಪಾತ್ರಧಾರಿಗಳಾಗಿರುತ್ತಿದ್ದರು. ಈ ಅವಧಿಯಲ್ಲಿ ಆರಂಭಗೊಂಡ ಎಲ್ಲಾ ಮಂಡಳಿಗಳೂ ಸಂಗೀತ ನಾಟಕ ಮಂಡಳಿಗಳಾಗಿರುತ್ತಿದ್ದವು. ಸಂಗೀತ ಬಲ್ಲ ಅನೇಕ ಪ್ರತಿಭಾವಂತರೂ ಉದರ ಪೋಷಣೆಗಾಗಿ ಮಂಡಳಿಗಳನ್ನು ಸೇರಿಕೊಂಡರು. ಪ್ರೇಕ್ಷಕರು ಸಂಗೀತವನ್ನು ಆಸ್ವಾದಿಸಿ "ಒನ್ಸ್‌ಮೋರ್" ಹೇಳಿ ಕಲಾವಿದರಿಂದ ಮತ್ತೆ ಮತ್ತೆ ಹಾಡಿಸುತ್ತಿದ್ದರು. ಹೀಗಾಗಿ ವೃತ್ತಿರಂಗಭೂಮಿ ರಬಸದಿಂದ ಮುನ್ನಡೆಯಲು ಸಂಗೀತವು ಕಾರಣವಾಯ್ತು.

**4) ನಾಟಕಗಳಲ್ಲಿ ವೈವಿಧ್ಯತೆ :**

ಆರಂಭದಲ್ಲಿ ಬರೀ ಪೌರಾಣಿಕ ನಾಟಕಗಳನ್ನು ಆಡುತ್ತಿದ್ದ ಮಂಡಳಿಗಳು ನಂತರದ ದಿನಗಳಲ್ಲಿ ಐತಿಹಾಸಿಕ ಸಮಾಜಿಕ ನಾಟಕಗಳನ್ನು ಪ್ರದರ್ಶಿಸಿದವು. ಕಾಲಕ್ಕೆ ತಕ್ಕಂತೆ ನಾಟಕಗಳು, ಅವುಗಳನ್ನು ಆಡುವ ರೀತಿಯಲ್ಲೂ ಗಮನಾರ್ಹ ಬದಲಾವಣೆಯಾದವು. ಈ ಬದಲಾವಣೆ ಕೂಡ ಪ್ರೇಕ್ಷಕರನ್ನು ರಂಗಭೂಮಿ ಕಡೆಗೆ ಸೆಳೆದವು.

**5) ಸಮಾಜ ಸಂಘ ಸಂಸ್ಥೆಗಳ ಪ್ರೋತ್ಸಾಹ :**

ಸಮಾಜವು ಕೂಡ ವೃತ್ತಿರಂಗಭೂಮಿಯನ್ನು ಗೌರವ ಆಧರಗಳಿಂದ ನೋಡುತ್ತಿದ್ದ ಕಾಲವದು. ಗ್ರಾಮದ ಶ್ರೀಮಂತರು, ಗೌಡರು ತಮ್ಮ ಮನೆಯಲ್ಲಿ ಮದುವೆಯಂತಹ ಕಾರ್ಯಕ್ರಮಗಳಿದ್ದರೆ ಪ್ರತಿಷ್ಠಿತ ಮಂಡಳಿಗಳನ್ನು ಕರೆಸಿ ನಾಟಕ ಆಡಿಸಿ ಗೌರವಿಸುತ್ತಿದ್ದರು. ಸಭೆ ಸಮಾರಂಭಗಳನ್ನು ಏರ್ಪಡಿಸಿ ಬಂಗಾರದ ಪದಕ ನೀಡಿ ಗೌರವಿಸುತ್ತಿದ್ದರು. ಶಿರಹಟ್ಟಿ ವೆಂಕೋಬರಾಯರ ಕೋಟಿನ ಕಾಲರಿನಲ್ಲಿ ನೇತಾಡುತ್ತಿದ್ದ ಪದಕಗಳ ಮೊತ್ತವೇ ಆಗಿನ ಕಾಲದಲ್ಲಿ 2000 ರೂಗಳಷ್ಟಿತ್ತು. ಗುಲಬರ್ಗಾ ಜಿಲ್ಲೆಯ ಆಂದೋಲಾ ಊರಿನ ಶ್ರೀಮಂತ ಗುರುಲಿಂಗಗೌಡ ಪಾಟೀಲರು ನಾಟಕಗಳ ಅಭಿಮಾನಿ. ಆ ಭಾಗದಲ್ಲಿ ಬರುವ ಕಂಪನಿಗಳನ್ನು ತಮ್ಮೂರಿಗೆ ಆಹ್ವಾನಿಸಿ ನಾಟಕ ಪ್ರದರ್ಶನ ಏರ್ಪಡಿಸಿ ಕಲಾವಿದರನ್ನು ಸತ್ಕರಿಸಿ ಕಳುಹಿಸುತ್ತಿದ್ದರು. ಒಮ್ಮೆ ಹಂದಿಗನೂರ ಸಿದ್ರಾಮಪ್ಪನವರನ್ನು ಕರೆಸಿ "ರಾಜಾ ಹರಿಶ್ಚಂದ್ರ" ನಾಟಕ ನೋಡಿ ತುಂಬ ಮೆಚ್ಚಿಕೊಂಡು ಹಂದಿಗನೂರ ಸಿದ್ರಾಮಪ್ಪನವರಿಗೆ 75 ತೊಲಿಯ ಬೆಳ್ಳಿಯ ಕಿರೀಟ ಮಾಡಿಸಿ ತೊಡಿಸಿ ಕೈಬೆರಳಿಗೆ 1 ತೊಲಿ ಚಿನ್ನದ ಉಂಗುರ ತೊಡಿಸಿ ಸಂಭ್ರಮಿಸಿದ್ದಾರೆ.

ಶಿವಶರಣರ ಪಾತ್ರಧಾರಿಗಳನ್ನಂತೂ ಜನ ತುಂಬ ಆದರದಿಂದ ನೋಡುತ್ತಿದ್ದರು. ಕೈಮುಗಿಯುತ್ತಿದ್ದರು. ಮೈಸೂರು ಮಹಾರಾಜರಂತೂ ಉತ್ತರ ಕರ್ನಾಟಕದ ವೃತ್ತಿ ಮಂಡಳಿಗಳನ್ನು ಆಹ್ವಾನಿಸಿ ನಾಟಕ ನೋಡಿ ಬಹುಮಾನ ನೀಡುತ್ತಿದ್ದರು. ಅಷ್ಟೇ ಅಲ್ಲ ಸಾಂಗ್ಲಿ, ಮಿರಜ, ಜಮಖಂಡಿ,

ಮುಧೋಳ, ಈಚಲಕರಂಜಿ ಸಂಸ್ಥಾನಿಕರು ಮಂಡಳಿಗಳನ್ನು ಆಹ್ವಾನಿಸಿ ಧನಸಹಾಯ ನೀಡಿದ್ದುಂಟು. ಸಾಂಗ್ಲಿ ಸಂಸ್ಥಾನಿಕರಂತೂ ಶಿರಹಟ್ಟಿ ಕಂಪನಿಯನ್ನು "ಆಮ್ಚ ಶಿರಹಟ್ಟಿಕಂಪನಿ" ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದರು.

ಒಂದೊಂದು ಊರಿನಲ್ಲಿ ಗಳಿಕೆ ಕಡಿಮೆಯಾಗಿ, ಇಲ್ಲ ಥಿಯೇಟರಿಗೆ ಆಕಸ್ಮಿಕ ಬೆಂಕಿ ತಗುಲಿ ಆರ್ಥಿಕವಾಗಿ ಕುಸಿತ ಕಂಡಾಗ ಸಾರ್ವಜನಿಕರೇ ವಂತಿಗೆ ನೀಡಿ ಮಂಡಳಿಯನ್ನು ಬೇರೆ ಊರಿಗೆ ಹೋಗಲು ಅನುವು ಮಾಡಿಕೊಟ್ಟ ಉದಾಹರಣೆಗಳು ಹಲವಾರಿವೆ. ಈ ರೀತಿಯಾಗಿ ಸಮಾಜದ ಗೌರವಾದರ. ಪ್ರೋತ್ಸಾಹ ಕೂಡ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಏಳ್ಗೆಗೆ ಕಾರಣವಾಯ್ತು.

**6) ರಂಗಕಲಾಸಕ್ತಿಯ ಶ್ರೀಮಂತರು :**

ರಂಗ ಕಲೆಯಲ್ಲಿ ಆಸಕ್ತಿ ಹೊಂದಿದ್ದ ಅನೇಕ ಶ್ರೀಮಂತರು ಹವ್ಯಾಸಕ್ಕಾಗಿ ಮೊದಲು ರಂಗಕಲೆಯನ್ನು ಆರಂಭಿಸಿ ನಂತರ ಅದನ್ನು ಪ್ರತಿಷ್ಠೆಯನ್ನಾಗಿ ಸ್ವೀಕರಿಸಿ ತಮ್ಮ ಮನೆಯ ಸಂಪತ್ತನ್ನು ನೀರಿನಂತೆ ಹರಿಸಿ, ವೃತ್ತಿರಂಗಭೂಮಿಯನ್ನು ಅದ್ದೂರಿಯಾಗಿ ಪರಿವರ್ತಿಸಿದ್ದು ಅವಿಸ್ಮರಣೀಯ. ಅವರೆಂದರೆ, ಶಿವಮೂರ್ತಿಸ್ವಾಮಿ ಕಣಬರಗಿಮಠ, ಏರಾಸಿ ಭರಮಪ್ಪ, ಸುಳ್ಯದ ದೇಸಾಯರು.

**7) ವೃತ್ತಿ ಮಂಡಳಿಗಳ ಸ್ಪರ್ಧೆ :**

ದೊಡ್ಡ ದೊಡ್ಡ ನಗರಗಳಲ್ಲಿ ಮತ್ತು ದೊಡ್ಡ ದೊಡ್ಡ ಜಾತ್ರೆ ನಡೆಯುವ ಊರುಗಳಲ್ಲಿ ಒಂದಕ್ಕಿಂತ ಹೆಚ್ಚು ಮಂಡಳಿಗಳು ಬೀಡು ಬಿಡುತ್ತಿದ್ದವು. ಜನಪ್ರೀಯತೆ, ಆದಾಯದಲ್ಲಿ ತಾವು ಮೊದಲಿಗರಾಗಬೇಕೆಂದು ಪ್ರತಿಮಂಡಳಿಯ ಬಯಕೆಯಾಗಿರುತ್ತಿತ್ತು. ಹೀಗಾಗಿ ಅವುಗಳ ಮಧ್ಯೆ ಸ್ಪರ್ಧೆ ಏರ್ಪಡುತ್ತಿತ್ತು. ಆದ್ದರಿಂದ ಮಾಲೀಕರು ತಮ್ಮ ಮಂಡಳಿಯ ಹಿರಿಮೆಗಾಗಿ ಕಥೆ, ಸಂಭಾಷಣೆ, ಸಂಗೀತ ವೈಭವ ಅದ್ದೂರಿತನಕ್ಕೆ ಆದ್ಯತೆ ನೀಡುತ್ತಿದ್ದರು. ಶ್ರೇಷ್ಠಪ್ರದರ್ಶನದಿಂದ ವೃತ್ತಿರಂಗಭೂಮಿ ಬೆಳೆಯಲು ಸಾಧ್ಯವಾಯಿತು.

**8) ಶ್ರೇಷ್ಠ ಅಭಿನಯದ ನಟ ನಟಿಯರು :**

ಪ್ರಬುದ್ಧ ಅಭಿನಯದ ವಿಷಯಕ್ಕೆ ಬಂದಾಗ ಉಲ್ಲೇಖಿಸಬೇಕಾದ ಹೆಸರು ಗರುಡ ಸದಾಶಿವರಾಯರು. ಅಭಿನಯ ಕಲೆಯ ವಿವಿಧ ಪ್ರಭೇದಗಳನ್ನು ರೂಪಿಸಿ, ಅಭಿನಯ ಕಲೆಯನ್ನು

ತರ್ಕಬದ್ಧವಾಗಿ ವಿಶ್ಲೇಷಿಸಿದವರು ಗರುಡ ಸದಾಶಿವರಾಯರು. ಇದರಿಂದ ನಟನಟಿಯರೇ ನಾಟಕದ ಪ್ರಮುಖ ಆಕರ್ಷಣೆಯಾದದ್ದುಂಟು. ಸ್ವತಃ ಗರುಡರೇ ಶ್ರೇಷ್ಠ ಅಭಿನಯ ನೀಡುವದರೊಂದಿಗೆ ಅಂಥದೊಂದು ಪರಂಪರೆಯನ್ನೇ ಸೃಷ್ಟಿಸಿದರು. ಅದ್ಭುತ ಅಭಿನಯ ಸಾಮರ್ಥ್ಯದಿಂದ ಪಿಭಿನ್ನ ಪಾತ್ರಗಳಿಗೆ ಜೀವತುಂಬಿ ಪ್ರೇಕ್ಷಕರ ಮನಸೂರೆಗೊಂಡ ಕೆಲವೇ ಕಲಾವಿದರಲ್ಲಿ ಹಂದಿಗನೂರ ಸಿದ್ರಾಮಪ್ಪ ಅಗ್ರಮಾನ್ಯರು. ಬಾಣಾಸುರ, ಕರ್ಣ, ಶ್ರೀ ಕೃಷ್ಣ, ಭಿಷ್ಮ, ವೇಮನ, ಹರಿಶ್ಚಂದ್ರ ಹೀಗೆ ರಾಜನಿಂದ ಹಿಡಿದು ಹುಚ್ಚನವರೆಗೆ, ವಿಷಯಲಂಪಟತೆಯಿಂದ ತಪಸ್ವಿಯವರೆಗೆ ಪಾತ್ರಯಾವುದೇ ಇರಲಿ ಪಾತ್ರಕ್ಕೆ ತಕ್ಕ ಅಭಿನಯ ಸಿದ್ರಾಮಪ್ಪನವರದು. ಇವರ ಪಾತ್ರಗಳನ್ನು ನೋಡಲೆಂದೇ ಜನರು ದೂರದೂರದ ಊರುಗಳಿಂದ ಬರುತ್ತಿದ್ದರಂತೆ ಇವರಂತೆಯೇ ಇನ್ನೂ ಅನೇಕ ಅಥಿರಥ ಮಹಾರಥರು ತಮ್ಮ ಕಲಾಪ್ರತಿಭೆಯಿಂದ ರಂಗಭೂಮಿಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಒಬ್ಬೊಬ್ಬ ನಟ ನಟಿಯರೂ ಒಂದೊಂದು ಪಾತ್ರಕ್ಕಾಗಿ ಹುಟ್ಟಿಬಂದವರಂತೆ ತಮ್ಮ ಕಲಾಕೌಶಲವನ್ನು ಮರೆದಿದ್ದಾರೆ. ಭೀಮನ ಪಾತ್ರಕ್ಕೆ ಮಾನವಿ ಅದೃಶ್ಯಪ್ಪ, ಅರ್ಜುನ ಪಾತ್ರಕ್ಕೆ ಹಳ್ಳಿಗುಡಿ ಸದಾಶಿವಪ್ಪ, ಶಕುನಿಯಾಗಿ ಲಾಠಿಗುಂಡಪ್ಪ ಇವರಿದ್ದರೆ ಮಾತ್ರ ನಾಟಕಕ್ಕೆ ಕಳೆ. ಬೆಳ್ಳೂರು ನಂಜುಂಡಯ್ಯನವರನ್ನು ಕಲಿಯುಗದ ಆಂಜನೆಯನೆಂದೇ ಜನ ಗುರ್ತಿಸಿದರು. ಅಶ್ವತ್ಥಾಮನ ಪಾತ್ರಕ್ಕೆ ಎಲಿವಾಳ ಸಿದ್ಧಯ್ಯನವರೇ ಬೇಕು. ಹಾಸ್ಯಕ್ಕೆ ಬಾಬುರಾವ ದೇಸಾಯಿ ಹೆಸರಾಗಿದ್ದರು.

ಇನ್ನು ನಟಿಯರ ವಿಷಯಕ್ಕೆ ಬಂದರೆ ದ್ರೌಪದಿಯಾಗಿ ಬಸರೂರ ಸುಶೀಲಾ, ಕಿತ್ತೂರ ಚೆನ್ನಮ್ಮಳಾಗಿ ಗದಗ ರತ್ನಾ, ಚಿತ್ರಾಂಗಧೆಯಾಗಿ ವಜೀರಬಾಯಿ ಗದಗ, ಸುಭದ್ರಮ್ಮ ಮನಸೂರು ಇವರಿದ್ದರೆ ರಂಗಮಂದಿರ ಭರಪೂರ. ಇಂಥ ನಟರ ಜನಪ್ರೀಯತೆಯನ್ನು ಗುರುತಿಸಿದ ನಾಟಕಕಾರರು ನಟರ ಶರೀರ, ಶಾರೀರ ಅಭಿನಯ ಗುರುತಿಸಿ ಅವರನ್ನೇ ದೃಷ್ಟಿಯಲ್ಲಿಟ್ಟುಕೊಂಡು ನಾಟಕ ರಚಿಸಿದ್ದುಂಟು. ಕಂದಗಲ್ಲ ಹನುಮಂತರಾಯರು ಹಂದಿಗನೂರ ಸಿದ್ರಾಮಪ್ಪನವರಿಗಾಗಿ 'ಅಕ್ಷಯಾಂಬರ" ಅದೃಶ್ಯಪ್ಪ ಮಾಮನಿಯವರಿಗಾಗಿ "ಬಾಣಸಿಗ ಭೀಮ" "ಕುರುಕ್ಷೇತ್ರ" ನಾಟಕಗಳನ್ನು ಬರೆದರು. ಕೋಲಶಾಂತಪ್ಪನವರು ಹಲಗೇರಿ ಜಟ್ಟಪ್ಪನವರಿಗಾಗಿ "ಹಳ್ಳಿಹುಡುಗಿ" ನಾಟಕ ಬರೆದರು.

ಇದರಿಂದ ಕಂಪನಿ ಮಾಲೀಕರು, ಒಂದು ನಾಟಕವನ್ನು ಪ್ರದರ್ಶಿಸಿದಾಗ ಅದರಲ್ಲಿ ಪ್ರಸಿದ್ಧಿ ಪಡೆದ ನಟ-ನಟಿಯರನ್ನು ಕರೆಸಿ ಆಡಿಸುವ ಪರಂಪರೆಗೆ ನಾಂದಿ ಹಾಡಿದರು. ಎಲ್ಲಾಕಡೆ ನಿರ್ದಿಷ್ಟ ಪಾತ್ರಕ್ಕೆ ಹೆಸರು ಮಾಡಿದ ನಟ ನಟಿ ಬರುತ್ತಾರೆಂದರೆ, ಸುತ್ತಲಿನ ಊರುಗಳಿಂದ ಪ್ರೇಕ್ಷಕರು ಬಂದು

ನಾಟಕಗಳನ್ನು ಮುಗಿಬಿದ್ದು ನೋಡುತ್ತಿದ್ದರಂತೆ ಇದರಿಂದ ಗಲ್ಲಾಪೆಟ್ಟಿಗೆ ಭರಪೂರ ಆಗುತ್ತಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಹೀಗಾಗಿ ಶ್ರೇಷ್ಠ ನಟ ನಟಿಯರಿಂದಲೂ ವೃತ್ತಿ ರಂಗಭೂಮಿ ತ್ವರಿತಗತಿಯಲ್ಲಿ ಬೆಳೆದು ಬಂತು.

ಈ ಎಲ್ಲ ಕಾರಣಗಳಿಂದ 1900 ರಿಂದ 1940 ರ ವರೆಗಿನ ಅವಧಿಯಲ್ಲಿ ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿ ಕೀರ್ತಿಶಿಖರ ಉತ್ತುಂಗಕ್ಕೇರಲು ಸಾಧ್ಯವಾಯ್ತು. ಇದರೊಂದಿಗೆ ಕಾಲಘಟ್ಟವನ್ನು ಗಮನಿಸಬೇಕು. 1900 ರ ವರೆಗೆ ಹೆಚ್ಚು ಬದಲಾವಣೆಗಳಿಲ್ಲದ ಆಟ ಬಯಲಾಟಗಳು ಏಕತನತೆಮೂಡಿಸಿದ್ದರೆ ಈ ಹಂತದಲ್ಲಿ ಹುಟ್ಟಿಕೊಂಡ ಒಂದೆರಡು ಕಂಪನಿಗಳೂ ಕೂಡಾ ಇವುಗಳಿಗಿಂತ ಹೆಚ್ಚೇನು ಭಿನ್ನವಾಗಿರಲಿಲ್ಲ. ಈ ಹಂತದಲ್ಲಿ ಕಾಲಿಟ್ಟ ಹೊಸತನದ ವೃತ್ತಿಮಂಡಳಿಗಳು ಜನರನ್ನು ಸೆಳೆಯಲು ಸಾಧ್ಯವಾಯಿತು. 40 ರ ದಶಕದ ನಂತರ ರಂಗ ಭೂಮಿ ಇಳಿಮುಖ ಕಾಣತೊಡಗಿತು. ಇದಕ್ಕೆ ಹಲವಾರು ಕಾರಣಗಳಿದ್ದರೂ ಬಹುಮುಖ್ಯ ಕಾರಣ ರಂಜನೆಯ ಮತ್ತೊಂದು ಸಾಧನವಾಗಿ ಸಿನೆಮಾಗಳ ಪ್ರವೇಶ.

### ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಇಳಿಜಾರಿನ ಹಾದಿಯಲ್ಲಿ :

40ರ ದಶಕದವರೆಗೆ ಏರುಮುಖದಲ್ಲಿದ್ದ ವೃತ್ತಿರಂಗಭೂಮಿ ಇಳಿಮುಖವಾಗಲು ಪ್ರಮುಖವಾಗಿ ಎರಡು ಕಾರಣಗಳನ್ನಾಗಿ ಗುರುತಿಸಲಾಗುತ್ತದೆ.

1. ಸಿನೇಮಾಗಳ ಪ್ರವೇಶ 2. ಹವ್ಯಾಸಿ ರಂಗಭೂಮಿ

40ರ ದಶಕದಲ್ಲಿ ಚಲನಚಿತ್ರಗಳು ಬೀಸಿದ ಭಾರಿ ಬಿರುಗಾಳಿಗೆ ರಂಗಭೂಮಿ ತತ್ತರಿಸಿ ಹೋಯಿತು. ರಂಗಭೂಮಿಯಲ್ಲಿ ಅಳವಡಿಕೆಗೆ ಅಸಾಧ್ಯವಾದ ದೃಶ್ಯಗಳನ್ನು, ಚಮತ್ಕಾರಗಳನ್ನು ಚಲನಚಿತ್ರಗಳಲ್ಲಿ ತೋರಿಸಲು ಸಾದ್ಯವಾದಂತೆಲ್ಲ, ರಂಗಭೂಮಿಗಿಂತ ಚಲನಚಿತ್ರಗಳು ಭಾರೀ ಜನಾಕರ್ಷಕವಾದವು. ಇದರಿಂದಾಗಿ ರಂಗಭೂಮಿಯ ಹೆಸರಾಂತ ಕಲಾವಿದರು ಚಲನಚಿತ್ರಗಳ ಕಡೆಗೆ ಮುಖ ಮಾಡತೊಡಗಿದರು. ಉತ್ತರ ಕರ್ನಾಟಕದಲ್ಲಿ ಬಸವರಾಜ ಮನಸೂರ, ಹಂದಿಗನೂರ ಸಿದ್ರಾಮಪ್ಪ, ಗಂಗೂಬಾಯಿ ಗುಳೇದಗುಡ್ಡ, ಎಲಿವಾಳ ಸಿದ್ದಯ್ಯಸ್ವಾಮಿಯವರು ಚಲನಚಿತ್ರಗಳಲ್ಲಿ ಅಭಿನಯಿಸಿ ಬಂದರು. ಹೀಗಾಗಿ ಕಲಾವಿದರು ಚಿತ್ರರಂಗದತ್ತ ಆಕರ್ಷಿತರಾಗಿ ವೃತ್ತಿರಂಗಭೂಮಿಯನ್ನು ಚಿತ್ರರಂಗಕ್ಕೆ ಹೋಗಲು ಮೆಟ್ಟಿಲಾಗಿ ಮಾಡಿಕೊಂಡರು.

ಅದೂ ಅಲ್ಲದೆ ಕರ್ನಾಟಕದಾದ್ಯಂತ ಇದ್ದ ರಂಗಮಂದಿರಗಳೆಲ್ಲಾ ಚಿತ್ರಮಂದಿರಗಳಾಗಿ ಬದಲಾಗಿ ಬಿಟ್ಟವು. ನಾಟಕಗಳ ಪ್ರದರ್ಶನಕ್ಕೆ ಸೂಕ್ತ ಸ್ಥಳಗಳ ಅಭಾವವಾಯಿತು. ರಂಗಮಂದಿರ ನಿರ್ಮಿಸುವುದು ವಿಪರೀತ ವೆಚ್ಚದಾಯಕವಾಯಿತು. ಇದರಿಂದಾಗಿ ವೃತ್ತಿ ಮಂಡಳಿಗಳು ತಮ್ಮ ಉಳಿವಿಗಾಗಿ ಗ್ರಾಮೀಣ

ಭಾಗವನ್ನೇ ನೆಚ್ಚಬೇಕಾಯಿತಾದರೂ ನಂತರದ ದಿನಗಳಲ್ಲಿ ಟೂರಿಂಗ್ ಟಾಕೀಸುಗಳು ಅಲ್ಲಿಗೂ ಕಾಲಿಟ್ಟವು. ಹೀಗೆ ಎಲ್ಲೆಂದರಲ್ಲಿ ದಾಂಗುಡಿಯಿಟ್ಟ ಚಿತ್ರರಂಗ ವೃತ್ತಿ ರಂಗಭೂಮಿಗೆ ಚಂಡಮಾರುತವಾಗಿ ಪರಿಣಮಿಸಿತು. ನಾಟಕ ನೋಡುವವರ ಸಂಖ್ಯೆ ಕ್ಷೀಣಿಸಿತು.

ಆದಾಗ್ಯೂ ನಾಟಕಗಳಿಂದಲೇ ಜೀವನ ನಿರ್ವಹಿಸಬೇಕಾದ ಅನಿವಾರ್ಯತೆ ಇದ್ದವರು ಚಲನಚಿತ್ರಗಳ ರಂಜನೀಯ ಅಂಶಗಳತ್ತ ಗಮನ ಹರಿಸಿ, ವೃತ್ತಿರಂಗಭೂಮಿಯ ರೀತಿ ರಿವಾಜುಗಳನ್ನು ಧಿಕ್ಕರಿಸಿ ಕ್ಯಾಬರೆಡಾನ್ಸ ಹಿಟ್ ಡೈಲಾಗ್ಸ್ ಉದ್ರೇಕಕಾರಿ ಸಂಗೀತ ಅಳವಡಿಸಿದರೂ ಸಿನೇಮಾದ ಆಕರ್ಷಣೆ ನಾಟಕಗಳಿಗೆ ಬರಲಿಲ್ಲ. ಇದರೊಂದಿಗೆ ವೃತ್ತಿರಂಗಭೂಮಿಯನ್ನು ಗೇಲಿಮಾಡಲೇನೋ ಎನ್ನವಂತೆ ಹವ್ಯಾಸಿರಂಗಭೂಮಿಯೊಂದು ಹುಟ್ಟಿಕೊಂಡಿತು. ಇವರು ಮಾಡಿದ ಮೊದಲ ಕೆಲಸವೆಂದರೆ ವೃತ್ತಿರಂಗದ, ದೋಷ, ದೌರ್ಬಲ್ಯ, ಅವಾಸ್ತವ ಅಭಾಸಗಳಿಗೆ ಭೂತಗನ್ನಡಿ ಹಿಡಿದು ಟೀಕಿಸತೊಡಗಿದರು. ಕೈಲಾಸಂ 'ನಮ್ಕಂಪ್ನಿ' ಶ್ರೀರಂಗರ 'ಪೂರ್ವರಂಗ' 'ಕತ್ತಲೆಬೆಳಕು' 'ಮೈರಾವಣ' ಶಿವರಾಮ ಕಾರಂತರ 'ಸುಧಾರಿತ ಸೌಭದ್ರ' ನಾಟಕಗಳು ವೃತ್ತಿರಂಗವನ್ನು ಟೀಕೆಮಾಡಲೆಂದೇ ರಚಿತವಾದವು. ಇದರಿಂದಾಗಿ ಸುಶೀಕ್ಷಿತರು ವೃತ್ತಿರಂಗಭೂಮಿಯ ಬಗ್ಗೆ ಉದಾಸೀನ ತಾಳುವಂತಾಯಿತು. ವೃತ್ತಿರಂಗದ ಬಗ್ಗೆ ಇದ್ದ ಗೌರವ ನಶಿಸಿ ಅದೊಂದು ಅಸ್ಪೃಶ್ಯ ಕ್ಷೇತ್ರವಾಗಿ ಪರಿಣಮಿಸಿತು.

ಸಿನೇಮಾ ಮತ್ತು ಹವ್ಯಾಸಿ ರಂಗಭೂಮಿ ನಡೆಸಿದ ಏಕಕಾಲದ ದಾಳಿಗೆ ಸಿಕ್ಕು ವೃತ್ತಿರಂಗಭೂಮಿ ದುರ್ಬಲಗೊಂಡಿತಾದರೂ ಇದರ ಉಳಿವಿಗಾಗಿ ಹಲವರು ಮಾಡಿದ ಪ್ರಯತ್ನಗಳನ್ನು ಪ್ರಶಂಸಿಸಲೇ ಬೇಕು.

### 1. ಲಿ. ಪಂಚಾಕ್ಷರಿ ಗವಾಯಿಗಳು (ಗದಗ) :

ಸಂಗೀತ ವಿದ್ಯಾಲಯ ಕಟ್ಟಲು ಹೋಗಿ ನಾಟಕಮಂಡಳಿ ಕಟ್ಟಿದವರು ಗಾನಯೋಗಿ ಪಂಚಾಕ್ಷರಿ ಗವಾಯಿಗಳು. ಅದಾದದ್ದು ಹೀಗೆ 1937–38ರಲ್ಲಿ ಮೈಸೂರು ಮಹಾರಾಜರಿಂದ ಧನಸಹಾಯ ಪಡೆದು ಸಂಗೀತ ವಿದ್ಯಾಲಯ ಸ್ಥಾಪಿಸುವ ಉದ್ದೇಶ ಗವಾಯಿಗಳದು. ಅದಕ್ಕಾಗಿ ತಮ್ಮ 60–70 ಶಿಷ್ಯರೊಂದಿಗೆ ಮಹರಾಜ ಕೃಷ್ಣರಾಜ ಒಡೆಯರನ್ನು ಕಾಣಲು ಮೈಸೂರಿಗೆ ಹೊರಟರು. ದಾರಿಯಲ್ಲಿ ಊರೂರಿಗೆ ಪುರಾಣ ಪ್ರವಚನ ನೀಡುತ್ತಾ ನಡೆದರು. ಬೆಂಗಳೂರು ತಲುಪಲು ತಿಂಗಳುಗಟ್ಟಲೇ ಸಮಯ ಹಿಡಿಯಿತು. ಬೆಂಗಳೂರಿನ ಛತ್ರವೊಂದರಲ್ಲಿ ಬಿಡಾರ ಹೂಡಿ ಮಹಾರಾಜರ ಆಮಂತ್ರಣಕ್ಕಾಗಿ ಕಾದರೂ 5–6 ತಿಂಗಳಾದರೂ ಕರೆಬರಲಿಲ್ಲ. ಕೊನೆಗೆ ಬಂದದ್ದು ಮಹಾರಾಜರ ಸಾವಿನ ಸುದ್ಧಿ. ಸಹಾಯ ಪಡೆಯಲು ಹೋಗಿ ಗವಾಯಿಗಳು ಸಾಲದ ಭಾರಹೊತ್ತು ಗದುಗಿನ ಹತ್ತಿರದ ಹೊಂಬಳಕ್ಕೆ ಬಂದರು.

ಸಾಲ ತೀರಿಸುವ ಚಿಂತೆ ದಿನ ದಿನಕ್ಕೆ ಬೆಳೆಯಿತು. ಗುರುಗಳ ಚಿಂತೆಗೆ ಮರುಗಿದ ಪುಟ್ಟರಾಜರಿಗೆ ನಾಟಕಗಳನ್ನಾಡಿ ಹಣ ಕೂಡಿಸಬಹುದೆಂಬ ಲೆಕ್ಕಾಚಾರವಿತ್ತು. ಕೊನೆಗೆ ಗುರುಗಳನ್ನು ಒಪ್ಪಿಸಿ 1940ರಲ್ಲಿ "ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ ನಾಟಕ ಮಂಡಳಿ ಗದಗ" ಈ ಸಂಘ ಹುಟ್ಟಿಕೊಂಡಿತು. ರಂಗಪರಿಕರ, ವೈಭವ ಆಡಂಬರಗಳಿಲ್ಲದೇ ಪುಟ್ಟರಾಜರ ರಚನೆ 'ಸಿದ್ಧರಾಮ ಸಂವಾದ' ನಾಟಕ, ಅದೇ ಪುಟ್ಟರಾಜರ ಹಾರ್ಮೋನಿಯಂ, ಸ್ವತಃ ಪಂಚಾಕ್ಷರಿ ಗವಾಯಿಗಳ ತಬಲಾವಾದದೊಂದಿಗೆ ಹೊಂಬಳದಲ್ಲಿ ಹತ್ತು ಪ್ರಯೋಗ ನಡೆಯಿತು. ಸಂಗೀತಶಾಲೆಯ ವಿದ್ಯಾರ್ಥಿಗಳೇ ಕಲಾವಿದರು. ನಂತರ ನರಗುಂದಕ್ಕೆ ಮಂಡಳಿಯ ಪಯಣ ಗವಾಯಿಗಳ ಬಗ್ಗೆ ತುಂಬ ಗೌರವ ಆದರ ಗಳಿದ್ದರಿಂದ ನರಗುಂದದಲ್ಲಿ ಒಂದು ದಿನದ ಗಳಿಕೆ 1800 ರೂಗಳಾಗಿತ್ತು.

ವಿಶೇಷವೆಂದರೆ ರಂಗಭೂಮಿಯ ಇತಿಹಾಸದಲ್ಲಿ ಮರೆಯಲಾಗದ ಚಿತ್ತರಗಿ ಗಂಗಾಧರ ಶಾಸ್ತ್ರಿಗಳು ಈ ಮಂಡಳಿಯ ಕೊಡುಗೆ. ಮಂಡಳಿ ಆರ್ಥಿಕ ತೊಂದರೆಗೆ ಸಿಲುಕಿದಾಗ ಶಾಸ್ತ್ರಿಗಳು ಊರಿನಲ್ಲಿದ್ದ ತಮ್ಮ ಜಮೀನು ಮಾರಿ ಮಂಡಳಿಯ ರಂಗಪರಿಗಕರಗಳ ಸಾಲ ಮುಟ್ಟಿಸುತ್ತಾರೆ. ಮಂಡಳಿ ಅನೇಕ ಕಡೆ ಪ್ರಯೋಗ ನಡೆಸುತ್ತದೆ. 1942ರಲ್ಲಿ ಪಂಚಾಕ್ಷರಿ ಗವಾಯಿಗಳು ಪುಟ್ಟರಾಜರಿಗೆ ಮಂಡಳಿಯ ಜವಾಬ್ದಾರಿ ವಹಿಸಿ ತಾವು ಪುಣ್ಯಾಶ್ರಮದಲ್ಲಿ ಉಳಿಯುತ್ತಾರೆ. 1944ರಲ್ಲಿ ಪಂಚಾಕ್ಷರಿ ಗವಾಯಿಗಳು ನಿಧನರಾದಾಗ ಮಂಡಳಿಯ ಹೆಸರಿನಲ್ಲಿ ಅವರ ಹೆಸರು ಸೇರಿಕೊಂಡು ಈಗ "ಶ್ರೀ ಕುಮಾರೇಶ್ವರ ಕೃಪಾಪೋಷಿತ ಲಿ. ಪಂಚಾಕ್ಷರಿ ಗವಾಯಿಗಳ ನಾಟಕ ಮಂಡಳಿ ಗದಗ" ಹೆಸರಿನಲ್ಲಿ ಇಂದಿಗೂ ಅಸ್ತಿತ್ವದಲ್ಲಿದೆ. ಗದುಗಿನಲ್ಲಿ ಇವರ ಹೇಮರೆಡ್ಡಿ ಮಲ್ಲಮ್ಮ ನಾಟಕ ಅದೆಷ್ಟು ಜನಾನುರಾಗಿಯಾಗಿತ್ತೆಂದರೆ ಸತತವಾಗಿ 399 ಪ್ರಯೋಗ ಕಂಡಿತು. ದೂರದೂರದ ಊರುಗಳಿಂದ ಜನಬಂದು ನಾಟಕ ನೋಡಿದರು. ಭಕ್ತಿಪ್ರಧಾನ, ನೀತಿಪ್ರಧಾನ ನಾಟಕಗಳನ್ನಾಡುತ್ತ ಇಂದಿಗೂ ಸ್ತ್ರೀಯರಿಗೆ ಪ್ರವೇಶ ಕೊಡದೆ ತನ್ನ ಉನ್ನತ ಸ್ಥಾನಮಾನಗಳನ್ನು ಉಳಿಸಿಕೊಂಡು ಬಂದುದು ಈ ಮಂಡಳಿಯ ವಿಶೇಷತೆಯಾಗಿದೆ. ಲಿ. ಪಂಚಾಕ್ಷರಿ ಗವಾಯಿಗಳ ಮಂಡಳಿ ಎಂದರೆ ಇಂದಿಗೂ ಜನರಲ್ಲಿ ಅದೇ ಗೌರವಾದರಗಳಿವೆ.

### 2. ಕಲಾವೈಭವ ನಾಟ್ಯ ಸಂಘ (ಏಣಗಿ ಬಾಳಪ್ಪ) :

ಸುಧೀರ್ಘ 45 ವರ್ಷಗಳ ಬಣ್ಣದ ಬದುಕಿನ ಇತಿಹಾಸ ಏಣಗಿ ಬಾಳಪ್ಪನವರದು ಚಿತ್ರರಂಗದ ದಾಂಗುಡಿ ಶುರುವಾಗುವ ಹೊತ್ತಿನಲ್ಲಿ ಬಣ್ಣದ ಬದುಕು ಆರಂಭಿಸಿದ (1938) ಬಾಳಪ್ಪನವರು 1941ರಲ್ಲಿ ಪಾಲುಗಾರಿಕೆಯಲ್ಲಿ 1942ರಲ್ಲಿ ಸ್ವತಂತ್ರವಾಗಿ ಮಂಡಳಿ ಕಟ್ಟಿದವರು. ಕಿತ್ತೂರ ಚೆನ್ನಮ್ಮ, ಕಿತ್ತೂರ ರುದ್ರಮ್ಮ, ಸಿಂಧೂರ ಲಕ್ಷ್ಮಣ ಇವರ ಮಂಡಳಿಯ ಜನಪ್ರೀಯ ನಾಟಕಗಳಾಗಿದ್ದವು. ಮಂಡಳಿ ಚೆನ್ನಾಗಿ ಆದಾಯ

ಗಳಿಸುತ್ತಿದ್ದಾಗಲೇ ಬ್ರಿಟಿಷ ಸರಕಾರ ರಾಷ್ಟ್ರಾಭಿಮಾನವನ್ನು ಕೆರಳಿಸುತ್ತಿದ್ದ ಕೆಲ ಕಂಪನಿಗಳ ಪರವಾಣಿಗೆಯನ್ನು ರದ್ದು ಪಡಿಸಿತು. ಅದರಲ್ಲಿ ಏಣಗಿ ಬಾಳಪ್ಪನವರದೂ ಒಂದಾಗಿತ್ತು.

1947ರಲ್ಲಿ ಪುಃನ ಮಂಡಳಿಯನ್ನು ಸಂಘಟಿಸಿದ ಬಾಳಪ್ಪನವರು ಅದನ್ನು 1983ರವರೆಗೂ ಚಿತ್ರರಂಗದ ಸ್ಪರ್ಧೆಯನ್ನು ಎದುರಿಸಿ ಯಶಸ್ವಿಯಾಗಿ ನಡೆಸಿಕೊಂಡು ಬಂದದ್ದು ಸಾಮಾನ್ಯ ವಿಷಯವೇನಲ್ಲ. ಎಂಥ ಕಷ್ಟದ ಸ್ಥಿತಿಯಲ್ಲೂ ಅಶ್ಲೀಲ, ದ್ವಂದ್ವ ಸಂಭಾಷಣೆಗೆ ಶರಣಾಗಲಿಲ್ಲ.

ಪ್ರಾರಂಭದ ಹಲವಾರು ವರ್ಷಗಳ ವರೆಗೆ ನಾಯಕಿಯ ಪಾತ್ರದಲ್ಲಿ ಅಭನಯಿಸುತ್ತಿದ್ದ ಬಾಳಪ್ಪನವರು, ನಂತರದಲ್ಲಿ ಪುರುಷ ಪಾತ್ರಗಳನ್ನು ನಿರ್ವಹಿಸಿ, ಎರಡೂ ಪಾತ್ರಗಳಲ್ಲೂ ಸೈ ಎನಿಸಿಕೊಂಡವರು. ಹೊಸತನಕ್ಕಾಗಿ ಸದಾ ತುಡಿಯುತ್ತಿದ್ದ ಬಾಳಪ್ಪ, ಕವಿ ಮಹಾಂತೇಶ ಶಾಸ್ತ್ರೀಗಳಿಂದ 'ಕುಂಕುಮ' ವೆಂಬ ಒಂದೇ ದೃಶ್ಯದ ನಾಟಕ ಬರೆಯಿಸಿ ಯಶಸ್ವಿಯಾಗಿ ಪ್ರಯೋಗಿಸಿದರು. ಶಿಸ್ತು, ಶ್ರದ್ಧೆ, ವ್ಯವಹಾರಿಕ ಜಾಣ್ಮೆಯಿಂದ ನಾಲ್ಕು ದಶಕಕ್ಕೂ ಮಿಕ್ಕಿ ಕಂಪನಿ ನಡೆಸಿದ ಬಾಳಪ್ಪನವರಿಗೆ ಪ್ರತಿಷ್ಠಿತ ಗುಬ್ಬಿವೀರಣ್ಣ ಪ್ರಶಸ್ತಿಯೂ ಸೇರಿದಂತೆ ಅನೇಕ ಪ್ರಶಸ್ತಿ ಸನ್ಮಾನ ಗೌರವ ಡಾಕ್ಟರೇಟ್ ಅರಸಿ ಬಂದದ್ದು ಸಹಜವೆ. 96ರ ಹರೆಯದ ಬಾಳಪ್ಪನವರೂ ವೃತ್ತಿರಂಗಭೂಮಿಯ ಬಗ್ಗೆ ಇಂದಿಗೂ ಅದೇ ಉತ್ಸಾಹದಿಂದ ಮಾತಾಡಬಲ್ಲರು. ಪಂಚಯ್ಯಸ್ವಾಮಿ ಮಳ್ಳಿಗೇರಿ, ಗುರುಸಿದ್ದಯ್ಯ ಸುತಗಟ್ಟಿ, ಸದಾಶಿವ ಬ್ರಹ್ಮಾವರ, ಶಾಂತೇಶ ಡಂಬಳ, ಅಮ್ಮಣಗಿ ಈರಯ್ಯ, ಅದೃಷ್ಯಪ್ಪ ಮಾನ್ವಿ, ಲಕ್ಷ್ಮಣ ರಾವಪುರಿ ಈ ಮಂಡಳಿಯ ನಟರಾಗಿದ್ದರೆ, ನಟಿಯರಲ್ಲಿ ಲಕ್ಷ್ಮಿಬಾಯಿ ಬಳ್ಳಾರಿ, ಪಂಡಿರಿಬಾಯಿ, ಸತ್ಯ ಭಾಮ, ಸುಭದ್ರಮ್ಮ ಮನಸೂರು, ರತ್ನಬ್ರಹ್ಮಾವರ, ಸುಮಿತ್ರಮ್ಮ ಕುಂದಾಪೂರ ಹೆಸರಾಂತ ಕಲಾವಿದರು.

### 3. ಶ್ರೀ ಕುಮಾರ ವಿಜಯ ನಾಟ್ಯಸಂಘ ಚಿತ್ತರಗಿ :

1942ರಲ್ಲಿ ತಮ್ಮ ಸಹೋದರ ಮುಪ್ಪಯ್ಯ ಅವರೊಂದಿಗೆ ಚಿತ್ತರಗಿ ಗಂಗಾಧರ ಶಾಸ್ತ್ರಿಗಳು ಈ ಮಂಡಳಿಯನ್ನು ಪ್ರಾರಂಭಿಸಿದರು. ಅದ್ಭುತ ಕಲಾವಿದರೂ. ಚತುರ ಸಂಘಟನಾಕಾರರೂ ಹೇಗಾದರೂ ಮಾಡಿ ಹಿಡಿದ ಕೆಲಸ ಸಾಧಿಸುವವರೂ ಆಗಿದ್ದ ಗಂಗಾಧರ ಶಾಸ್ತ್ರಿಗಳು ಈ ಮಂಡಳಿಯನ್ನು ಕಟ್ಟಿ ಬೆಳೆಸಿ ಕರ್ನಾಟಕದ ಮನೆಮಾತಾಗಿಸಿದ ರೀತಿ ವಿಸ್ಮಯ ಗೊಳಿಸುವಂತದ್ದು. ಶಾಸ್ತ್ರಿಗಳ ನಿಧನದ ನಂತರ ಅನೇಕ ವರ್ಷ ಈ ಮಂಡಳಿ "ಚಿತ್ತರಗಿ ಕಂಪನಿ" ಎಂಬ ಆಕರ್ಷಣೆಯಲ್ಲೇ ಪ್ರದರ್ಶನಗಳನ್ನು ನಡೆಸಿತು. ಇದರ ಪೋಷಣೆಗಾಗಿಯೇ ಮಂಡಳಿ ಕಟ್ಟಿದ ಶಾಸ್ತ್ರಿಗಳು 1942 ರಿಂದ 1950 ರ ವರೆಗೆ ಮಂಡಳಿಯ ರಂಗಪರಿಕರ ಮುಂತಾದವುಗಳಿಗಾಗಿ ಮಂಡಳಿಯ ಆದಾಯವನ್ನು ಉಪಯೋಗಿಸಿದರು. 1950 ರಿಂದ 70ರವರೆಗೆ ಸಂಘ ಜಯಭೇರಿ ಬಾರಿಸಿದ ಕಾಲ. 80ರ ದಶಕದಲ್ಲಿ ಕಂಪನಿ ನಾಲ್ಕು ಶಾಖೆಗಳನ್ನು

ತೆರೆಯಿತೆಂದರೆ ಶಾಸ್ತ್ರಿಗಳ ಸಂಘಟನಾ ಚಾತುರ್ಯವನ್ನು ಊಹಿಸಬಹುದು. ಈ ಮಂಡಳಿಯ ಏಳಿಗೆಯಲ್ಲಿ ನಾಟಕಕಾರ ಸಾಳುಂಕೆಯವರ ಕೊಡುಗೆಯನ್ನು ಕಡೆಗಣಿಸುವಂತಿಲ್ಲ. ಏಕೆಂದರೆ ಚಿತ್ರರಂಗ, ಜೊತೆಗೆ ಸಹಮಂಡಳಿಗಳೊಂದಿಗೆ ಸ್ಪರ್ಧೆಯ ದಿನಗಳಲ್ಲಿ ನಟನೆಗಿಂತ ಸಾಹಿತ್ಯಕ್ಕೆ ಮಹತ್ವಸಿಗತೊಡಗಿದ ದಿನಗಳಲ್ಲಿ ಸುಂದರ ಸಾಹಿತ್ಯ ಮತ್ತೆ ಮತ್ತೆ ಕೇಳಬೇಕೆನಿಸುವ ಸಂಭಾಷಣೆಗಳಿಂದ ಕೂಡಿದ ನಾಟಕಗಳನ್ನು ಸಾಳುಂಕೆಯವರು ರಚಿಸಿದರು. ದೇವರಿಗೆ ನೆನಪಿಲ್ಲ, ಬದುಕು ಬಂಗಾರವಾಯಿತು, ಕಣ್ಣಿದ್ದರೂ ಬುದ್ಧಿಬೇಕು, ಭಾಗ್ಯಬಂತು ಬದ್ಧಿಯೋಯ್ತು, ತಾಳಿಯ ತಕರಾರು, ಕಾಲುಕೆದರಿದ ಹೆಣ್ಣು, ನೀನೂ ಸಾಹುಕಾರನಾಗು, ಇವು ಸಾಳುಂಕೆಯವರು ರಚಿಸಿದ ಇಂದಿಗೂ ಮತ್ತೆ ನೋಡಬೇಕೆನಿಸುವ ನಾಟಕಗಳು. ಸಮಾಜದ ಜ್ವಲಂತ ಸಮಸ್ಯ, ನಿರೂಪಣೆಯ ಸೊಗಸು, ಆಡುಮಾತಿನ ಆಕರ್ಷಣೆಗಳಿಂದ ಈ ಮಂಡಳಿಯಲ್ಲಿ ಪ್ರದರ್ಶನಗೊಂಡು ಹಣ, ಕೀರ್ತಿ, ನಾಟಕ ಮಂಡಳಿಗಳ ಬಗ್ಗೆ ಸದ್ಭಾವನೆ ಎಲ್ಲವನ್ನೂ ಶಾಸ್ತ್ರೀಗಳಿಗೆ ತಂದುಕೊಟ್ಟವು. ಸಾಳುಂಕೆಯವರ ನಾಟಕಗಳೇ ಈ ಮಂಡಳಿಯ ಪ್ರಮುಖ ಆಕರ್ಷಣೆ ಎಂದರೂ ತಪ್ಪಲ್ಲ. ಶಾಸ್ತ್ರಿಗಳ ನಿಧನದ ನಂತರ ಅವರ ಮಕ್ಕಳು ಮ್ಯಾನೇಜರುಗಳ ಮುಖಾಂತರ 68 ವರ್ಷಗಳ ನಂತರವೂ ಮಂಡಳಿಯನ್ನು ನಡೆಸುತ್ತಿದ್ದಾರೆ. ಮಂಡಳಿಗಳಲ್ಲಿ ಕೈಕೊಟ್ಟುಹೋಗುವ ಕಲಾವಿದರೂ ಮುಂತಾದ ಸಮಸ್ಯೆಗಳ ನಡುವೆಯೂ ಮಂಡಳಿ ಮ್ಯಾನೇಜರ ಶಂಕರ ನಂತರ ಅವರ ಪತ್ನಿ ರೇಣಮ್ಮ ಚಿತ್ತರಗಿ ಇನ್ನೂ ನಡೆಸಿಕೊಂಡು ಬರುತ್ತಿದ್ದಾರೆ. ಸುದೀರ್ಘ ಅವಧಿಯವರೆಗೆ ಸದಭಿರುಚಿಯ ನಾಟಕಗಳನ್ನು ಪ್ರದರ್ಶಿಸಿ ನಾಟಕಗಳ ಕಡೆಗೆ ಜನ ನಿರ್ಲಕ್ಷಿಸುತ್ತಿದ್ದ ದಿನಗಳಲ್ಲಿ ಪ್ರೇಕ್ಷರನ್ನು ಪುನಃ ವೃತ್ತಿರಂಗದತ್ತ ಸೆಳೆದು ವೃತ್ತಿರಂಗಭೂಮಿಯನ್ನು ಉಳಿಸಿ ಬೆಳೆಸಿದ ಈ ಮಂಡಳಿಯ ಕೊಡುಗೆ ಗಮನಾರ್ಹವಾದುದು.

### 4. ಶ್ರೀ ಮಹೇಶ ನಾಟ್ಯ ಸಂಘ ನ್ಯಾಮತಿ :

ಹೈದ್ರಾಬಾದ ಕರ್ನಾಟಕದಲ್ಲಿ ರಜಾಕಾರರ ಹಾವಳಿ ವಿಪರೀತವಾಗಿದ್ದ ಕಾಲದಲ್ಲಿ ಈ ಮಂಡಳಿಯು ತನ್ನ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ ತೋರಿದ ದಿಟ್ಟತನಕ್ಕಾಗಿ ಈ ಮಂಡಳಿ ಮಹತ್ವದ್ದಾಗಿದೆ.

1942ರಲ್ಲಿ ಸುಪ್ರಸಿದ್ದ ಕಲಾವಿದ ನ್ಯಾಮತಿ ಶಾಂತಪ್ಪನವರು ದಾಂಡೇಲಿಯ ಗಣ್ಯ ವ್ಯಾಪಾರಿ, ಕಲಾಭಿಮಾನಿಗಳಾಗಿದ್ದ ಹರಿಭಾವು ಪೈಯವರ ಆರ್ಥಿಕ ಸಹಾಯ ಪಡೆದು ಈ ಮಂಡಳಿಯನ್ನು ಸ್ಥಾಪಿಸಿದರು. ಎಲಿವಾಳ ಸಿದ್ದಯ್ಯಸ್ವಾಮಿ, ವಿಠ್ಠಲಸಾ ಖಟವಟೆ, ಅಮೀನಗಡ ಲಾಡಸಾಬ, ಹಲಗೇರಿ ಭೀಮರಾವ್, ಸುತಗಟ್ಟಿ ಗುರುಸಿದ್ದಯ್ಯ ಡಿ. ದುರ್ಗಾದಾಸ್, ವಜೀರಾ ಗದಗ ಅವರಂಥ ಪ್ರತಿಭಾನ್ವಿತ

ಕಲಾವಿದರೊಂದಿಗೆ ನರಗುಂದದಲ್ಲಿ 'ಚಿತ್ರಾಂಗದಾ' ನಾಟಕ ಆಡುವದರೊಂದಿಗೆ ಪ್ರಾರಂಭದಲ್ಲಿಯೇ ಯಶಸ್ಸಿನ ಹಾದಿ ಹಿಡಿಯಿತು. 1950ರ ದಶಕ ಪೂರ್ತಿ ಹೈದರಾಬಾದ್ ಕರ್ನಾಟಕದಲ್ಲಿ ಬೀಡುಬಿಟ್ಟ ಮಂಡಳಿ ಅನೇಕ ಕಷ್ಟನಷ್ಟಗಳನ್ನು ಅನುಭವಿಸಿತು. ಭಾಷಾವಾರು ಪ್ರಾಂತಗಳ ವಿಂಗಡಣೆ ಕಾಲದಲ್ಲಿ ಬೀದರ, ಗುಲಬರ್ಗಾ, ಜಿಲ್ಲೆಗಳಲ್ಲಿ ರಜಾಕಾರರ ಹಾವಳಿ ವಿಪರೀತವಾಗಿ ಬಾಳುವೆ ಮಾಡುವುದೇ ಕಷ್ಟವಾಗಿ ಹಿಂದುಗಳು ಊರುಬಿಟ್ಟು ಹೋಗುವ ಪರಿಸ್ಥಿತಿ ಅಲ್ಲಿ ಇಂಥದ್ದರಲ್ಲಿ ನ್ಯಾಮತಿ ಶಾಂತಪ್ಪನವರು ಕನ್ನಡ ನಾಟಕಗಳನ್ನು ಅದೇ ಭಾಗದಲ್ಲಿ ಆಡಿದ ಧೈರ್ಯಮೆಚ್ಚಬೇಕು. 'ಶ್ರೀ ಶರಣ ಬಸವೇಶ್ವರ' 'ಜಗಜ್ಯೋತಿ ಬಸವೇಶ್ವರ' ದಂಥ ಕನ್ನಡ ನಾಡು, ನುಡಿ, ಸಂಸ್ಕೃತಿಗಳನ್ನು ಬಿಂಬಿಸುವ ನಾಟಕಗಳನ್ನಾಡಿದರು. ಕೋಮುಸೌಹಾರ್ದ ಸಾರುವ 'ಟಿಪ್ಪು ಸುಲ್ತಾನ' ವನ್ನು ಆಡಿದ್ದು ಸಮಯೋಚಿತವಾಗಿತ್ತು.

ರಜಾಕಾರರ ಹಾವಳಿಗೆ ಹೆದರದೆ ಕಷ್ಟನಷ್ಟಗಳನ್ನು ಅನುಭವಿಸಿ ಧೈರ್ಯದಿಂದ ನಿಂತುಕೊಂಡ ಮಂಡಳಿಯ ಕೀರ್ತಿ ಎಲ್ಲೆಡೆಗೂ ಹರಡಿತು. ಇದರಿಂದ ಪ್ರಭಾವಿತರಾದ ಗುಲಬರ್ಗಾ ಜಿಲ್ಲೆಯ ಹಿರಿಯ ರಾಜಕಾರಣಿ (ಮಾಜಿ ಮುಖ್ಯಮಂತ್ರಿ) ದಿ. ವಿರೇಂದ್ರ ಪಾಟೀಲರು ತಮ್ಮ ಸ್ವಂತ ಊರಾದ ಚಿಂಚೋಳಿಗೆ ಬರಮಾಡಿಕೊಂಡು 'ಬಸವೇಶ್ವರ' ನಾಟಕ ನೋಡಿ ಸನ್ಮಾನಿಸಿದರು. 1967ರಲ್ಲಿ ಬಾಲ್ಕಿ ಕ್ಯಾಂಪಿನಲ್ಲಿದ್ದಾಗ ಅಲ್ಲಿಗೆ ಆಕಸ್ಮಿಕವಾಗಿ ಆಗಮಿಸಿದ್ದ ಅಂದಿನ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು ಅಲ್ಲಿ ಯಶಸ್ವಿಯಾಗಿ ಪ್ರದರ್ಶನಗೊಳ್ಳುತ್ತಿದ್ದ 'ಬೆಳ್ಳಿ ಬಂಗಾರ' ಮತ್ತು 'ಮನೆಯ ಮಂಗಳಗೌರಿ' ಎಂಬ ಎರಡೂ ನಾಟಕ ವೀಕ್ಷಿಸಿ ಮೆಚ್ಚಿಕೊಂಡರು.

1962ರಲ್ಲಿ ಧಾರವಾಡ, ಮುಂತಾದ ಕಡೆ ಸಂಚರಿಸಿದ ಮಂಡಳಿ 1977ರಲ್ಲಿ ಮಹಾರಾಷ್ಟ್ರದಲ್ಲಿ ಸಂಚರಿಸಿ ಭಕ್ತಿ ಪ್ರಧಾನ ನಾಟಕಗಳನ್ನಾಡಿದ್ದರಿಂದ ಜನ, ಭಾಷೆಯ ಭೇದ ಮರೆತು ನಾಟಕಗಳನ್ನು ನೋಡಿದರು. 1977ರಲ್ಲಿ ನ್ಯಾಮತಿ ಶಾಂತಪ್ಪನವರಿಗೂ ಪತ್ನಿ ಕಮಲವ್ವನಿಗೂ ಕೌಟುಂಬಿಕ ಕಲಹವುಂಟಾಗಿ ಕಮಲವ್ವ ಪ್ರತ್ಯೇಕ ಮಂಡಳಿ ರಚಿಸಿದಾಗ ಶಾಂತಪ್ಪನವರ ಮಂಡಳಿ ಸೋಲಿನ ಹಾದಿ ಹಿಡಿದು ಮುಚ್ಚಿಕೊಂಡಿತು.

### 5. ಶ್ರೀ ಲಲಿತ ಕಲಾ ನಾಟ್ಯ ಸಂಘ, ಕುಕನೂರ :

ತನ್ನ ಪ್ರಬುದ್ಧ ಅಭಿನಯ ಅಪ್ರತಿಮ ಸೌಂದರ್ಯಗಳಿಂದ ರಂಗಭೂಮಿಯಲ್ಲಿ ಹತ್ತು ವರ್ಷ ಸೇವೆಸಲ್ಲಿಸಿ ಹೆಸರುಗಳಿಸಿದ್ದ ಕುಕನೂರಿನ ರೆಹಮಾನವ್ವ ಕಲ್ಮನಿ, 1950ರಲ್ಲಿ ಕುಕನೂರ ಜನರ ಬೆಂಬಲದೊಂದಿಗೆ ಈ ಮಂಡಳಿಯನ್ನು ಕಟ್ಟಿದಳು. ಕುಕನೂರಿನಲ್ಲಿ ಒಂದು ತಿಂಗಳ ಕ್ಯಾಂಪಿನ ನಂತರ

ಕೊಪ್ಪಳ, ಸಿಂಧನೂರ, ಗಂಗಾವತಿಗಳಲ್ಲಿ ಈ ಮಂಡಳಿ ಪೌರಾಣಿಕ ನಾಟಕಗಳನ್ನು ಪ್ರದರ್ಶಿಸಿ ಒಳ್ಳೆಯ ಹೆಸರು ಸಂಪಾದನೆಗಳನ್ನು ಪಡೆಯಿತು. ಅದೇ ಹೊತ್ತಿನಲ್ಲಿ ಆಗಿನ ಪ್ರಸಿದ್ಧ ಮಂಡಳಿಗಳು ನಿರಾಕರಿಸಿದ್ದ 'ತಾಯಿ ಕರಳು' ಎಂಬ ನಾಟಕದ ಹಸ್ತಪ್ರತಿಯನ್ನು ಹಿಡಿದುಕೊಂಡು ನಾಟಕಕಾರ ದುತ್ತರಗಿಯವರು ರೆಹಮಾನವ್ವಳ ಹತ್ತಿರ ಬರುತ್ತಾರೆ. ಕಥೆ ಸಂಭಾಷಣೆ ಕೇಳಿದ ರೆಹಮಾನವ್ವ ನಾಟಕ ಆಡಲು ಒಪ್ಪಿಕೊಳ್ಳುತ್ತಾಳೆ.

ನಂತರ ಈ ನಾಟಕ ಅದೆಷ್ಟು ಜನಪ್ರಿಯವಾಯಿತೆಂದರೆ, ಪ್ರತಿಕ್ಯಾಂಪಿನಲ್ಲೂ ನೂರಾರು ಪ್ರಯೋಗ ಕಾಣತೊಡಗಿತು. ರಹೆಮಾನವ್ವಳ ತಾಯಿಯ ಪಾತ್ರದ ಮನೋಜ್ಞ ಅಭಿನಯ, ಸಂಭಾಷಣೆ ಶೈಲಿಯಿಂದಲೇ ಜನ ಪ್ರಭಾವಿತರಾಗಿದ್ದರು. ರಹೆಮಾನವ್ವಳೇ ಮಂಡಳಿಯ ಆಸ್ತಿಯಾಗಿದ್ದಳು.

ಕರ್ನಾಟಕದ ಅನೇಕ ಕಡೆ ಸಂಚರಿಸಿ ಮಂಡಳಿಯನ್ನು ಉತ್ತಮಸ್ಥಿತಿಗೆ ಏರಿಸಿದಳು. 1966ರ ವರೆಗೆ ಹಿಂದೆ ನೋಡದೇ ಮುನ್ನುಗ್ಗಿದ ರಹೆಮಾನವ್ವ ಆಂದ್ರದ ಅದೋನಿ ಸಮೀಪ ಬದನ್ಯಾಳದಲ್ಲಿ ಕ್ಯಾಂಪ ಮಾಡಿದಾಗ ವಿದ್ಯುತ್ ತಂತಿತಗುಲಿ ಮಂಡಳಿಯ ಬಹುಪಾಲು ಬೆಲೆಬಾಳುವ ಆಸ್ತಿ ಸುಟ್ಟು ಹೋಯಿತು. ಮತ್ತೆ ಮಂಡಳಿ ಕಟ್ಟುವ ಹಟಕ್ಕೆ ಬಿದ್ದ ರಹೆಮಾನವ್ವ ತನ್ನ ಎರಡು ಕಾರು, ಮೈಮೇಲಿನ ಆಭರಣ ಎಲ್ಲವನ್ನು ಮಾರಿ, ಎಲ್ಲವನ್ನು ಜೋಡಿಸಿಕೊಂಡು ಸಿಂಧನೂರಿನಲ್ಲಿ ಮತ್ತೆ ಮಂಡಳಿಯನ್ನು ಆರಂಭಿಸಿದಳು. ಆದರೆ ಇದೇ ಹೊತ್ತಿನಲ್ಲಿ ತನ್ನ ಇಬ್ಬರು ಹೆಣ್ಣು ಮಕ್ಕಳು ಮತ್ತು ಒಬ್ಬ ಮಗ ವಾಹನ ಅಪಘಾತದಲ್ಲಿ ತೀರಿಹೋದರು. ಇದರಿಂದ ತೀವ್ರ ಆಘಾತಗೊಂಡ ರಹೆಮಾನವ್ವಳಿಗೆ ಅಪಘಾತದ ಸ್ಥಳಕ್ಕೆ ಹೋಗಲು ಕಾಸಿರಲಿಲ್ಲ. ಕೊನೆಗೇ ಅಡುಗೆ ಪಾತ್ರೆಗಳನ್ನು ಮಾರಿಕೊಂಡು ಹೋಗುತ್ತಾಳೆ. ಇಂಥ ಒಂದು ಸಾಹಸಮಾಡಿದ ರಹೆಮಾನವ್ವ ಒಬ್ಬ ಮುಸ್ಲಿಂ ಮಹಿಳೆ ಎಂಬುದನ್ನು ಗಮನಿಸಬೇಕು. ಮುಂದೆ ಮಂಡಳಿಯನ್ನು ಉಳಿಸಿಕೊಳ್ಳಲು ಎಷ್ಟೇ ಪ್ರಯತ್ನಿಸಿದರೂ ಆರ್ಥಿಕ ತೊಂದರೆಗಳಿಂದ ಅದು ಸಾಧ್ಯವಾಗಲೇ ಇಲ್ಲ.

### 6. ಶ್ರೀ ಹುಚ್ಚೇಶ್ವರ ನಾಟ್ಯಸಂಘ, ಕಮತಗಿ :

1961ರಲ್ಲಿ ಹುಟ್ಟಿ ಸುಮಾರು ನಾಲ್ಕು ದಶಕಕ್ಕೂ ಹೆಚ್ಚುಕಾಲ ಕರ್ನಾಟಕದ ಉದ್ದಗಲಕ್ಕೂ ಮೆರೆದು ಹೋದ ಈ ಮಂಡಳಿಯ ಆರಂಭವೇ ತುಂಬ ಮೋಜಿನದಾಗಿದೆ.

ಈಗಿನ ಬಾಗಲಕೋಟೆ ಜಿಲ್ಲೆಯ ಕಮತಗಿ ಎಂಬ ಗ್ರಾಮದಲ್ಲಿ ಕಿರಾಣಿ ಅಂಗಡಿಯೊಂದನ್ನು ಇಟ್ಟುಕೊಂಡಿದ್ದ ಯುವಕನೊಬ್ಬನಿಗೆ ಆಕಸ್ಮಾತಾಗಿ ಆ ಊರಿನ ಗೌಡನೊಂದಿಗೆ ಮನಸ್ತಾಪ ಬಂದು, ಅವನಿಂದ ಅವಮಾನಿತಗೊಳ್ಳುತ್ತಾನೆ. ಗೌಡನಬಗ್ಗೆ ತನ್ನೊಳಗಿನ ಸಿಟ್ಟು, ಆಕ್ರೋಶವನ್ನು ಹೊರಹಾಕಲು ಆ

ಯುವಕ ನಾಟಕವೊಂದನ್ನು ಬರೆಯುತ್ತಾನೆ. ಅದಕ್ಕೆ 'ಲಂಚಸಾಮ್ರಾಜ್ಯ' ಎಂಬ ಹೆಸರಿಟ್ಟು ಯುವಕರ ಗುಂಪೊಂದನ್ನು ಕಟ್ಟಿಕೊಂಡು ಅದೇ ಊರಿನಲ್ಲಿ ನಾಟಕ ಪ್ರದರ್ಶಿಸುತ್ತಾನೆ. ಊರಿನ ಜನ ನಾಟಕವನ್ನು ಮೆಚ್ಚಿಕೊಂಡು ಬೆನ್ನುತಟ್ಟುತ್ತಾರೆ. ಆ ಯುವಕ ಬೇರಾರು ಅಲ್ಲ, ವೃತ್ತಿರಂಗಭೂಮಿಯ ಇತಿಹಾಸದಲ್ಲಿ ತನ್ನ ಛಾಪು ಮೂಡಿಸಿದ 'ಶ್ರೀ ಹುಚ್ಚೇಶ್ವರ ನಾಟ್ಯ ಸಂಘದ' ಸಂಸ್ಥಾಪಕ ಬಿ. ಆರ್. ಅರಿಶಿನಗೋಡಿಯವರು. ಹೀಗೆ ಸಣ್ಣ ಹಳ್ಳಿಯಲ್ಲಿ ಹವ್ಯಾಸಿ ಮಂಡಳಿಯಾಗಿ ಹುಟ್ಟಿಕೊಂಡ ಈ ಮಂಡಳಿ, ಬೃಹತ್ತಾಗಿ ಬೆಳೆದು ಒಂದಲ್ಲ ಮೂರು ಶಾಖೆಗಳಾಗಿ ಬೆಳೆದು ಕರ್ನಾಟಕದ ಮನೆಮಾತಾಗಲು ಅರಿಶಿಣ ಗೊಡಿಯವರ ವ್ಯವಹಾರ ಕುಶಲತೆ, ಶಿಸ್ತು, ಶ್ರದ್ಧೆಗಳೇ ಕಾರಣ. ಕಮತಗಿಯಿಂದ ಬಾಗಲಕೋಟೆ, ಹುನಗುಂದ, ಇಲಕಲ್, ಗಳೇದಗುಡ್ಡ, ವಿಜಾಪುರಗಳಲ್ಲಿ ಸಂಚರಿಸಿದ ಮಂಡಳಿ ಎರಡು ವರ್ಷಗಳಲ್ಲಿ ಆಡಿದ್ದು 'ಲಂಚಸಾಮ್ರಾಜ್ಯ' ಮತ್ತು 'ಹೆಣ್ಣುಮಗಳು' ಎಂಬ ಎರಡೇ ನಾಟಕಗಳನ್ನು. ಇದರ ಆದಾಯದಲ್ಲಿ ಕುರ್ಚಿ, ರಂಗ ಪರಿಕರಗಳನ್ನೆಲ್ಲ ಸ್ವಂತದ್ದಾಗಿಸಿತು. ನಂತರ ಬಿ. ಆರ್. ಅರಿಶಿನಗೂಡಿಯವರು ಹಿಂದೆ ನೋಡಲೇ ಇಲ್ಲ. ಹೊಸ ಹೊಸ ನಾಟಕಗಳನ್ನು ಬರೆಯುತ್ತ, ಬರೆಸುತ್ತ, ಆಡಿಸುತ್ತ, ಮುಂದೆ ಮುಂದೆ ನಡೆದರು.

1967ರಲ್ಲಿ "ಶ್ರೀ ಹೊಳೆಹುಚ್ಚೇಶ್ವರ ನಾಟ್ಯ ಸಂಘ" ಎಂಬ ಮತ್ತೊಂದು ಶಾಖೆ ಸಹೋದರ ಆರ್. ಆರ್. ಅರಿಶಿನಗುಡಿಯವರ ನೇತೃತ್ವದಲ್ಲಿ ರಂಗಸೇವೆಗಿಳಿಯಿತು. ಮುಂದೆ ಹತ್ತು ವರ್ಷಗಳ ನಂತರ ಅಂದರೆ 1977ರಲ್ಲಿ ಮಂಡಳಿಯ ಮತ್ತೊಂದು ಶಾಖೆ ಹುಟ್ಟಿಕೊಂಡಿತು. ಈ ಮಂಡಳಿಯಲ್ಲಿ ಆಡಿದ 'ಗರೀಬಿ ಹಟಾವೊ' ನಾಟಕ ತುಂಬ ಜನಪ್ರಿಯಗೊಂಡು ಹೇರಳ ಆದಾಯ ತಂದುಕೊಟ್ಟಿತು. ಇದೇ ಆದಾಯದಲ್ಲಿ 1981–82ರಲ್ಲಿ ಮಂಡಳಿಯ ಮೂರನೇಯ ಶಾಖೆಯನ್ನು ಮೂಡಗೆರೆಯಲ್ಲಿ ಆರಂಭಿಸಿದರು. ಮೂಲ ಮಂಡಳಿ ಹದಿನೈದು ಜನ ಸದಸ್ಯರಿಂದ ಆರಂಭವಾಗಿ ಮಂಡಳಿ ಮೂರು ಶಾಖೆಗಳಾದಾಗ 150 ಜನ ಸದಸ್ಯರನ್ನು ಹೊಂದಿತ್ತು. ನಟರಲ್ಲಿ ನಾಯಕ ನಟ ಇತರ ನಟರೆಂಬ ಭೇದಭಾವ ಇರಲಿಲ್ಲ. ಎಲ್ಲಾ ಕಲಾವಿದರಿಂದ ಎಲ್ಲಾ ರೀತಿಯ ಪಾತ್ರಗಳನ್ನು ಮಾಡಿಸಲಾಗುತ್ತಿತ್ತು. ಎಲ್ಲರಿಗೂ ಸಮಾನ ವೇತನವನ್ನು ನಿಗದಿತ ಸಮಯಕ್ಕೆ ಮುಟ್ಟಿಸಲಾಗುತ್ತಿತ್ತು. ಉತ್ತಮ ನಟ, ನಾಟಕಕಾರ, ಒಳ್ಳೇಯ ಸಂಘಟಕರಾದ ಬಿ. ಆರ್. ಅರಿಶಿನಗೂಡಿಯವರಿಗೆ ಮಂಡಳಿಯನ್ನು ಬಹುಕಾಲ ಜಾಳಿಸಲು ಸಾಧ್ಯವಾಯಿತು. 1981ರಲ್ಲಿ ಬಿ. ಆರ್. ಅರಿಶಿನಗೂಡಿ ಹಾಗೂ ಆರ್. ಆರ್. ಅರಿಶಿನ ಗೂಡಿಯವರು ಬೇರೆಯಾದರು. ಇಬ್ಬರಿಗೂ ತಲಾ ಎರಡೆರಡು ಶಾಖೆಗಳು ಬಂದವು. ಆರ್. ಆರ್. ಅರಿಶಿನಗೂಡಿಯವರು ವಯಸ್ಸಿನ ಕಾರಣದಿಂದ ಎರಡೂ ಮಂಡಳಿಗಳ ಮೇಲೆ ನಿಯಂತ್ರಣ ಸಾಧಿಸಲಾಗದೆ 1883–84ರಲ್ಲಿ ಒಂದು ಶಾಖೆಯನ್ನು ಮುಚ್ಚಿದರು. ನಂತರ ಅನಾರೋಗ್ಯ ಕಾರಣಕ್ಕಾಗಿ 1997ರಲ್ಲಿ ಇನ್ನೊಂದನ್ನು ಮುಚ್ಚಿ ತಮ್ಮ ಊರಾದ ಬೆನಕಟ್ಟಿಗೆ ನಡೆದರು.

## 7. ಶ್ರೀ ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ :

ಕುಸ್ತಿ ಆಡುತ್ತ, ಭಾರ ಎತ್ತುತ್ತ (ಒಜ್ಜೆ) ತಿರುಗುತ್ತಿದ್ದ ಬಸಣ್ಣ (ಎನ್. ಬಸವರಾಜ) ಸಹಜವಾಗಿ ಹಟದ ಮನುಷ್ಯನಾಗಿದ್ದ. ಕುಂದಾಪುರ ಸುಮಿತ್ರಂ ಅವರ ಮಂಡಳಿಯಲ್ಲಿ ದುಡಿದ ಅನುಭವದೊಂದಿಗೆ 1963 ನವಂಬರ್ 17 ರಂದು ಗುಡಗೇರಿಯಲ್ಲಿ ಮಂಡಳಿ ಆರಂಭಿಸಿದ ಬಸಣ್ಣ ಆರಂಭದ ಕೆಲ ವರ್ಷಗಳಲ್ಲಿ ಪಡಬಾರದ ಕಷ್ಟಪಟ್ಟರು. 1970ರ ಹೊತ್ತಿಗೆ ಬಸಣ್ಣನವರ ಪರಿಶ್ರಮ ಮತ್ತು ಪ್ರಯೋಗಶೀಲತೆಯಿಂದ "ಶ್ರೀ ಸಂಗಮೇಶ್ವರ ನಾಟ್ಯ ಸಂಘವು" ಕರ್ನಾಟಕದಲ್ಲಿ ಹೇಳಿಕೊಳ್ಳುವಂತಹ ಒಂದು ಮಂಡಳಿಯಾಗಿ ಬೆಳೆಯಿತು. ಈ ಮಂಡಳಿ ಹುಬ್ಬಳ್ಳಿಯ ಶ್ರೀ ಗಜಾನನ ತಿಯೇಟರಿನಲ್ಲಿ ಪ್ರಾರಂಭಿಸಿದ ಕೆ. ಎನ್. ಸಾಳುಂಕೆ ರಚಿಸಿದ 'ವರನೋಡಿ ಹೆಣ್ಣು ಕೊಡು' ನಾಟಕ 455 ಪ್ರಯೋಗಗಳೊಂದಿಗೆ ಜನದಟ್ಟಣೆಯಲ್ಲಿ ಪ್ರದರ್ಶನವಾಯಿತು. ಇದರಿಂದ ಉತ್ತೇಜಿತರಾದ ಬಸವರಾಜರು 1975ರ ಬನಶಂಕರಿ ಜಾತ್ರೆಯಲ್ಲಿ ಮಂಡಳಿಯ ಶಾಖೆಯೊಂದನ್ನು ಆರಂಭಿಸಿ ಅದೇ "ವರನೋಡಿ ಹೆಣ್ಣು ಕೊಡು" ನಾಟಕ ಪ್ರದರ್ಶನ ನೀಡಿ ಯಶಸ್ವಿಯಾದರು ಈ ಶಾಖೆಯೂ ಯಶಸಿನೊಂದಿಗೆ ಮುನ್ನಡೆಯಲು 1977ರಲ್ಲಿ ತಾಳಿಕೋಟಿಯಲ್ಲಿ ಇನ್ನೊಂದು ಶಾಖೆಯನ್ನು ಆರಂಭಿಸಿದರು. ಈ ನಡುವೆ ನಾಟಕ ರಚನೆಯಲ್ಲಿ ತೊಡಗಿಕೊಂಡ ಬಸವರಾಜರು 15 ನಾಟಕಗಳನ್ನು ರಚಿಸಿ ತಮ್ಮ ಮಂಡಳಿಯಲ್ಲೇ ಪ್ರದರ್ಶನ ಮಾಡಿ ಯಶಸ್ಸು ಕಂಡರು. ಇದರಲ್ಲಿ 'ಸೂಳೆಯಮಗ' 'ರೈತನ ಮಕ್ಕಳು' 'ದುಡ್ಡಿನ ದರ್ಪ' ಸುಟ್ಟಿತು ಶೀಲ' 'ಸತ್ಯ ಸತ್ತಿತು' ನಾಟಕಗಳು ಬಸವರಾಜರಿಗೆ ಹಣ ಹೆಸರು ಎರಡನ್ನೂ ತಂದುಕೊಟ್ಟವು.

"ಗುಡಗೇರಿ ಬಸವರಾಜ ಉತ್ತರಕರ್ನಾಟಕದ ವೃತ್ತಿರಂಗಭೂಮಿಯ ಗಂಡುಗಲಿ, ನಟ, ನಾಟಕಕಾರ ಸಂಘಟಕ, ಎದೆಗಾರ, ಧೈರ್ಯ ಹಾಗೂ ಸಾಹಸಗಳಿಗೆ ಇನ್ನೊಂದು ಹೆಸರೆಂಬಂತೆ ವೃತ್ತಿಯಲ್ಲಿ ಪ್ರವೃತ್ತಿಯ ಪ್ರೀತಿಯನ್ನು ಪೋಷಿಸಿಕೊಂಡು ಬಂದ ಬಸಣ್ಣ ಶಾಲೆಯಲ್ಲಿ ಕಲಿತದ್ದು ಏನೂ ಇಲ್ಲವೆಂಬಷ್ಟು. ಪೈಲವಾನನಾಗಿ ಕುಸ್ತಿ ಒಗೆದು ಕಡಗ ತರುತ್ತಿದ್ದ ಬಸಣ್ಣನ ಬದುಕು ತಿರುವುಗಳ ರಂಗಕಥೆ. ಸಂಗಮೇಶ್ವರ ನಾಟ್ಯ ಸಂಘ ಹುಟ್ಟು ಹಾಕಿದ್ದಲ್ಲದೆ ಅದರ ಮೂರು ಶಾಖೆಗಳನ್ನು ಸಮರೀತಿಯಲ್ಲಿ ನಡೆಸಿದ ಸಾಮರ್ಥ್ಯ ಅವರದು. ತಾನು ತಯಾರಿಸಿದ ಕ್ಯಾಸೆಟ್‌ಗಳ ಮೂಲಕ ವೃತ್ತಿ ನಾಟಕಗಳ ಪ್ರೀತಿಯನ್ನು ಬೆಳೆಸಿದರು.[12]

---

12 ಸಿದ್ದಲಿಂಗ ಪಟ್ಟಣಶೆಟ್ಟಿ, "ಎನ್ ಬಸವರಾಜ ಗುಡಗೇರಿ ಪುಸ್ತಕದ ಸಂಪಾದಕೀಯ." ಪುಟ-6. ಶೀ. ಬಿ. ಆರ್. ಪೋಲೀಸ್ ಪಾಟೀಲ.

ಹೀಗೆ ಹಿಂದಿನ ಹಲವರಂತೆ ಚಿತ್ರರಂಗಕ್ಕೂ ಕೈ ಹಾಕಿದ ಬಸವರಾಜರು ಮೂರು ಚಿತ್ರ ನಿರ್ಮಿಸಿ ಅಷ್ಟೇನು ಯಶಸ್ಸು ಕಾಣದೆ ಕೊನೆಗೆ ರಂಗಭೂಮಿಯನ್ನೇ ನೆಚ್ಚಿಕೊಂಡು ತಮ್ಮ ರಂಗಸೇವೆಯನ್ನು ಮುಂದುವರಸಿದ್ದ ಬಸಣ್ಣ ಇವತ್ತು ನಮ್ಮೊಡನಿಲ್ಲ.

ಮೇಲೆ ಹೆಸರಿಸಲಾದ ಮಂಡಳಿಗಳಲ್ಲದೆ ಅರವತ್ತರ ದಶಕದ ನಂತರವೂ ಉತ್ತರ ಕರ್ನಾಟಕದ ರಂಗಭೂಮಿಯಲ್ಲಿ ಮರೆಯಲಾಗದ ಛಾಪು ಮೂಡಿಸಿದ ಇನ್ನು ಕೆಲವು ಮಂಡಳಿಗಳೆಂದರೆ, 1963ರಲ್ಲಿ ಮನೋಹರ ನಿಂಗಯ್ಯ ಕಡಪಟ್ಟಿಯವರು ಪ್ರಾರಂಭಿಸಿದ "ಶ್ರೀಗುರು ಪ್ರಸಾದ ನಾಟ್ಯ ಸಂಘ ಜಮಖಂಡಿ" ಈ ಮಂಡಳಿಯಿಂದ ಹೊರಹೊಮ್ಮಿದ ಮತ್ತೊಬ್ಬ ಪ್ರಬುದ್ಧ ಕಲಾವಿದ, ನಾಟಕಕಾರರೆಂದರೆ, ಪ್ರಕಾಶ ಕಡಪಟ್ಟಿ, ಇವರೇ ರಚಿಸಿದ ನಾಟಕ 'ಚಿನ್ನದ ಗೊಂಬೆ' ಬಿಜಾಪೂರದಲ್ಲಿ 200 ಪ್ರಯೋಗ ಹುಬ್ಬಳ್ಳಿಯಲ್ಲಿ 'ಸತಿ ಸಂಸಾರದ ಜ್ಯೋತಿ' 250 ಪ್ರಯೋಗ ಹುಬ್ಬಳ್ಳಿಯಲ್ಲೇ 'ಚನ್ನಪ್ಪ ಚನ್ನಗೌಡ' ಸತತ 650 ಪ್ರಯೋಗ (1986–87) ಕಂಡವು. ಇದೇ ಮಂಡಳಿಯಲ್ಲಿ ಅರಳಿ ಕರ್ನಾಟಕದ ಮನೆ ಮಾತಾದ ಮತ್ತೊಂದು ಪ್ರತಿಭೆ ಸುನಂದಾ ಕಡಪಟ್ಟಿ (ಈಗಿವರಿಲ್ಲ).

ಇನ್ನೊಂದು ನಾಟಕ ಮಂಡಳಿಯ ಹೆಸರು "ಶ್ರೀ ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ" ಸುಳ್ಳ ಎಂದಿತ್ತಾದರೂ ಈ ಮಂಡಳಿ "ಸುಳ್ಳದ ದೇಸಾಯರ ಕಂಪ್ನಿ" ಎಂದೇ ಹೆಸರಾಯಿತು. ದೇಸಾಯಿ ಮನೆತನಕ್ಕೆ ಸಂಬಂಧಿಸಿದ ಕಥೆಯನ್ನೊಳಗೊಂಡ "ಕಿತ್ತೂರ ಚನ್ನಮ್ಮ' ನಾಟಕವನ್ನು ಅದ್ದೂರಿಯಿಂದ ಪ್ರಯೋಗಿಸಲೆಂದೇ ಬದಾಮಿ ತಾಲೂಕಿನ ಸುಳ್ಳ ಎಂಬ ಗ್ರಾಮದಲ್ಲಿ ಮಲ್ಲನಗೌಡ ದೇಸಾಯಿ ಎಂಬುವರು 1966ರಲ್ಲಿ ಮಂಡಳಿಯನ್ನು ಹುಟ್ಟು ಹಾಕಿ, ಕಂದಗಲ್ ಹಣಮಂತರಾಯರಿಂದ ನಾಟಕವನ್ನು ಹೊಸರೀತಿಯಲ್ಲಿ ಬರೆಸಿ, ಪ್ರಸಿದ್ಧ ಕಲಾವಿದರನ್ನು ಕರೆಸಿ, ಹಣಮಂತರಾಯರ ಮಾರ್ಗದರ್ಶನದಲ್ಲಿ ತಾಲೀಮು ಆರಂಭಿಸಿದರು. ಅದೆ ಹಣಮಂತರಾಯರ ಆರೋಗ್ಯ ಹದಗೆಟ್ಟು ಮುಂದಿನ ತಯ್ಯಾರಿ ನಿಂತುಹೋಯಿತು. ಹಣಮಂತರಾಯರ ಮರಣದ ನಂತರ ದೇಸಾಯಿಯವರು ನಾಟಕದ ಆಸೆಯನ್ನೇ ಬಿಟ್ಟರು. ಕೆಲದಿನಗಳ ನಂತರ ನಾಟಕ ಪ್ರೇಮಿಗಳ ಒತ್ತಾಯಕ್ಕೆ ಮಣಿದು ಕಂದಗಲ್‌ರ ಕನಸನ್ನು ನನಸು ಮಾಡುವದಕ್ಕಾದರೂ ನಾಟಕವಾಡಿಸಲು ದೇಸಾಯಿಯವರು ಮುಂದಾದರು. ಮೊದಲಿನಂತೆ ಎಲ್ಲ ತಯ್ಯಾರಿ ಮಾಡಿಕೊಂಡು ಚನ್ನಮ್ಮನ ಸಮಾಧಿಯಿರುವ ಬೈಲಹೊಂಗಲದಲ್ಲೇ ನಾಟಕ ಪ್ರದರ್ಶನ ಇಟ್ಟುಕೊಂಡರು. ಮುಕ್ತಿ ಮಂದಿರ ಜಗದ್ಗುರುಗಳ ಮಠದ ಆನೆ, ಚನ್ನಮ್ಮನಿಗಾಗಿ ಕೋಟೇಕಲ್ ದೇಸಾಯಿಯವರ ಏಳುಗೇಣಿನ ಕುದುರೆ ರಂಗವೇರಲು ಸಿದ್ಧವಾದವು.

ಸಮರ್ಥ ನಟರ ಅಭಿನಯ, ಅದ್ದೂರಿ ರಂಗ ಪರಿಕರಗಳೊಂದಿಗೆ ನಾಟಕ ಜಯಭೇರಿ ಹೊಡೆಯಿತು. ಒಂದೆರಡು ವಾರಗಳಲ್ಲೇ ಕಂಪನಿ ಕರ್ನಾಟಕದ ಮನೆ ಮಾತಾಯಿತು. ಅದೇ ದಿನಗಳಲ್ಲಿ

ಕೆಲ ನೀಚರು ಹಚ್ಚಿದ ಬೆಂಕಿಗೆ ಲಕ್ಷಾಂತರ ರೂ.ಗಳ ರಂಗಮಂದಿರ ಬೂದಿಯಾಯಿತು. ತೀವ್ರ ಆಘಾತಗೊಂಡ ಮಲ್ಲನಗೌಡರು ಊರಿಗೆ ವಾಪಸ್ಸಾಗಬೇಕೆಂದಿದ್ದರು, ಆದರೆ ಸ್ಥಳೀಕರ ಬೆಂಬಲ, ಗುಬ್ಬಿವೀರಣ್ಣನವರ ಸಹಾಯದಿಂದ ಮಂಡಳಿಯನ್ನು ಮತ್ತೆ ಆರಂಭಿಸಿ ಯಶಸ್ವಿಯಾಗಿ ಮುನ್ನಡೆಸಿದರು. ಕರ್ನಾಟಕ ಸರಕಾರ ಖೆಡ್ಡಾದಲ್ಲಿ ಹಿಡಿದ ಆನೆಮರಿಯೊಂದನ್ನು 'ಜಯಂತಿ' ಎಂಬ ಹೆಸರನ್ನಿಟ್ಟು ದೇಸಾಯಿಯವರಿಗೆ ಕಾಣಿಕೆಯಾಗಿ ನೀಡಿತು. ಹೀಗೆ ಯಶಸ್ಸಿನ ಹೆಜ್ಜೆಯಿಟ್ಟು ಒಂದಿದ್ದ ಶಾಖೆ ಎರಡಾಗಿ ಬೆಳೆದು ಮುನ್ನಡೆಯುತ್ತಿದ್ದಾಗ ಬಾದಾಮಿ ಬನಶಂಕರಿ ಜಾತ್ರೆಯಲ್ಲಿ 1976ರಲ್ಲಿ ರಂಗಮಂದಿರ ಮತ್ತೊಮ್ಮೆ ಅಗ್ನಿ ದುರಂತಕ್ಕೆ ಬಲಿಯಾಯಿತು. ಧೃತಿಗೆಡದ ಮಲ್ಲನಗೌಡರು ಮತ್ತೆ ಮನೆಯ ಸಂಪತ್ತನ್ನು ಹಾಕಿ ಮತ್ತೆ ಮಂಡಳಿ ಕಟ್ಟಿ 1988ರವರೆಗೂ ಮುನ್ನಡೆಸಿದರು. ಐತಿಹಾಸಿಕ ನಾಟಕಗಳನ್ನು ದೇಶಪ್ರೇಮ ಬೆಳಸುವಹಾಗೆ ಪ್ರದರ್ಶಿಸಿದ್ದು ಈ ಮಂಡಳಿಯ ಹಿರಿಮೆ. ಇವರೊಂದಿಗೆ ಉಲೇಖನಾರ್ಹ ಮಂಡಳಿಗಳೆಂದರೆ, "ಕರ್ನಾಟಕ ಕಲಾಸಂಘ" ಯಂಕಂಚಿ ಸೂಡಿ ಶೇಖರಯ್ಯನವರ "ಶ್ರೀ ಭಾರತಿ ನಾಟ್ಯಸಂಘ ಸೂಡಿ" ಶಿವಪುತ್ರಪ್ಪ ದೊಡ್ಡವಾಡರ "ಶ್ರೀ ಸಂಗಮೇಶ್ವರ ಕೃಪಾ ಪೋಷಿತ ನಾಟ್ಯ ಸಂಘ" ದೊಡ್ಡವಾಡ ಗಮನಾರ್ಹ ಮಂಡಳಿಗಳು.

ಇನ್ನು 1980ರ ದಶಕದ ನಂತರದ ಮಂಡಳಿಗಳೆಂದರೆ, ಆಶಾಪುರದ ಬಸವರಾಜ ಪಾಟೀಲರು ಸ್ಥಾಪಿಸಿದ ಅವರ ಮರಣಾನಂತರ ಪ್ರೇಮಾಗುಳೆದಗುಡ್ಡ ಅವರು ಮುನ್ನಡೆಸುತ್ತಿರುವ "ಶ್ರೀ ಸಂಗಮೇಶ್ವರ ನಾಟ್ಯ ಸಂಘ ಆಶಾಪೂರ" ಕರ್ನಾಟಕ ಕಲಾ ವೈಭವ ಸಂಘ (ಮಾಲತಿ ಸುಧೀರ) ಶೇಖಮಾಸ್ತರರ "ಶ್ರೀ ಗುರು ಕುಮಾರೇಶ್ವರ ನಾಟ್ಯ ಸಂಘ" ಹಾನಗಲ್. ರಾಜು ತಾಳಿಕೋಟಿಯವರ "ಶ್ರೀ ಗುರು ಖಾಸ್ಗತೇಶ್ವರ ನಾಟ್ಯ ಸಂಘ" ತಾಳೀಕೋಟೆ, ಮಂಡಲಗಿರಿಯ ವೀರಯ್ಯಸ್ವಾಮಿಯವರ "ಗುರು ತೋಂಟದಾರ್ಯ ನಾಟ್ಯ ಸಂಘ" ಮಂಡಲಗಿರಿ, ರೇಣುಕಾ ಅಕ್ಕಲಕೋಟಿಯವರ "ಸ್ವಾಮಿ ಸಮರ್ಥ ನಾಟ್ಯ ಸಂಘ" ಅಕ್ಕಲಕೋಟೆ. "ಶ್ರೀ ವಿಶ್ವಾರಾಧ್ಯ ನಾಟ್ಯ ಸಂಘ ಜೇವರಗಿ" ರಾಜಣ್ಣ ಜೇವರಗಿಯವರ "ವಿಶ್ವಜ್ಯೋತಿ ಶ್ರೀಗುರು ಪಂಚಾಕ್ಷರಿ ನಾಟ್ಯ ಸಂಘ" ಜೇವರಗಿ (ಗದಗ) ಬ್ರಹ್ಮರವರ ಶ್ರೀಗುರು ಪಂಚಾಕ್ಷರಿ ನಾಟ್ಯಸಂಘ ಗದಗ, ನಾಗಯ್ಯ ಹಿರೇಮಠರವರ "ಶ್ರೀ ಘನಮಠೇಶ್ವರ ನಾಟ್ಯ ಸಂಘ" ಕುಂಟೋಜಿ ಮುಂತಾದವುಗಳು ಯಶಸ್ವಿ ಪ್ರದರ್ಶನದೊಂದಿಗೆ ಇಂದಿಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಮುನ್ನಡೆಯುತ್ತಲಿವೆ.

ಹೀಗೆ 40ರ ದಶಕದವರೆಗೆ ತನ್ನದೇ ಆದ ಸ್ಥಾನಮಾನಗಳನ್ನು ಹೊಂದಿ ಮೆರೆದ ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ನಂತರದ ದಿನಗಳಲ್ಲಿ ಚಲನಚಿತ್ರಗಳ ಆಕರ್ಷಣೆಯಿಂದ ಕಳಾಹೀನವಾಗುತ್ತಲೇ ಸಾಗಿ ಸೊರಗುತ್ತ ಸಾಗಿತೇ ಹೊರತು ಸಾಯಲಿಲ್ಲವೆಂಬುದನ್ನು

ಗಮನದಲ್ಲಿಡಬೇಕು. ಚಲನಚಿತ್ರಗಳೊಂದಿಗೆ ಸ್ಪರ್ಧಿಸಲೆಂಬಂತೆ, ಆಕರ್ಷಕ ರಂಗಸಜ್ಜಿಕೆ ಹೊಸರೀತಿಯ ಸಂಗೀತ, ವೇಷ ಭೂಷಣ, ಹೀಗೆ ಎಲ್ಲ ಹಂತಗಳಲ್ಲಿ ಬದಲಾವಣೆಯಾಗುತ್ತಾ ಹೋದರೂ ಸಿನೆಮಾಗಳೊಂದಿಗೆ ಸ್ಪರ್ಧೆ ಸಾಧ್ಯವಾಗಲೇ ಇಲ್ಲ. ಆದರೆ ಸಿನೆಮಾಗಳಿಂದ ವೃತ್ತರಂಗಭೂಮಿ ಕಳಾಹೀನವಾಗಿದ್ದೇನೋ ನಿಜ. ಅದರೊಂದಿಗೆ ಇನ್ನೂ ಅನೇಕ ಕಾರಣಗಳು ಇವೆ. ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

**1. ಪ್ರತಿಕೂಲ ಪರಿಸ್ಥಿತಿ :**

ಅಂದರೆ ಇಲ್ಲಿಯೂ ನಾವು ಚಿತ್ರರಂಗದತ್ತಲೇ ಬೆರಳು ತೋರಿಸಬೇಕಾಗುತ್ತದೆ. ಸಿನೆಮಾದಲ್ಲಿ ಏನೇನು ತೋರಿಸಲು ಸಾಧ್ಯವಿತ್ತೋ ಅದನ್ನು ನಾಟಕಗಳಲ್ಲಿ ತೋರಿಸಲಾಗಲಿಲ್ಲ. ಇದರಿಂದ ರಂಗಭೂಮಿಯಿಂದ ಪ್ರೇಕ್ಷಕರು ವಿಮುಖರಾದರು. ಜೊತೆಗೆ ಹವ್ಯಾಸಿ ರಂಗಭೂಮಿಯವರಿಂದ ಸತತವಾಗಿ ವೃತ್ತಿರಂಗಭೂಮಿ ಲೇವಡಿಗೆ ಒಳಗಾಗುತ್ತಹೋಯಿತು. ಇಂಥ ಪ್ರತಿಕೂಲ ಪರಿಸ್ಥಿತಿಯಲ್ಲಿ ರಂಗಭೂಮಿ ಬಡುವಾಗುತ್ತ ನಡೆದಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

**2. ಪ್ರತಿಭಾವಂತ ಕಲಾವಿದರ ಕೊರತೆ :**

ಇಲ್ಲಿ ನಾವು ಒಂದು ವಿಷಯವನ್ನು ಗಮನಿಸಬೇಕು. 40ರ ದಶಕದ ಮೊದಲು ಪ್ರತಿಮಂಡಳಿಯಲ್ಲೂ ಅಭಿನಯ ಮತ್ತು ಸಂಗೀತ ತರಭೇತಿಗೆ ಸೂಕ್ತ ವ್ಯವಸ್ಥೆ ಇರುತ್ತಿತ್ತು. ಹೀಗೆ ತರಭೇತಿ ಪಡೆದ ಪ್ರತಿಭಾವಂತರಿಗೆ ರಂಗಭೂಮಿಯಲ್ಲಿ ಮಿಂಚಲು ಸಾಧ್ಯವಾಗುತ್ತಿತ್ತು. ಆದರೆ 40ರ ದಶಕದ ನಂತರ ದಿನಗಳಲ್ಲಿ ಮಂಡಳಿಗಳಲ್ಲಿ ಇಂಥ ವ್ಯವಸ್ಥೆ ನಿಂತುಹೋಯಿತು. ಸಂಗೀತ ಪ್ರಧಾನ್ಯತೆ ಕಡಿಮೆಯಾಯಿತು. ಯಾವಾಗ ಅಭಿನಯ ಮತ್ತು ಸಂಗೀತದ ತರಬೇತಿ ನಿಂತುಬಿಟ್ಟತೋ ಆವಾಗ ಪ್ರತಿಭಾವಂತರ ಸಂಖ್ಯೆ ಕಡಿಮೆಯಾಯಿತು. ಅಳಿದುಳಿದ ಪ್ರತಿಭಾವಂತರು ವಯಸ್ಸಿನ ಕಾರಣದಿಂದ ಮತ್ತು ಮರಣದ ಕಾರಣದಿಂದ ಪ್ರತಿಭಾವಂತ ಕಲಾವಿದರ ಕೊರತೆಯಾಗತೊಡಗಿತು.

**3. ಶ್ರದ್ಧೆಯಿಲ್ಲದ ಕಲಾವಿದರು :**

ತರಬೇತಿಯೇ ನಿಂತಮೇಲೆ ಶ್ರದ್ಧೆ ಎಲ್ಲಿಂದ ಬರಬೇಕು? ಮೊದಲಿನ ಕಲಾವಿದರೋ ರಂಗಭೂಮಿಯ ಬಗ್ಗೆ ಅಪಾರವಾದ ಶ್ರದ್ಧೆ, ಭಕ್ತಿ, ಗೌರವಹೊಂದಿದ್ದರು. ರಂಗಮಂದಿರವೆಂದರೆ ಕಲಾಸರಸ್ವತಿಯ ಮಂದಿರವೆಂದು ಭಾವಿಸುತ್ತಿದ್ದರು. ಸ್ನಾನ ಮಾಡದೇ, ನಮಸ್ಕರಿಸದೇ ರಂಗಭೂಮಿಯಲ್ಲಿ ಕಾಲಿಡುತ್ತಿರಲಿಲ್ಲ. ಹಾಗಾಗಿ ಅವರಿಗೆ ವೃತ್ತಿಗೌರವವಿತ್ತು. ಶ್ರದ್ಧೆಯಿಂದ ಅಭಿನಯಿಸುತ್ತಿದ್ದರು. ಬರಬರುತ್ತ

ಕಲಾವಿದರಲ್ಲಿ ಶ್ರದ್ಧೆ ಕಡಿಮೆಯಾಗತೊಡಗಿ, ನಾಲ್ಕು ಜನ ಚನ್ನಾಗಿ ಪಾರ್ಟ ಮಾಡ್ತಾರ ಅಂದರೆ ಸಾಕು, ಎರಡು ಕೊಂಬು ಮೂಡಿದಂತಾಡತೊಡಗಿದರು. ನನ್ನಿಂದಲೇ ನಾಟಕ ನಡೀತದೆ ಎಂಬ ಭಾವನೆ ಮೂಡತೊಡಗಿತು. ಇಂಥವರೊಂದಿಗೆ ಏಗುವುದೇ ಕಂಪನಿ ಮಾಲೀಕರಿಗೆ ದುಸ್ತರವಾಗತೊಡಗಿತು. ಸ್ವಲ್ಪ ಹೆಸರು ಮಾಡಿದ ಕಲಾವಿದರು ಯಾವಾಗ ಕೈಕೊಟ್ಟು ಹೋಗುವರೋ ತಿಳಿಯದಂತಾಯಿತು. ಇದೇ ಕಾರಣಕ್ಕೆ ಹಲವಾರು ಮಂಡಳಿಗಳು ಮುಚ್ಚುವಂತಾಯಿತು.

### 4. ನಾಯಿಕೊಡೆಗಳಂತೆ ಹುಟ್ಟಿಕೊಂಡ ಮಂಡಳಿಗಳು :

ಮಂಡಳಿಗಳು ನಾಟಕದ ಪ್ರತಿಪಾತ್ರಕ್ಕೂ ಸೂಕ್ತ ಪ್ರಾಶಸ್ತ್ಯ, ಸಂಗೀತ ಎಲ್ಲದಕ್ಕೂ ಮಾನ್ಯತೆ ನೀಡುತ್ತಿದ್ದವು. ಆದರೆ 60ರ ದಶಕದ ನಂತರ ಎಲ್ಲವೂ ಬದಲಾಯಿತು. ಪ್ರತಿಭಾವಂತ ಕಲಾವಿದರ ಸಂಖ್ಯೆ ಕಡಿಮೆಯಾದಂತೆಲ್ಲ ಇದ್ದಬಿದ್ದ ಕಲಾವಿದರನ್ನು ಓಲೈಸಿಕೊಂಡಿರಬೇಕಾದ ಸ್ಥಿತಿ ಮಾಲೀಕರದಾಯಿತು. ಸಣ್ಣಪುಟ್ಟ ಕಾರಣಗಳಿಗಾಗಿ ಮಾಲೀಕರಿಗೆ ಕಾಡುವ ಕಲಾವಿದರು ಹೆಚ್ಚಾದರು. ನಾಲ್ಕಾರು ಕಲಾವಿದರು ಸೇರಿ ಮಂಡಳಿಯನ್ನು ಬಿಟ್ಟು ಬಿಟ್ಟರೆ ಆ ಮಂಡಳಿ ಮುಚ್ಚಿದಂತೆಯೇ ಸರಿ. ಹೀಗೆ ಯಾವುಯಾವುದೋ ಕಾರಣಕ್ಕೆ ಮಂಡಳಿ ಬಿಟ್ಟವರು ಹೊಸಮಂಡಳಿಯನ್ನು ಕಟ್ಟತೊಡಗಿದರು. ಹೆಂಗಸರ ಖಯ್ಯಾಲಿಯ ಶ್ರೀಮಂತರೂ ಬಣ್ಣದ ಹೆಣ್ಣುಗಳ ಮೋಡಿಗೆ ಒಳಗಾಗಿ ಮಂಡಳಿಗಳನ್ನು ಕಟ್ಟಿದರು. ಇನ್ನು ಕೆಲ ಹಣವಂತರೂ ತಾವು ಯಾವ ಹೆಣ್ಣನ್ನು ಮೆಚ್ಚಿಕೊಳ್ಳುತ್ತಾರೋ ಅಂಥವಳಿಗೆ ಮಂಡಳಿಯನ್ನು ಮಾಡಿಕೊಟ್ಟರು. ಇನ್ನು ಕೆಲವರು ನಾಟಕ ಮಂಡಳಿ ಕಟ್ಟುವದೆಂದರೆ, ಸುಲಭವಾಗಿ ಹಣ ಮಾಡಬಹುದೆಂದು ತಿಳಿದು ಮಂಡಳಿ ಕಟ್ಟಿದರು. ಹೀಗಾಗಿ ನಾಯಿ ಕೊಡೆಗಳಂತೆ ಮಂಡಳಿಗಳು ಹುಟ್ಟಿಕೊಂಡಾಗ ನಾಟಕ ಪ್ರದರ್ಶನದ ಗುಣಮಟ್ಟ ಕುಸಿಯತೊಡಗಿತು. ಇದರಿಂದಾಗಿಯೂ ರಂಗಭೂಮಿ ಆಕರ್ಷಣೆ ಕಳೆದುಕೊಳ್ಳುವಂತಾಯಿತು. ತರಾತುರಿಯಲ್ಲಿ ಹುಟ್ಟಿದ ಮಂಡಳಿಗಳು ಅಷ್ಟೇ ತರಾತುರಿಯಲ್ಲಿ ಮಲಗಿದ್ದು ನಿಜ.

### 5. ಹೆಚ್ಚಿದ ಅನೈತಿಕತೆ :

ಪ್ರಾರಂಭದಲ್ಲಿ ಸದಾಚಾರಿಗಳು, ಪ್ರತಿಭಾಶಾಲಿಗಳಿದ್ದ ರಂಗಭೂಮಿ ಅಂತವರನ್ನು ಕಾಲಾಂತರದಲ್ಲಿ ಕಳೆದುಕೊಳ್ಳುತ್ತಾ ಹೋದಾಗ, ಆ ಸ್ಥಾನಕ್ಕೆ ಹೆಜ್ಜೆನವರು ಅನಾಚಾರಿಗಳು, ಅನೀತಿವಂತರು ಬರತೊಡಗಿದರು. ತಮ್ಮ ಊರಿನಲ್ಲಿ ಯಾವ ಕೆಲಸಕ್ಕೂ ಬಾರದವರೂ, ಕುಟುಂಬಗಳಿಗೆ ಹೊರೆಯಾದವರೂ, ಸೋಂಬೇರಿಗಳಿಗೆಲ್ಲ ನಾಟಕ ಮಂಡಳಿಗಳು ಆಶ್ರಯತಾಣವಾದವು. ಆಶ್ರಯ ತಪ್ಪಿದ,

ದಿಕ್ಕಿಲ್ಲದ ಹೆಣ್ಣುಮಕ್ಕಳು ಅನೈತಿಕತೆಯಿಂದ ಮನೆಯ ಆಶ್ರಯ ಕಳೆದುಕೊಂಡ ಅದೆಷ್ಟೋ ಹೆಣ್ಣುಮಕ್ಕಳು ಮಂಡಳಿಯನ್ನು ಸೇರಿಕೊಂಡರು. ಇಂಥವರ ಸಂಖ್ಯೆಯೇ ಮಂಡಳಿಗಳಲ್ಲಿ ಹೆಚ್ಚಾದಾಗ ಮಂಡಳಿಗಳಲ್ಲಿ ಅನೈತಿಕತೆ ಹೆಚ್ಚತೊಡಗಿತು. ಇದರಿಂದಾಗಿ ಮಂಡಳಿಗಳು ಜನರ ಅನಾದರಕ್ಕೆ ಗುರಿಯಾದವು. ಯಾಕೆಂದರೆ ಇಂಥ ನಟ ನಟಿಯರ ಮೇಲೆ ಯಾರ ನಿಯಂತ್ರಣವೂ ಇರಲಿಲ್ಲ. ಯಾಕೆಂದರೆ ಇವರೆಲ್ಲ ಒಂದಿಲ್ಲ ಒಂದು ಕಾರಣಕ್ಕೆ ಕುಟುಂಬದ ನಂಟನ್ನು ಕಳಕೊಂಡವರೆ ಆಗಿದ್ದವರು.

### 6. ಕಲೆಗಿಂತ ಹಣಕ್ಕೆ ಆದ್ಯತೆ :

ನಾಟಕ, ನಟನೆ ಎಂದರೆ ಕಲಾಸರಸ್ವತಿಯ ಸೇವೆ ಎಂಬ ಭಾವನೆ ಇದ್ದಕಾಲ ಒಂದಿತ್ತು. ಕಾಲಾನಂತರದಲ್ಲಿ ಮೊದಲಿದ್ದ ರೀತಿರಿವಾಜುಗಳು, ಸಂಪ್ರದಾಯಗಳೆಲ್ಲಾ ಮಾಯವಾಗಿ ಹಣಗಳಿಕೆಯತ್ತ ಮಾಲೀಕರು ಕಲಾವಿದರು ಗಮನ ಕೊಡತೊಡಗಿದರು. ಒಳ್ಳೆಯ ನಟ, ನಟಿಯರೆಂದು ಹೆಸರು ಮಾಡಿದ ಕಲಾವಿದರು ಬೇರೆ ಮಂಡಳಿಯಲ್ಲಿ ಹೇಗಾದರೂ ಸರಿ ಅವರನ್ನು ಅಲ್ಲಿಂದ ಕರೆತಂದು, ಅವರಿಗೆ ಹೆಚ್ಚು ಹಣ ನೀಡಿ ತಾವು ಹಣ ಮಾಡಿಕೊಳ್ಳುವ ಕೆಲಸಕ್ಕೆ ಮಾಲೀಕರು ಮುಂದಾದರೆ, ಹೆಚ್ಚು ಹಣ ಕೊಡುವುದಾದರೆ ಇದ್ದ ಕಂಪನಿಗೆ ನಿಂತಲ್ಲಿಯೇ ಗುಡ್ ಬೈ ಹೇಳುವ ಕಲಾವಿದರೂ ಹೆಚ್ಚಾದರು. ಆಗ ಇವರನ್ನೆ ನಂಬಿ ಲಕ್ಷಾಂತರ ರೂ. ಹಣಹಾಕಿದ ಮಾಲಿಕ, ಮಂಡಳಿಯ ಇತರರ ಪಾಡೇನಾಗಬೇಕು? ಇಂಥದ್ದೇ ಕಾರಣಕ್ಕೆ ಅನೇಕ ಮಂಡಳಿಗಳು ಮುಳುಗಿದ್ದೂ ಉಂಟು.

### 7. ಹೊಸ ನಾಟಕಗಳ ಕೊರತೆ :

ಪ್ರಾರಂಭದಲ್ಲಿ ವೃತ್ತಿರಂಗಭೂಮಿ ಪೌರಾಣಿಕ ನಾಟಕಗಳಿಂದ ಆರಂಭಿಸಿ ನಂತರ ಐತಿಹಾಸಿಕ ಸಂಸಾರಿಕ, ಸಾಮಾಜಿಕ, ನಾಟಕಗಳತ್ತ ತಿರುಗಿತು. 50ರ ದಶಕದ ನಂತರ ಸಾಮಾಜಿಕ ನಾಟಕಗಳನ್ನೇ ಅವಲಂಭಿಸಿತು. (ವಿಪರೀತ ಖರ್ಚಿನ ರಗಸಜ್ಜಿಕೆ ಹಣಭರಿಸುವಶಕ್ತಿ ಇಲ್ಲದ್ದಕ್ಕೂ ಪ್ರೇಕ್ಷಕರ ಬದಲಾದ ಅಭಿರುಚಿಯ ಕಾರಣಕ್ಕೋ ಈ ಬದಲಾವಣೆಯಾಗಿರಬೇಕು) ಶಾಂತಕವಿಗಳಿಂದ ಆರಂಭವಾದ ನಾಟಕ ರಚನೆಕಾರರ ಪರಂಪರೆ, ಚಿಕ್ಕೋಡಿ ಶಿವಲಿಂಗಶಾಸ್ತ್ರಿಗಳು, ಗರುಡ ಸದಾಶಿವರಾಯರು, ಕಂದಗಲ್ ಹನುಮಂತರಾಯರು, ಅಚ್ಯುತ್‌ರಾವ ಹುಯಿಲಗೋಳ, ಎಲ್ ಎಸ್. ಇನಾಮದಾರ, ನಲವಡಿ ಶ್ರೀಕಂಠಶಾಸ್ತ್ರಿಗಳು, ಪಂಡಿತ ಪುಟ್ಟರಾಜ ಗವಾಯಿಗಳು, ಆರ್. ಡಿ. ಕಾಮತ್, ಜಿ. ಜಿ. ಹೆಗಡೆ, ಎಚ್. ಬಿ. ಮಹಾಂತೇಶಶಾಸ್ತ್ರಿ, ಹೀಗೆ ಮುಂದುವರೆದು ನಂತರದಲ್ಲಿ ಪಿ. ಬಿ. ದುತ್ತರಗಿ, ಮಾರುತೇಶ ಮಾಂಡ್ರೆ,

ಎಚ್. ಎನ್. ಹೂಗಾರ, ಕೆ. ಎನ್. ಸಾಳುಂಕೆ, ಬಿ. ಆರ್. ಅರಿಶಿನಗೋಡಿ, ಎಚ್. ಆರ್. ಭಸ್ಮೆ, ಎನ್. ಎಸ್. ಜೋಷಿ, ಎನ್. ಬಸವರಾಜ, ಎಸ್. ಎಮ್. ಖೇಡಗಿಯವರ ವರೆಗೂ ಸಾಗುತ್ತದೆ.

ಇವರೊಂದಿಗೆ ಇತ್ತೀಚಿನ ಪ್ರಕಾಶಕಡಪಟ್ಟಿ, ನಾ. ದೇ. ನರಸಿಂಹಮೂರ್ತಿ, ಅಶೋಕ ನೇಸರಗಿ, ಬಿ. ವಿ. ಈಶ ಮುಂತಾದವರನ್ನು ಹೆಸರಿಸಬಹುದು. ನಂತರದಲ್ಲಿ ಯಾವ ಹೊಸ ನಟಕಕಾರರೂ ಬದಲಾದ ಸಮಾಜದ ಆಶಯಗಳಿಗೆ ಅನುಗುಣವಾಗಿ ಜನರಿಗೆ ಇಷ್ಟವಾಗುವಂತಹ ನಾಟಕಗಳನ್ನು ಯಾರೂ ರಚಿಸಲೇ ಇಲ್ಲ. ಹೀಗಾಗಿ ಮಂಡಳಿಗಳು ಅವೆ ಹಳೆಯ ಜನಪ್ರೀಯ ನಾಟಕಗಳನ್ನು ಇಂದಿಗೂ ಆಡುವಂತಾಗಿದೆ. ಅನೇಕರು ಹಳೆಯ ನಾಟಕಗಳಿಗೆ ಹೊಸ ಹೆಸರನ್ನಿಟ್ಟು ಆಡುತ್ತಿದ್ದಾರೆ. ಹೀಗಾಗಿ ಹೊಸ ನಾಟಕಗಳಿಲ್ಲದೇ ನೋಡಿದ್ದನ್ನೇ ನೋಡಲು ಬೇಸರ ಪಟ್ಟುಕೊಂಡು ಪ್ರೇಕ್ಷಕರು ರಂಗಭೂಮಿಯಿಂದ ದೂರಾಗಿದ್ದೂ ಇದೆ.

**ಇಂದಿನ ರಂಗಭೂಮಿ :**

ಮೇಲೆ ಹೇಳಿದ ಕಾರಣಗಳಿಂದಾಗಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಸೊರಗಿ ಸುಣ್ಣಾದಾಗ 80ರ ದಶಕದ ನಂತರ ನಟರು ಮತ್ತು ಮಾಲೀಕರು ಮೊರೆ ಹೋದದ್ದು ದ್ವಂದ್ವಾರ್ಥದ ಸಂಬಾಷಣೆ ಮತ್ತು ಹಾಸ್ಯದ ಹೆಸರಲ್ಲಿ ಅಶ್ಲೀಲ ಸಂಭಾಷಣೆಗೆ. ಬಿ.ವಿ. ಈಶರ 'ಗೌಡ್ರ ಗದ್ಲ' ನಾಟಕದಿಂದ ಆರಂಭವಾದ ಈ ಪರಂಪರೆ ಇಂದಿಗೂ ಮುಂದುವರಿದಿದೆ. 'ಗೌಡ್ರಗದ್ಲ' ನಾಟಕವಂತೂ ಗಳಿಕೆಯಲ್ಲಿ ಭಾರೀ ಯಶಸ್ಸು ಕಂಡಿತು. ರಾಮರಾವ್ ದೇಸಾಯಿಯವರ ಮಂಡಳಿಯಲ್ಲಿ ಆರಂಭವಾದ ಈ ನಾಟಕ ಹುಬ್ಬಳ್ಳಿಯಲ್ಲಿ ವರ್ಷಾನುಗಟ್ಟಲೇ ಪ್ರದರ್ಶನ ಕಂಡಿತು. ನಾಟಕದುದ್ದಕ್ಕೂ ದ್ವಂದ್ವಾರ್ಥದ ಸಂಭಾಷಣೆಯೇ ನಾಟಕದ ಬಂಡವಾಳವಾಗಿತ್ತು. ಉದಾಹರಣೆಗೆ ಒಂದು ಶಬ್ದ ಹೇಳುವದಾದಲ್ಲಿ ನಾಟಕದಲ್ಲಿನ ಗೌಡನ ಪಾತ್ರದಾರಿ ತಾನು ಇಟ್ಟುಕೊಂಡವಳಿಗೆ 'ಕಪಾಟ' ಎಂದು ಕರೆಯುತ್ತಾನೆ. ಈ ನಾಟಕದ ಯಶಸ್ಸಿನ ನಂತರ ಸಾಲುಸಾಲಾಗಿ ಇಂಥ ನಾಟಕಗಳೇ ಬಂದವು. ಇಲ್ಲವೇ ಹಳೇ ನಾಟಕಗಳನ್ನೇ ಇದೇ ರೀತಿ ಸಂಭಾಷಣೆ ಬದಲಿಸಿ ಆಡಲಾಯಿತು. ಉದಾಹರಣಗೆ ಹೇಳುವುದಾದರೆ ಬಿ. ಆರ್. ಅರಿಶಿನಗೋಡಿಯವರ 'ಬಸ್‌ಕಂಡಕ್ಟರ್' ನಾಟಕವನ್ನು 'ಖಾನಾವಳಿ ಚೆನ್ನಿ' ಎಂದು ಬದಲಾಯಿಸಿ ಮೂಲ ನಾಟಕದ ಆಶಯಗಳನ್ನು ಹೇಳುವ ದೃಶ್ಯಗಳಿಗೆ ಕತ್ತರಿ ಪ್ರಯೋಗ ಮಾಡಿ 'ಚೆನ್ನಿ' ಮತ್ತು ರಾಜುವಿನ ಹಾಸ್ಯವನ್ನು ದ್ವಂದ್ವ ಸಂಭಾಷಣೆಗೆ ಬದಲಿಸಲಾಯಿತು. ಇದರ ಕೀರ್ತಿ ನಟಿ ಉಮಾಶ್ರೀ ಅವರಿಗೆ ಸೇರಬೇಕು. ಚಿತ್ರನಟಿ ಎಂಬ ಇಮೇಜು ಮತ್ತು ದ್ವಂದ್ವ ಸಂಭಾಷಣೆಗಳಿಂದ ನಾಟಕ ಹಣ ಸೂರೆ ಹೊಡೆಯಿತು. ಬಿ. ಆರ್. ಅರಿಶಿನಗೋಡಿಯವರ ಮಂಡಳಿ ಇರುವ ತನಕ ಕ್ಯಾಂಪಿನ ಕೊನೆಯಲ್ಲಿ "ಖಾನಾವಳಿ ಚೆನ್ನಿ" ಉಮಾಶ್ರೀ ಇದ್ದೇ ಇರುತ್ತಿದ್ದರು.

ಹೀಗೆ ಸಮಾಜಕ್ಕೆ ಒಂದು ಒಳ್ಳೆಯ ಸದುದ್ದೇಶ ಕೊಡುವ ಉದ್ದೇಶದಿಂದ ಹುಟ್ಟಿಕೊಂಡ ವೃತ್ತಿ ರಂಗಭೂಮಿ, ಅದಕ್ಕೆ ತಿಲಾಂಜಲಿ ನೀಡಿ ಹೇಗಾದರೂ ಸರಿ ಹಣ ಮಾಡುವ ಏಕೈಕ ಉದ್ದೇಶಕ್ಕೆ ಇಂದು ಸೀಮಿತವಾದವು. 1990ರ ದಶಕದ ನಂತರ ದ್ವಂದ್ವ ಮತ್ತು ಅಶ್ಲೀಲ ಸಂಭಾಷಣೆಯೊಂದಿಗೆ ಸೇರಿಕೊಂಡ ಇನ್ನೊಂದು ಅಂಶವೆಂದರೆ ಅರಬೆತ್ತಲೆ ನೃತ್ಯ. ಪ್ರಾರಂಭದಲ್ಲಿ ನಾಟಕ ಪ್ರದರ್ಶನದಲ್ಲಿ ಒಂದು ಭಾರಿ ಇರುತ್ತಿದ್ದ ಇಂಥ ನೃತ್ಯ ಇಂದು ಒಂದು ಪ್ರದರ್ಶನದಲ್ಲಿ ಮೂರು ಬಾರಿಗೆ ಬಂದು ನಿಂತಿದೆ. "ಸ್ವಾಮಿ ಸಮರ್ಥ ನಾಟ್ಯ ಸಂಘ" ಇಂದು ಅಭಿನಯಿಸುವ ನಾಟಕ ಯಾವುದೇ ಇರಲಿ ಅದರಲ್ಲಿ ಮಂಡಳಿಯ ಒಡತಿ ರೇಣುಕಾ ಅಕ್ಕಲಕೋಟಿಯವರ ನೃತ್ಯಕ್ಕಾಗೇ ಜನ ನಾಟಕ ನೋಡಲು ಬರುತ್ತಾರೆ. ಮೊದಮೊದಲುಕುಟುಂಬ ಸಮೇತರಾಗಿ ಜನ ನಾಟಕಗಳಿಗೆ ಬರುತ್ತಿದ್ದರು. ಆದರೆ ಇಂದು ಹೆಣ್ಣುಮಕ್ಕಳಿರಲಿ ಸುಶಿಕ್ಷಿತರೂ ಕೂಡಾ ನಾಟಕಗಳಿಗೆ ಬಾರದಂತಾಗಿದೆ. ಇಂದಿನ ನಾಟಕಗಳೆಂದರೆ ಪೋಲಿ ಹುಡುಗರ ಸಂತೆಯಂತಾಗಿವೆ. ಹೀಗಾಗಿ ಇಂದು ಉತ್ತರಕರ್ನಾಟಕದ ವೃತ್ತಿ ಮಂಡಳಿಗಳ ಸಂಖ್ಯೆ ಬೆರಳೆಣಿಕೆಯಷ್ಟಾಗಿವೆ.

ನಾಟಕಗಳು ಬಂದು ಮೂಲ ಜಾನಪದ ಹಾಡು, ಕಲೆ, ಆಟ, ಬಯಲಾಟಗಳನ್ನು ಮೂಲೆಗುಂಪು ಮಾಡಿದರೆ, 'ಸಿನೇಮಾ'ಗಳು ಬಂದು ರಂಗಭೂಮಿಯನ್ನು ಹಿಂದೆ ಹಾಕಿತು. ನಂತರದಲ್ಲಿ ಕಿರುತೆರೆ (ದೂರದರ್ಶನ ಮತ್ತಿತರ ಟಿ.ವ್ಹಿ. ಚಾನಲ್‌ಗಳು) ಜನರನ್ನು ಥೇಟರ್‌ಕಡೆಗೆ ಹೋಗದಂತೆ ಮಾಡಿತು. ದಿನವಿಡಿ ಪ್ರಸಾರವಾಗುವ ಧಾರಾವಾಹಿಗಳು ಮತ್ತಿತರ ಕಾರ್ಯಕ್ರಮಗಳು ಪ್ರೇಕ್ಷರನ್ನು ಅದರಲ್ಲಿ ಮಹಿಳಾ ಪ್ರೇಕ್ಷರನ್ನು ಮನೆಬಿಟ್ಟು ಹೊರಬರದಂತೆ ಮೋಡಿ ಮಾಡಿಬಿಟ್ಟಿತು. ಆದರೆ ಇಂದು ಜನ ಇದರಿಂದಲೂ ಬೇಸರಗೊಳ್ಳತೊಡಗಿದ್ದಾರೆ ಎಂಬುದಕ್ಕೆ ತೀರ ಇತ್ತೀಚಿಗೆ ರಂಗಭೂಮಿಯತ್ತ ವಾಲತೊಡಗಿದ್ದೇ ಸಾಕ್ಷಿ. ಇಂದಿಗೂ ಉಳಿದುಕೊಂಡಿರುವ ಕೆಲವೇ ಮಂಡಳಿಗಳು ಒಳ್ಳೆಯ ಪ್ರದರ್ಶನಗಳನ್ನೇ ಕಾಣತೊಡಗಿವೆ. ರಾಜು ತಾಳೀಕೋಟಿಯವರ ಮಂಡಳಿ, ಶೇಖಮಾಸ್ತರರ ಮಂಡಳಿ, ಎನ್. ಬಸವರಾಜರ ಮಂಡಳಿ, ಜೇವರಗಿ ರಾಜಣ್ಣನವರ ಮಂಡಳಿ, ಕುಂಠೋಜಿ ನಾಗಯ್ಯನವರ ಮಂಡಳಿಗಳು ಇಂದು ಒಳ್ಳೆಯ ಗಳಿಕೆಯನ್ನು ಕಾಣುತ್ತಲಿವೆ. ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಮತ್ತೇ ಚಿಗುರಿಕೊಳ್ಳುತ್ತಿರುವುದು ಒಳ್ಳೆಯ ಬೆಳವಣಿಗೆ. ಆದರೆ ಅಶ್ಲೀಲ ಸಂಭಾಷಣೆ, ಅರೆ ಬೆತ್ತಲೆ ಕುಣಿತ, ಅಸಂಬದ್ಧ ಹಾಸ್ಯವನ್ನು ನಿಲ್ಲಿಸಿ ಎಲ್ಲಾ ವರ್ಗದ ಪ್ರೇಕ್ಷಕರು ನೋಡುವಂಥ ನಾಟಕಗಳನ್ನು ಪ್ರದರ್ಶಿಸುವ ಹೊಣೆಗಾರಿಕೆ ಮಂಡಳಿಯ ಮಾಲಿಕರು ಮತ್ತು ಕಲಾವಿದರ ಮೇಲಿದೆ.

ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ನಾಲ್ವತ್ತರ ದಶಕದ ಮೊದಲಿನ ವೈಭವಕ್ಕೆ ಮರಳಲಿ ಎಂದು ಆಶಿಸೋಣ.

# ಅಧ್ಯಾಯ–3

# ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಪ್ರವೇಶ ಹಾಗೂ ಪ್ರಾಧಾನ್ಯತೆ

## ಅಧ್ಯಾಯ–3

# ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯಲ್ಲಿ ಮಹಿಳೆಯರ ಪ್ರವೇಶ ಹಾಗೂ ಪ್ರಾಧಾನ್ಯತೆ

### ವೃತ್ತಿ ರಂಗಭೂಮಿಗೆ ಮಹಿಳೆಯರ ಪ್ರವೇಶ

ಅನಾಗರಿಕತೆಯಿಂದ ನಾಗರೀಕತೆಯತ್ತ ಯಾವಾಗ ನಮ್ಮ ಸಂಸ್ಕೃತಿ ಮುಖಮಾಡಿತೋ ಆವಾಗ ವರ್ಗ ಸಮಸ್ಯೆ ವರ್ಣಸಮಸ್ಯೆ ತಲೆದೋರಿದಂತೆ ಲಿಂಗತಾರತಮ್ಯವೂ ಜೊತೆ ಜೊತೆಯಾಗಿಯೇ ಬೆಳೆದು ಬಂದಿತೇನೋ ಇಸ್ಲಾಂ ಧರ್ಮದವರು ಹೆಣ್ಣನ್ನು ತಮ್ಮ ಕೈಗೊಂಬೆ ಎಂದು ಭಾವಿಸಿದ್ದರೆ, ಹಿಂದುಗಳು ಹೆಣ್ಣನ್ನು ಭೋಗದವಸ್ತುವೆಂದು ತಿಳಿದುಕೊಂಡಿದ್ದರು. ಗಂಡನ ಬೇಕು ಬೇಡಗಳನ್ನು ಪೂರೈಸುವುದು. ಮಕ್ಕಳ ಲಾಲನೆ ಪಾಲನೆ ಮಾಡುವುದು, ಗಾಣದೆತ್ತಿನಂತೆ ಸಂಸಾರದ ನೊಗಕ್ಕೆ ಹೆಗಲು ಕೊಡುವುದರಲ್ಲಿಯೇ ಅವಳ ಬದುಕು ಸೀಮಿತವಾಗಿತ್ತು. ಹೀಗಿದ್ದಾಗ ಹೊರಪ್ರಪಂಚದ ಜ್ಞಾನವಾದರೂ ಅವಳಿಗೆ ಎಲ್ಲಿಂದ ಬರಬೇಕು?

ಹೆಣ್ಣು ಎಂದರೆ ಲಂಗು ಲಗಾಮಿಲ್ಲದೆ ಸ್ವಚ್ಛಂದವಾಗಿ ವರ್ತಿಸಬೇಕೆಂಬ ಇರ್ರಾದೆ ಅಲ್ಲ. ತಾನು ತನ್ನ ಮನೆ ತನ್ನ ಕುಟುಂಬ ಇವುಗಳ ಜೊತೆಗೆ ಅವಳ ತೀಕ್ಷ್ಣಮತಿಗೆ ಸಾಣೆ ಹಿಡಿಯುವ ಕೆಲಸವೂ ನಡೆಯಬೇಕಾಗಿದೆ. ಅವಳ ಪ್ರತಿಭೆಗೊಂದು ಅವಕಾಶ ಸಿಗಬೇಕಾಗಿದೆ. ಅದರ ಸದುಪಯೋಗವನ್ನು ನಮ್ಮ ಮಹಿಳೆಯರು ಮಾಡಿಕೊಳ್ಳಬೇಕಾಗಿದೆ. ನಮ್ಮ ದೇಶದಲ್ಲಿ ಕೈಗಾರಿಕಾ ಕ್ರಾಂತಿಗಳಾದಂತೆ ಸಾಂಸ್ಕೃತಿಕ ಕ್ಷೇತ್ರದಲ್ಲೂ ಕ್ರಾಂತಿಯಾಗಲೇಬೇಕು. ಅದು ಆದದ್ದು ಉಂಟು. ಅದೆಷ್ಟೋ ಮಹಿಳೆಯರು "ಕಲೆಗಾಗಿ ಕಲೆಯಲ್ಲ" ಬದುಕುವದಕ್ಕಾಗಿ ಕಲೆ ಎಂಬುದನ್ನು ಮನಗಂಡಿದ್ದರು.

ಮೊದಮೊದಲು ಮಹಿಳೆಯರು ಅದರಲ್ಲೂ ಕೆಳಸ್ತರದಿಂದ ಬಂದಂತ ಮಹಿಳೆಯರು ಸಂಗೀತ ಮತ್ತು ನೃತ್ಯವನ್ನು ನಂಬಿಕೊಂಡು ಬದುಕನ್ನು ಕಟ್ಟಿಕೊಂಡವರು. ಬರಬರುತ್ತ ಕಾಲಬದಲಾದಂತೆ ನಟನೆಯನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರು. ಅದರಲ್ಲೂ ಪಾಶ್ಚಿಮಾತ್ಯ ದೇಶದಲ್ಲಿ ಹದಿನಾರನೆಯ ಶತಮಾನದಲ್ಲಿ "ನಾಟಕವನ್ನೇ ಕಸುಬಾಗಿ ಮಾಡಿಕೊಂಡ ಮಹಿಳೆಯ ಪೈಕಿ ಮೊದಲನೆಯವಳು ಫ್ಲಾಮಿನಿಯಾ ಎಂದು ತೋರುತ್ತದೆ. ಈಕೆಯು ರೋಮ್ ಪಟ್ಟಣದಲ್ಲಿ ಹುಟ್ಟಿದವಳು. 1565ರಲ್ಲಿ ಈಕೆ ನಟನೆಯಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದಳು. ಈಕೆಯ ವಿಚಾರವು ನಮಗೆ ಲಿಯೋನ್

ಡಿ. ಸೋಮ್ಯೆ ಎಂಬಾತನಿಂದ ತಿಳಿದು ಬಂದಿರುತ್ತದೆ. ಈತನು ಸ್ವತಃ ನಟನು. ಒಂದು ನಾಟಕದ ಕಂಪನಿಗೆ ಯಜಮಾನ ಅಲ್ಲದೆ ಸೂತ್ರಧಾರನು."[1]

ಸುಮಾರು 130 ವರ್ಷಗಳ ಇತಿಹಾಸವಿರುವ ಈ ವೃತ್ತರಂಗಭೂಮಿ ಪಾರ್ಶಿ ಹಾಗೂ ಮರಾಠಿ ನಾಟಕಗಳ ಪ್ರಭಾವಕ್ಕೆ ಒಳಗಾಗಿ ಶಾಂತಕವಿಗಳು ಹಾಗೂ ಶ್ರೀನಿವಾಸ ಕವಿಗಳ ಪರಿಶ್ರಮ ಹಾಗೂ ಪ್ರಯತ್ನದಿಂದ ಕರ್ನಾಟಕದಲ್ಲಿ ಕನ್ನಡ ರಂಗಭೂಮಿ ಒಂದು ಹೊಸ ಆಯಾಮವನ್ನು ಕಂಡುಕೊಂಡಿತು.

ಕೃತಪುರ ಹಾಗೂ ಹಲಸಗಿ ನಾಟಕ ಮಂಡಳಿಯಿಂದ ಆರಂಭವಾದ ರಂಗ ಚಟುವಟಿಕೆಗಳು ನಾಡಿನಾದ್ಯಂತ ಪ್ರೇಕ್ಷಕರಿಗೆ ಸಾಂಸ್ಕೃತಿಕ ನೆಲೆಯನ್ನು ಒದಗಿಸಿಕೊಟ್ಟವು. ಇದಾದ ನಂತರ ಕೆಲ ಕಂಪನಿಗಳು ಹುಟ್ಟಿಕೊಂಡರೂ ಬಹಳ ಕಾಲ ಬದುಕಲಿಲ್ಲ. 20ನೇ ಶತಮಾನದ ಮೊದಲರ್ಧ ವೃತ್ತಿರಂಗ ಭೂಮಿಗೆ ಒಂದು ಸುವರ್ಣಕಾಲ. ಈ ಸಂದರ್ಭದಲ್ಲಿ ಹಲವಾರು ಕಂಪನಿಗಳು ಜನ್ಮಪಡೆದವು. ಒಂದು ವಿಷಾದದ ಸಂಗತಿಯೆಂದರೆ, ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಹೆಣ್ಣು ಉಪೇಕ್ಷೆಗೆ ಒಳಗಾದ್ದಂತೆ ಇಲ್ಲಿಯೂ ಉಪೇಕ್ಷೆಗೆ ಒಳಗಾಗಿದ್ದಳು. ಜನಪದರ ಕಸುವನ್ನುಂಡು ಬೆಳೆದಂತ ಈ ರಂಗಭೂಮಿಯಲ್ಲಿಯೂ ಪುರುಷ ಪ್ರಾಬಲ್ಯ ಕಾಣಬಹುದು.

ನಮ್ಮ ಎಷ್ಟೋ ಪ್ರಾಚೀನ ನಾಟಕಗಳಲ್ಲಿ ಉದಾಹರಣೆಗೆ 'ವಿಶಾಖದತ್ತನ ಮುದ್ರಾರಾಕ್ಷಸ' ಈ ನಾಟಕದಲ್ಲಿ ಸ್ತ್ರೀ ಪಾತ್ರಧಾರಿಗಳೇ ಇಲ್ಲ. ಹಾಗೇ ನಾಟಕಗಳನ್ನು ರಚನೆ ಮಾಡುತ್ತಿದ್ದರಂತೆ ರಚನೆಯಾಗಿವೆ. ಸ್ತ್ರೀ ಪಾತ್ರದಾರಿಗಳು ದೊರಕುವದಿಲ್ಲವೆಂಬ ಕಾರಣದಿಂದ ಹೀಗೆ ಮಾಡಿದರೋ ಅಥವಾ ನೈತಿಕ ಪಾವಿತ್ರ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ ಹೀಗೆ ಮಾಡಿದರೋ ವಿಚಾರನಾರ್ಹ ಪ್ರಶ್ನೆಯಾಗಿದೆ. ರಂಗಭೂಮಿಯಲ್ಲಿ ಮಹಿಳೆಯರು ಪಾತ್ರಮಾಡಬಾರದೆಂದು ಮಾತ್ರ ಭರತಮುನಿ ಎಲ್ಲಿಯೂ ಹೇಳಿಲ್ಲವಾದರೂ ಕಂಪನಿ ನಾಟಕಗಳಲ್ಲಿ ಸ್ತ್ರೀಯರಿಗೆ ಪಾತ್ರವಹಿಸಲು ಅವಕಾಶ ಕೊಡಲಿಲ್ಲ. ಆದರೆ ಕಂಪನಿ ನಾಟಕಗಳಿಗೆ ಬಳುವಳಿಯಾದ ದಾಸರಾಟ, ಸಣ್ಣಾಟಗಳಲ್ಲಿ ಸ್ತ್ರೀಯರು ಸ್ತ್ರೀ ಪಾತ್ರಗಳನ್ನು ಪ್ರದರ್ಶಿಸಿದುದು ಅತ್ಯಂತ ಗಮನಾರ್ಹ ಸಂಗತಿ. ಕೌಜಲಗಿ ನಿಂಗಮ್ಮ ಇಡೀ ತನ್ನ ಆಯುಷ್ಯದ ಎಂಬತ್ತು ವರುಷಗಳನ್ನು ಪಾತ್ರಧಾರಿಯಾಗಿ ನಟನೆಗೆ ತನ್ನನ್ನು ತಾನು ಅರ್ಪಿಸಿಕೊಂಡಿದ್ದಳು ಎಂಬುದನ್ನು ತಿಳಿದರೆ ಆಶ್ಚರ್ಯವನಿಸುತ್ತದೆ. ಅಷ್ಟೇ ಅಲ್ಲ ಶ್ರೀಕೃಷ್ಣ ಪಾರಿಜಾತದ ಪ್ರತಿವೃಂದದಲ್ಲೂ ಆಗ ಸ್ತ್ರೀಯರು ಪಾತ್ರ ನಿರ್ವಹಿಸಿದ್ದಾರೆ. "ದಾಸರಾಟದಲ್ಲಿ ಗಂಗಾಸಾನಿ ಯಮುನಾಸಾನಿಯರೆಂಬ ಸಹೋದರಿಯರು

---

[1] ನಾನೊಂದು ಕನಸುಕಂಡೆ (ಈ ಮಾಸ) ಮಹಿಳಾ ವಿಶೇಷಾಂಕ ಪುಟ-4 ಲೇಖಕರು ಎ. ಜಿ. ವೆಂಕಟೇಶಯ್ಯ

ಹದಿನಾರನೆಯ ಶತಮಾನದ ಆದಿಯಲ್ಲಿ ಆಟಗಳನ್ನಾಡಿ ಉತ್ತರ ಕರ್ನಾಟಕದ ಜನಪದ ರಂಗಭೂಮಿಗೆ ಮಹತ್ವವನ್ನು ನೀಡಿದ್ದಾರೆ. 19ನೆಯ ಶತಮಾನದ ಮೊದಲ ದಶಕದಲ್ಲಿ ಅಂಬಾಬಾಯಿ ಕಮಟೆಕರ ಎಂಬ ಮಹಿಳೆ ಯಕ್ಷಗಾನ ರಂಗಭೂಮಿಯಲ್ಲಿ ಕುಣಿದುದನ್ನು ಜನರು ಗಮನಿಸಲೇ ಇಲ್ಲ. ಆದರೆ ಅಮೇರಿಕೆಯ 'ಮಾರ್ತಾ ಎಸ್ಟನ್' ಒಂದು ಯಕ್ಷಗಾನದಲ್ಲಿ ಕುಣಿದಾಗ ನಮ್ಮ ಜನರು ಆಶ್ಚರ್ಯ ವ್ಯಕ್ತಪಡಿಸಿದರು. ಅವರಿಗೆ ತಮ್ಮ ಕಲೆಯ ಬಗ್ಗೆ ಒಂದಿಷ್ಟು ಅಭಿಮಾನ ಮೂಡಿರಬೇಕು."[2]

ಪುರುಷ ಪಾತ್ರದಷ್ಟೇ ಸ್ತ್ರೀ ಪಾತ್ರವೂ ಕೂಡಾ ಅವಶ್ಯಕವಾಗಿದೆ. ಆದರೆ ಪುರುಷರೆ ಗಡ್ಡಮೀಸೆಗಳನ್ನು ಬೋಳಿಸಿಕೊಂಡು ಎದೆಗೆ ಏನನ್ನೋ ಕಟ್ಟಿಕೊಂಡು ಸ್ತ್ರೀ ಪಾತ್ರಗಳನ್ನು ಮಾಡಿ ಸೈ ಎನಿಸಿಕೊಳ್ಳುತ್ತಿದ್ದರು. ಒಂದು ಕಾಲಕ್ಕೆ ರಂಗಭೂಮಿ ಗಂಡಸರ ಕುಸ್ತಿಯ ಗರಡಿಮನೆಯಾಗಿತ್ತು. ಉತ್ತರ ಕರ್ನಾಟಕದ ಕಂಪನಿ ನಾಟಕಗಳಲ್ಲಿ ಏಣಗಿ ಬಾಳಪ್ಪನವರು, ಮಲ್ಲಿಕಾರ್ಜುನ ಮನಸೂರು, ಹಮ್ಮಿಗಿ ನೀಲಕಂಠಪ್ಪ, ಬಸವರಾಜ ಮನಸೂರು ಜಾಲೀಹಾಳ ವೀರಯ್ಯ ಮುಂತಾದವರು ಸ್ತ್ರೀಪಾತ್ರಗಳನ್ನು ಮಾಡಿ ಬೇಷ್ ಎನಿಸಿಕೊಂಡದ್ದುಂಟು.

ನಮ್ಮ ವೃತ್ತಿರಂಗಭೂಮಿಗೆ ತನ್ನದೇ ಆದಂತ ಒಂದು ಭವ್ಯ ಪರಂಪರೆ ಇದೆ. ರಂಗಭೂಮಿ ಎಂದರೆ ಅದೊಂದು ಸಾಂಸ್ಕೃತಿಕ ವಿಶ್ವವಿದ್ಯಾಲಯ, "ಸ್ತ್ರೀಯು ಪುರುಷ ವೇಷದಲ್ಲಿ ಅನ್ಯರ ಕಣ್ಣಿಗೆ ಹೇಗೆ ರಂಜಿಸಲಾರಳೋ ಹಾಗೆಯೇ ಸ್ತ್ರೀವೇಷವನ್ನು ಧರಿಸುವ ಗಂಡಸೂ ಅರ್ಧ ಪ್ರಪಂಚಕ್ಕೆ ಅಸಮಾಧಾನವನ್ನು ಕಲ್ಪಿಸುವರು, ಸ್ತ್ರೀ ಪಾತ್ರವನ್ನು ಸ್ತ್ರಿಯೇ ವಹಿಸಿ ನಿರ್ವಹಿಸುವಷ್ಟು ಚೆನ್ನಾಗಿ ಯಾವ ಪುರುಷನೂ ನೆರವೇರಿಸಲಾರನೆಂಬುದನ್ನು ಸ್ತ್ರೀ ಪುರುಷರ ಪ್ರಕೃತಭೇದದಿಂದಲೇ ತಿಳಿಯಬಹುದು."[3]

ನೈತಿಕತೆಯನ್ನೇ ನೆಪಮಾಡಿಕೊಂಡು ಮಹಿಳೆಯರನ್ನು ನೇಪಥ್ಯಕ್ಕೆ ಸರಿಸಿದರೆ ಇಲ್ಲೊಂದು ಪ್ರಶ್ನೆಮೂಡುವುದು ಸಹಜ. ನೈತಿಕತೆಯೆನ್ನುವುದು ಸ್ತ್ರೀಗೆ ಮಾತ್ರ ಸೀಮಿತವೇ? ಪುರುಷರಿಗಿಲ್ಲವೇ? ಅದರಲ್ಲೂ ನಾಟಕದಲ್ಲಿ ಪಾತ್ರ ಮಾಡುವ ಸ್ತ್ರೀಯರೇ ಇರಲಿ, ಪುರುಷರೇ ಇರಲಿ ಅವರು ನಿರಕ್ಷರಿಗಳು ಅವರದ್ದೊಂದು ಜಗತ್ತೇ ಬೇರೆ ಜಗವೆಲ್ಲ ಎದ್ದಿರುವಾಗ ಇವರು ಮಲಗಿರುತ್ತಾರೆ. ಇವರು ಮಲಗಿದಾಗ ಜಗತ್ತು ಎಚ್ಚರವಿರುತ್ತದೆ. ಹೀಗಾಗಿ ಜಗತ್ತನ್ನು ತಿಳಿದುಕೊಳ್ಳುವ ಪ್ರಯತ್ನ ಅವರು ಮಾಡಲಿಲ್ಲ. ಅವರನ್ನು ತಿಳಿದುಕೊಳ್ಳುವ ಪ್ರಯತ್ನ ನಾವು ಮಾಡಲಿಲ್ಲ. ನೈತಿಕತೆಯೊಂದನ್ನೇ ಮುಂದುಮಾಡಿ ಇವರಾ!

---

[2] ಜಾನಪದ ಜಯಂತಿ ನಿಂಗಣ್ಣ ಸಣ್ಣಕ್ಕಿ ಪುಟ-96

[3] ದಿ. ಕರ್ನಾಟಕ ಥೇಟರ್ ಡಾ. ಎಚ್. ಕೆ. ರಂಗನಾಥ ಪುಟ. 168-170

ನಾಟಕದವರು ಎನ್ನುವಂತೆ ತಿರಸ್ಕಾರ ಮನೋಭಾವ ಬೆಳೆಯಿಸಿಕೊಂಡು ಬಂದೆವು. ಪುರುಷರು ಮಹಿಳೆಯರನ್ನು ರಂಗಭೂಮಿಯಿಂದ ದೂರವಿರಿಸಿದರೆ ಅಥವಾ ನಮ್ಮೊಂದಿಗೆ ನೀವು ಬರಬೇಡಿ ಎಂದು ಅಧಿಕಾರ ಚಲಾಯಿಸಿದರೆ, ಮಹಿಳೆಯರೂ ಕೂಡಾ ನಿಮ್ಮೊಂದಿಗೆ ನಾವು ಬರುವದಿಲ್ಲವೆಂದು ನಿಮ್ಮ ನೆರಳಿಲ್ಲದೆ ನಾವು ಬದುಕಬಲ್ಲೆವು ಎಂದು ಸ್ವಾಭಿಮಾನದಿಂದ ಬದುಕಿದ ಮಹಿಳೆಯರ ಉದಾಹರಣೆ ನಮ್ಮ ಕಣ್ಣಮುಂದಿದೆ. ಉತ್ತರ ಕರ್ನಾಟಕದ ಲಕ್ಷ್ಮೇಶ್ವರದ ಖ್ಯಾತ ಗ್ವಾಲೇರ ಘರಾಣಾದ ಅಭಿಜಾತ ಗಾಯಕಿ ಬಚ್ಚಾಸಾನಿ 1908ರಲ್ಲಿ 'ಸ್ತ್ರೀ ನಾಟಕ ಮಂಡಳಿಯನ್ನು' ಕಟ್ಟಿ ಗೇಟ್ ಕೀಪರನಿಂದ ನಾಟಕದ ಪಾತ್ರಗಳವರೆಗೆ ಎಲ್ಲರೂ ಮಹಿಳೆಯರೇ ಪುರುಷರ ಪ್ರಾಬಲ್ಯದಲ್ಲಿದ್ದ ರಂಗಭೂಮಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಸಂಘದ ಒಡತಿಯಾಗಿ ತನ್ನ ಕುಟುಂಬದ ಸದಸ್ಯರೊಂದಿಗೆ ಸಂಘವನ್ನು ಸುಮಾರು ವರ್ಷಗಳವರೆಗೆ ನಡೆಸಿಕೊಂಡು ಬರುತ್ತಾಳೆ.

ಪವಿತ್ರ ಅಪವಿತ್ರ ಎಂಬ ಪ್ರಶ್ನೆ ಎದುರಾದಾಗ ಕೇವಲ ಮಹಿಳೆಯನ್ನೇ ಮಾನದಂಡವನ್ನಾಗಿ ಮಾಡುವುದು ಸರಿಯೇ? ಈ ವಿಷಯದಲ್ಲಿ ಯಾರು ಹೆಚ್ಚು ಯಾರು ಕಡಿಮೆ ಎಂದು ಗೆರೆಕೊರೆಯುವದರಿಂದ ಯಾವ ಪ್ರಯೋಜನವೂ ಇಲ್ಲ. ವ್ಯಕ್ತಿಯ ಪ್ರತಿಭೆಗೆ, ನಟನೆಗೆ, ಕಲೆಗೆ ಬೆಲೆಕೊಡಬೇಕೇ ಹೊರತು ಹೆಣ್ಣು ಗಂಡಿನ ಸಂಬಂಧಕ್ಕಲ್ಲ. ರಂಗದಿಂದ ಸ್ತ್ರೀಯರನ್ನು ದೂರವಿಡಲು ಪುರುಷರಿಗೊಂದು ನೆಪಬೇಕಿತ್ತು ಅಷ್ಟೇ. ರಂಗಭೂಮಿಗೆ ಮಹಿಳೆಯರ ಪ್ರವೇಶವಾದರೆ ಎಲ್ಲಿ ತಮ್ಮ ಅರ್ಧನಾರೀಶ್ವರಕ್ಕೆ ಕುತ್ತು ಬರುವುದೋ ಎಂಬ ಭಯವೂ ಇದ್ದಿರಬಹುದು.

ಇಂಥ ಒಂದು ಸಂದಿಗ್ಧ ಸ್ಥಿತಿಯಲ್ಲಿ ಪ್ರಗತಿಪರ ಮನೋಭಾವದ ಶಿವಮೂರ್ತಿಸ್ವಾಮಿ ಕಣಬರಗಿಮಠ ಅವರು ಒಮ್ಮೆ ಕೌಜಲಗಿ ನಿಂಗವ್ವನ ಪಾರಿಜಾತ ಆಟ ನೋಡಿ ಸ್ತ್ರೀ ಪಾತ್ರಕ್ಕೆ ನ್ಯಾಯಸಲ್ಲಬೇಕಾದರೆ ಸ್ತ್ರೀಯರೇ ಬೇಕು ಎಂಬ ತೀರ್ಮಾನಕ್ಕೆ ಬರುತ್ತಾರೆ. ಕಂಪನಿಯ ನಟರ ಮುಂದೆ ಪ್ರಸ್ತಾಪ ಮಾಡಿದಾಗ ಸ್ತ್ರೀ ಪಾತ್ರದ ಪಾತ್ರಧಾರಿಗಳು ಎಲ್ಲಿ ತಮ್ಮ ಅಭಿನಯಕ್ಕೆ ಧಕ್ಕೆ ಬರುವುದೋ ಎಂಬ ಅಳುಕಿನಿಂದ, ಅನೈತಿಕತೆಗೆ ಎಡೆಮಾಡಿಕೊಟ್ಟಂತಾಗುತ್ತದೆ. ಕಂಪನಿಯ ಸ್ವಾಸ್ಥ್ಯ ಹದಗೆಡಬಹುದು ಎಂದು ತಲೆಗೊಂದರಂತೆ ಮಾತನಾಡಿದರು. ಆದರೂ ಶಿಸ್ತಿಗೆ ಹೆಸರಾದ ಶಿವಮೂರ್ತಿಸ್ವಾಮಿಗಳು ಯಾವುದನ್ನೂ ಲೆಕ್ಕಿಸದೆ ಸ್ತ್ರೀ ಪಾತ್ರಧಾರಿಗಳನ್ನು ತರಿಸಲು ನಿರ್ಧರಿಸಿದರು. ಇವರ ಆಶೆ ಕೈಗೂಡಿತು. ಬಳ್ಳಾರಿಯಿಂದ ಲಕ್ಷ್ಮವ್ವ ಎಂಬ ಕಲಾವಿದೆಯನ್ನು ಕರೆಸಿದರು. ಇವಳು ಸ್ಥೂಲ ಮೈಕಟ್ಟಿನವಳಾದ ಕಾರಣ ಅವಳಿಗೆ ಬೇರೆ ಪಾತ್ರ ಮಾಡಲು ಹೇಳಿ, ನಾಯಕಿ ನಟಿಯ ಪಾತ್ರಕ್ಕಾಗಿ ಹಂಸನೂರಿನ ದಾಸರ ಮನೆತನದಿಂದ ಬಂದಂತ ಇವಳಿಗೆ ಕಂಠ ಶ್ರೀಮಂತಿಕೆಯ ಜೊತೆಗೆ ಸಂಗೀತದ ಜ್ಞಾನವೂ ಇತ್ತು. ಆ ಕಂಪನಿಯಲ್ಲಿ ಅವಳಿಗೊಂದು

ಅವಕಾಶ ಸಿಕ್ಕಿತು. ಗುರುಲಿಂಗಪ್ಪ ಗೊಂಬಿ ಇವರ ನೆರವಿನಿಂದ ಎಲ್ಲೂಬಾಯಿ ಗುಳೇದಗುಡ್ಡ ನಾಟಕ ರಂಗಕ್ಕೆ ಪಾದಾರ್ಪಣೆ ಮಾಡಿದ ಮೊದಲ ಮಹಿಳೆ. ಇದೊಂದು ಗಮನಾರ್ಹವಾದ ಕ್ರಾಂತಿಕಾರಕ ಬದಲಾವಣೆ.

ವೃತ್ತಿರಂಗಭೂಮಿಯ ಪ್ರಾರಂಭಿಕ ಹಂತದಲ್ಲಿ ಸ್ತ್ರೀಯರು ನಟನೆ ಮಾಡುವುದೊತ್ತಟ್ಟಿಗಿರಲಿ, ನಾಟಕಗಳನ್ನು ನೋಡಲು ಸಹ ಹೋಗುತ್ತಿರಲಿಲ್ಲ. ರಂಗಭೂಮಿ ಒಂದು ಕಾಲಕ್ಕೆ ಪುರುಷರ ಅಖಾಡಾವಾಗಿತ್ತು. ಯಾವಾಗ ಎಲ್ಲೂಬಾಯಿ ಗುಳೇದಗುಡ್ಡ ಶಿವಮೂರ್ತಿಸ್ವಾಮಿ ಕಣಬರಗಿಮಠ ಅವರ 'ಶ್ರೀ ಕಾಡಸಿದ್ದೇಶ್ವರ ಸಂಗೀತ ನಾಟಕ ಮಂಡಳಿ'ಯಲ್ಲಿ ನಟನೆ ಮಾಡಲು ಪ್ರಾರಂಭ ಮಾಡಿದಳೋ ಆಗ ವೃತ್ತಿರಂಗಭೂಮಿಗೆ ಮಹಿಳೆಯರ ಒಂದು ಮಹಾಪೂರವೇ ಹರಿದು ಬಂತು. ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಎಲ್ಲೂಬಾಯಿ ಗುಳೇದಗುಡ್ಡ ಸಾಕುಮಗಳು ಗಂಗೂಬಾಯಿ ಗುಳೇದಗುಡ್ಡ, ಲಕ್ಷ್ಮೇಶ್ವರದ ಬಚ್ಚಾಸಾನಿ, ಸೋನುಬಾಯಿ ದೊಡ್ಡಮನಿ, ರಹೆಮಾನವ್ವ ಕುಕನೂರ, ವಜೀರಬಾಯಿ, ಅಮೀರಬಾಯಿ ಕರ್ನಾಟಕಿ, ಗೋಹರಜಾನ ಕರ್ನಾಟಕಿ, ಜುಬೇದಾಬಾಯಿ ಸವಣೂರ, ಮರ್ದಾನ್‌ಜಾನ್, ಕಾಶೀಬಾಯಿ ನಾಲ್ವತ್ತವಾಡ, ಹೀಗೆ ಈ ಪಟ್ಟಿ ಇನ್ನು ಹನುಮಂತನ ಬಾಲದಂತೆ ಬೆಳೆಯುತ್ತದೆ. ಇದನ್ನು ನೋಡಿದರೆ ಅವಕಾಶ ಸಿಕ್ಕರೆ ಪ್ರತಿಭೆಗಳಿಗೆ ಕೊರತೆಯಿಲ್ಲವೆಂಬುದು ಸಾಬೀತಾಗುತ್ತದೆ. ಒಬ್ಬಿಬ್ಬರನ್ನು ಬಿಟ್ಟರೆ ಬಹಳಷ್ಟು ನಟಿಯರು ಸುಶಿಕ್ಷಿತರೂ ಅಲ್ಲ. ಹಾಗೂ ಸ್ಥಿತಿವಂತ ಮನೆತನದಿಂದ ಬಂದವರೂ ಅಲ್ಲ. ಶ್ರದ್ಧೆ, ಪರಿಶ್ರಮದಿಂದ ನಟನೆಯನ್ನು ನಂಬಿಕೊಂಡು ಹಂತಹಂತವಾಗಿ ಮೇಲೇರಿದವರು. ತಮ್ಮ ಅದ್ಭುತ ನಟನೆಯಿಂದ ಪ್ರೇಕ್ಷಕರ ಮನದಲ್ಲಿ ಹಚ್ಚ ಹಸಿರಾಗಿ ಉಳಿದವರು. ವ್ಯವಹಾರ ಕೌಶಲ್ಯದಿಂದ ಕಂಪನಿಯ ಒಡತಿಯರಾಗಿಯೂ ಮಿಂಚಿದರು ಕೆಲ ನಟಿಯರು. ಮಹಿಳೆಗೆ ಅವಕಾಶ ಸಿಕ್ಕರೆ ಏನು ತಾನೆ ಮಾಡುವುದಿಲ್ಲ? ಏನೆಲ್ಲಾ ಮಾಡಬಲ್ಲಳು ಎಂಬುದಕ್ಕೆ ಅದೆಷ್ಟೋ ಕಲಾವಿದೆಯರು ಸಾಕ್ಷಿಯಾಗಿದ್ದಾರೆ.

ನಮ್ಮ ವೃತ್ತಿರಂಗಭೂಮಿಗೆ ಅಂಥ ಪ್ರಾಚೀನ ಇತಿಹಾಸವೇನೂ ಇರದಿದ್ದರೂ, ಮಹಿಳೆಯರಲ್ಲಿ ಪ್ರತಿಭೆ ಇದ್ದಾಗ್ಯೂ ಎಲ್ಲಾ ರಂಗಗಳಂತೆ ಸಾಂಸ್ಕೃತಿಕ ರಂಗದಲ್ಲಿಯೂ ಮಹಿಳೆ ನಿರ್ಲಕ್ಷಕ್ಕೆ ಒಳಗಾಗಿದ್ದಾಳೆ. ಅದಕ್ಕೆ ಕಾರಣವೂ ಇರಬಹುದು. ರಂಗಭೂಮಿ ಎಂದರೆ ಅಲ್ಲಿ ವಿಭಿನ್ನ ಸ್ವಭಾವದ ವಿಭಿನ್ನ ಅಭಿರುಚಿಯ ಕುಡಿತ, ಜೂಜು. ಹೀಗೆ ದುಶ್ಚಟಗಳ ದಾಸರಾದ ನಟರು. ಅಂಥವರ ಮಧ್ಯೆ ಮಹಿಳೆಯರು ಪಾತ್ರ ಮಾಡುವುದು ಸಭ್ಯತೆಯ ಲಕ್ಷಣವಲ್ಲ ಎಂಬ ಇರ್ರಾದೆಯೂ ಇರಬಹುದು. ಅದಕ್ಕಾಗಿಯೇ ಅದೆಷ್ಟೋ

ಪುರುಷಪಾತ್ರಧಾರಿಗಳು ಸ್ತ್ರೀ ಪಾತ್ರಗಳನ್ನು ನಿಭಾಯಿಸಿಕೊಂಡು ಹೋಗುತ್ತಿದ್ದರು. ಸ್ತ್ರೀ ಸಹಜ ಹಾವಭಾವಗಳನ್ನು ಅವರು ವ್ಯಕ್ತಪಡಿಸಿದರೂ ಯಾವದೋ ಕೊರತೆ ಕಾಣುತ್ತಿತ್ತು. ಯಾವಾಗ ಮಹಿಳೆಯರು ಸ್ತ್ರೀ ಪಾತ್ರಗಳನ್ನು ಮಾಡಲು ಪ್ರಾರಂಭ ಮಾಡಿದರೋ? ವೃತ್ತಿರಂಗಭೂಮಿಗೆ ಮಹಿಳೆಯರ ಪ್ರವೇಶವಾಯಿತೋ ಆವಾಗ ನೈಜತೆಯ ಜೊತೆಗೆ ವಿಶೇಷ ಆಕರ್ಷಣೆಯೂ ಉಂಟಾಯಿತು. ಅಲ್ಲದೆ ಉತ್ತರ ಕರ್ನಾಟಕದ ನಾಟಕ ಕಂಪನಿಗಳು ಮಹಿಳೆಯರನ್ನು ಸಮರ್ಥವಾಗಿ ದುಡಿಸಿಕೊಳ್ಳಲು ಪ್ರಾರಂಭ ಮಾಡಿದವು. ಯಾವಾಗ ರಂಗಭೂಮಿಗೆ ಮಹಿಳೆಯರ ಪ್ರವೇಶವಾಯ್ತೋ ಕಂಪನಿಗಳ ಗಲ್ಲಾ ಪೆಟ್ಟಿಗೆ ಭರಪೂರ ಆದುದಲ್ಲದೇ ಒಂದು ಕಂಪನಿಕಟ್ಟಿಕೊಂಡು ಕೈ ಬಾಯಿ ಸುಟ್ಟುಕೊಳ್ಳುತ್ತಿರುವಂತಹ ಮಾಲೀಕರು ಮೂರು ಮೂರು ಕಂಪನಿಗಳ ಒಡೆಯರಾದರು. ಈ ಸತ್ಯವನ್ನು ಮರೆಮಾಚಲು ಅದೇಗೆ ಸಾಧ್ಯ? ಅಷ್ಟೇ ಅಲ್ಲ ಯಾವಾಗ ಮಹಿಳೆಯರು ರಂಗಭೂಮಿಗೆ ಕಾಲಿಟ್ಟರೋ ಆವಾಗ ವೃತ್ತಿರಂಗಭೂಮಿ ಬಣ್ಣವೇ ಬದಲಾಯಿತು ಎಂದು ಹಿರಿಯ ರಂಗಕರ್ಮಿ, ನಟ, ಹಾಡುಗಾರ ಏಣಗಿ ಬಾಳಪ್ಪನವರೇ ಈ ಮಾತನ್ನು ಹೇಳುತ್ತಾರೆ.

ಮಹಿಳೆಗೂ ಅವಕಾಶ ಸಿಕ್ಕರೆ ನಾವು ಯಾವುದರಲ್ಲಿಯೂ ಕಡಿಮೆಯಿಲ್ಲ ಎಂಬುದನ್ನು ನಟಿಯರಾಗಿ, ಸಂಗೀತಗಾರರಾಗಿ, ಸಂಘದ ಒಡತಿಯರಾಗಿ, ಹಿನ್ನೆಲೆವಾದಕರಾಗಿ ತಮ್ಮ ಬಹುಮುಖ ವ್ಯಕ್ತಿತ್ವವನ್ನು ತೋರಿಸುವುದರ ಜೊತೆಗೆ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ. ಆದರೆ ಅವರ ಬದುಕು ಮಾತ್ರ ಶ್ರೀಮಂತವಾಗಲಿಲ್ಲ. ಅದೊಂದು ವಿಷಾದಕರ ಸಂಗತಿ.

ಒಟ್ಟಾರೆ ಮಹಿಳೆಯರ ಪ್ರವೇಶದಿಂದ ಉತ್ತರ ಕರ್ನಾಟಕದ ರಂಗಭೂಮಿ ಕಳೆಕಟ್ಟಿದ್ದು ನಿಜ. ಚಿತ್ರಜಗತ್ತು ಇರಬಹುದು ಕಿರುತರೆ ಆಗಿರಬಹುದು. ಅದಕ್ಕೆಲ್ಲ ತಳಪಾಯ ರಂಗಭೂಮಿ. ರಂಗಭೂಮಿ ಕುಡಿಗಳೇ ಚಿತ್ರಜಗತ್ತಿನಲ್ಲಿ ಹೆಮ್ಮರವಾಗಿ ಬೆಳೆದು ಕಲೆಯ ರಸದೌತಣವನ್ನು ಉಣಬಡಿಸಿವೆ. ರಂಗಭೂಮಿ ಮಾತೃಸ್ಥಾನದಲ್ಲಿ ನಿಂತು ಅಸಂಖ್ಯ ನಟಿಯರನ್ನು ಕೈಹಿಡಿದು ನಡೆಸಿದೆ.

## ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಸ್ಥಿತಿಗತಿ:

ನಮ್ಮ ಸಂಸ್ಕೃತಿಯ ವಾರಸುದಾರಳು ಹೆಣ್ಣು. ನಮ್ಮ ಜನಪದ ಹಾಡುಗಳನ್ನು ಹಬ್ಬ ಹರಿದಿನಗಳನ್ನು, ಕಸೂತಿ, ರಂಗೋಲಿ ಕಲೆಯನ್ನು ಇನ್ನು ಜೀವಂತವಾಗಿ ಇಟ್ಟವಳು ಅವಳೇ. ನಮ್ಮ ಸಂಸ್ಕೃತಿಯ ಪ್ರತಿರೂಪವೇ ಹೆಣ್ಣು ಎಂದರೆ ತಪ್ಪಾಗಲಿಕ್ಕಿಲ್ಲ. ಆದರೂ ಏನೆಲ್ಲಾ ಕಥೆ, ಕಾವ್ಯಗಳನ್ನು ಕಟ್ಟಿ ದೈಹಿಕವಾಗಿ, ಮಾನಸಿಕವಾಗಿ ಇಲ್ಲದ ಒತ್ತಡಗಳನ್ನು ಅವಳ ಮೇಲೆ ಹೇರುತ್ತಲೇ ಬಂದಿದೆ ಈ ಸಮಾಜ.

ಪ್ರಾಚೀನ ಕಾಲದಲ್ಲಿ ಮಹಿಳೆಯರ ಸ್ಥಿತಿ ಉತ್ತಮವಾಗಿತ್ತು. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ರಂಗದಲ್ಲಿ ಮಹಿಳೆ ತನ್ನದೊಂದು ನೆಲೆಯನ್ನು ಕಂಡುಕೊಂಡಿದ್ದಳು ಎಂದು ನಾವು ಸಮರ್ಥನೆ ಮಾಡಿಕೊಳ್ಳುತ್ತಿದ್ದೇವೆ. ಆದರೆ ಹೊಟ್ಟೆ ತುಂಬಿದವರ ಕುರಿತು ಆಲೋಚನೆ ಮಾಡುವುದಕ್ಕಿಂತ, ಹಸಿದವರ ಬಗ್ಗೆ ಆಲೋಚನೆ ಮಾಡಬೇಕಾಗಿದೆ.

ಕರ್ನಾಟಕದ ವೃತ್ತಿರಂಗಭೂಮಿ ತನ್ನ ಉತ್ತುಂಗ ಶಿಖರಕ್ಕೇರಬೇಕಾದರೆ ಸುಮಾರು ನೂರು ವರ್ಷಗಳೇ ಬೇಕಾದವು. ಇಷ್ಟು ಸುದೀರ್ಘ ಅವಧಿ ತೆಗೆದುಕೊಂಡು ಬೆಳೆದು ನಿಂತ ಈ ವೃತ್ತಿರಂಗಭೂಮಿ ತನ್ನ ಕ್ಷೇತ್ರಕ್ಕೆ ಪುರುಷರಂತೂ ಸರಿಯೇ ಸರಿ. ಮಹಿಳೆಯರನ್ನು ವ್ಯಾಪಕ ರೀತಿಯಲ್ಲಿ ಸೆಳೆಯಿತು. ಪ್ರಾರಂಭದಲ್ಲಿ ಒಂದೋ ಎರಡೋ ಹುಟ್ಟಿಕೊಂಡ ಈ ನಾಟಕ ಕಂಪನಿಗಳ ಸಂಖ್ಯೆ ವರುಷದಿಂದ ವರುಷಕ್ಕೆ ಬೆಳೆಯ ತೊಡಗಿತು. ಹೀಗಾಗಿ ಅಪಾರ ಸಂಖ್ಯೆಯಲ್ಲಿ ಮಹಿಳೆಯರು ಈ ಕ್ಷೇತ್ರಕ್ಕೆ ಧುಮುಕತೊಡಗಿದರು. ಹೀಗೆ ಹುಟ್ಟಿಕೊಂಡ ನಾಟಕ ಕಂಪನಿಗಳು ಊರಿಂದೂರಿಗೆ ಅಲೆಯುತ್ತಿದ್ದವು. ಗೊತ್ತಿರುವ ನಾಟಕಗಳನ್ನಾಡುತ್ತಿದ್ದವು. (ಕಲೆಕ್ಷನ್) ಕಡಿಮೆಯಾದಂತೆ ಮತ್ತೊಂದು ಊರಿಗೆ ಪ್ರಯಾಣ ಬೆಳೆಸಿ ಅಲ್ಲಿ ನಾಟಕಗಳನ್ನಾಡತೊಡಗಿದರು. ಹೀಗೆ ಕಂಪನಿಗಳು ತಮ್ಮ ಆದಾಯಕ್ಕನುಸಾರವಾಗಿ ಊರಿಂದೂರಿಗೆ ಅಲೆಯತೊಡಗಿದಂತೆಲ್ಲ ಆ ಕಂಪನಿಯ ಕಲಾವಿದರು, ಕಲಾವಿದೆಯರ ಕುಟುಂಬಗಳೂ ಊರೂರು ಅಲೆಯಬೇಕಾಯಿತು. ಹೀಗಾಗಿ ವೃತ್ತಿರಂಗಭೂಮಿಯಲ್ಲಿ ತೊಡಗಿಸಿ ಕೊಂಡವರೆಲ್ಲಾ ಅಲೆಮಾರಿಗಳಂತಾಗಿ ಬಿಟ್ಟರು. ಹೀಗೆ ಅಲೆಮಾರಿಗಳಾದ ಪ್ರತಿಯೊಬ್ಬರಿಗೂ ಒಂದು ಕುಟುಂಬವೆಂದಿರುತ್ತಿತ್ತು. ಈ ಕುಟುಂಬದಲ್ಲಿ ಗಂಡ ಹೆಂಡತಿ, ತಂದೆ–ತಾಯಿ–ಮಕ್ಕಳು ಹೀಗೆಲ್ಲ ಇರುತ್ತಿದ್ದರು. ಹೀಗೆ ಹುಟ್ಟಿಕೊಂಡ ನಾಟಕ ಕಂಪನಿಗಳು ಕರ್ನಾಟಕದಲ್ಲೇ 35 ರಿಂದ 40 ಕಂಪನಿಗಳಿದ್ದರೆ ಅದರಲ್ಲಿ 30 ಕಂಪನಿಗಳು ಉತ್ತರ ಕರ್ನಾಟಕಕ್ಕೆ ಸೇರಿದ್ದವು. ಒಂದೊಂದು ಕಂಪನಿಗಳಲ್ಲಿ ಕನಿಷ್ಠ

ನಾಲ್ವರಾದರೂ ಮಹಿಳಾ ಕಲಾವಿದರಿರುತ್ತಿದ್ದರು. 100 ರಿಂದ 150 ರೂ. ವರೆಗೆ ದುಡಿಯುತ್ತಿದ್ದರು. ಕಂಪನಿ ನಿಂತಲ್ಲಿ ಇವರೂ ನಿಲ್ಲುವದೂ, ಕಂಪನಿ ಹೋದಲ್ಲಿ ಇವರೂ ಹೋಗುವುದು, ಹೀಗೆ ಇವರದೊಂದು ಅಲೆಮಾರಿ ಬದುಕಾಯಿತು. ಇದರಿಂದಾಗಿ ಈ ಕುಟುಂಬದ ಮಕ್ಕಳು ಶಿಕ್ಷಣ ಮತ್ತು ಸಮಾಜದಿಂದ ಸಿಕ್ಕುವ ಇನ್ನಿತರ ಸೌಲಭ್ಯಗಳಿಂದ ವಂಚಿತರಾಗತೊಡಗಿದರು. ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆಯದೆ ಇವರು ಭಿನ್ನರಾಗಿ ಉಳಿಯತೊಡಗಿದರು.

ಇಂದು ಕಾಲ ಬದಲಾಗಿದೆ. ಅಂದು ಕೆಲವೇ ನಗರಗಳಿಗೆ ಸೀಮಿತವಾಗಿದ್ದ ಚಿತ್ರಮಂದಿರಗಳೂ ಸಣ್ಣ ಪುಟ್ಟ ಊರುಗಳಿಗೆ ತಲುಪಿವೆ. ಅಷ್ಟೇ ಅಲ್ಲ; ವಿದ್ಯುನ್ಮಾನ ಮಾಧ್ಯಮಗಳಾದ ದೂರದರ್ಶನ ಮತ್ತು ಇತರ ಚಾನಲ್ಗಳು ನೀಡುವ ಮನೋರಂಜನೆಯೂ ಹೆಚ್ಚಾಗಿದೆ. ಹೀಗಾಗಿ ಜನ ನಾಟಕ ನೋಡುವುದಿರಲಿ ಚಿತ್ರಮಂದಿರಗಳಿಗೂ ಹೋಗುವುದು ಕಡಿಮೆಯಾಗಿದೆ. ಇದರ ಪರಿಣಾಮವಾಗಿ ವೃತ್ತಿರಂಗಭೂಮಿಯ ಕಂಪನಿಗಳು ದಡದಡನೆ ಮುಚ್ಚಿಹೋಗಿವೆ. ಒಂದು ಕಾಲದಲ್ಲಿ 35–40 ಕಂಪನಿಗಳಿದ್ದರೆ ಇಂದು ಇಡೀ ಕರ್ನಾಟಕದಲ್ಲಿ ಉಳಿದಿರುವ ಕಂಪನಿಗಳ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. ಹೀಗಾಗಿ ಮುಚ್ಚಿರುವ ಎಲ್ಲಾ ಕಂಪನಿಗಳಲ್ಲಿ ದುಡಿಯುತ್ತಿರುವ ಕಲಾವಿದರೆಲ್ಲಾ ಬೀದಿ ಪಾಲಾಗಿದ್ದಾರೆ. ಅದರಲ್ಲೂ ಅಭಿನಯಿಸುವುದೊಂದನ್ನು ಬಿಟ್ಟು ಬೇರೇನೂ ಗೊತ್ತಿರದ ಮಹಿಳೆಯರ ಸ್ಥಿತಿ ಚಿಂತಾಜನಕವಾಗಿದೆ.

ಇವರ ಬದುಕೇ ಒಂದು ಬೂದಿಮುಚ್ಚಿದ ಕೆಂಡ. ರಂಗದ ಮೇಲೆ ಎಲ್ಲರನ್ನು ನಕ್ಕು ನಗಿಸುವ ಇವರ ಬದುಕು ಮಾತ್ರ ಹಸನಾಗಲಿಲ್ಲ. ಸಂತೋಷ ನೆಮ್ಮದಿ ಅಷ್ಟಕ್ಕಷ್ಟೇ. ನಾನು ಅದೆಷ್ಟೋ ಹಿರಿಯ ಕಲಾವಿದೆಯರನ್ನು ಭೇಟಿಯಾದಾಗ ಬಹಳಷ್ಟು ನಟಿಯರ ಮೊಗದಲ್ಲಿ ಅವರು ಬಾಯಿಬಿಟ್ಟು ಹೇಳದಿದ್ದರೂ ಏನೋ ಮಡುಗಟ್ಟಿದ ನೋವು ಅವರ ಮುಖದಲ್ಲಿ ಎದ್ದುಕಾಣುತ್ತಿತ್ತು. ನಟನೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಇವರಿಗೆ ಅದನ್ನು ಬಿಟ್ಟರೆ ಮತ್ತೊಂದು ಬದುಕುವ ದಾರಿ ಗೊತ್ತಿಲ್ಲ. ನೋವು ನಲಿವಿನಲ್ಲಿಯೂ ರಂಗಭೂಮಿಯನ್ನೆ ನಂಬಿಕೊಂಡವರು. ಗಂಡಾಂತರ ಪ್ರಸಂಗದಲ್ಲಿಯೂ ಆಘಾತಕಾರಿ ಸಂದರ್ಭದಲ್ಲಿಯೂ ಅವತ್ತಿನ ಆಟಕ್ಕೆ ಇವರು ಚಾಲನೆ ನೀಡಲೇಬೇಕು. ಹೆತ್ತವರ, ಮಕ್ಕಳ ಬಂಧುಬಳಗದವರ ಕರ್ಣಕಠೋರ ಸುದ್ದಿಯನ್ನು ಕೇಳಿಯೂ ಆ ಕ್ಷಣ ಎಲ್ಲವನ್ನು ಮರೆತು ಪರಕಾಯ ಪ್ರವೇಶ ಮಾಡುವ ಅವರ ಧೈರ್ಯ ಮೆಚ್ಚಲೇಬೇಕು. 'ಗೇಣು ಹೊಟ್ಟೆಗಾಗಿ ಚೋಟು ಬಟ್ಟೆಗಾಗಿ' ನಟನೆಯನ್ನೇ ನಂಬಿ ಬದುಕಿದ ಬಹಳಷ್ಟು ಸಹೋದರಿಯರು ಮನಬಿಚ್ಚಿ ಮಾತನಾಡಿದ್ದುಂಟು. "ಹರೇದಾಗ ರೊಕ್ಕೊ ಇತ್ತು ಸೊಕ್ಕೂ ಇತ್ತರಿ" ದುಡಿದಿದ್ದನ್ನು ಹ್ಯಾಂಗ ಉಳಿತಾಯ ಮಾಡಬೇಕನ್ನೂದು

ಗೊತ್ತಾಗಲಿಲ್ಲರೀ ಅನ್ನೋದನ್ನ ಕೇಳಿದಾಗ ಅವರ ವ್ಯವಹಾರ ಕೌಶಲ್ಯದ ಕೊರತೆ ಎದ್ದು ಕಾಣುತ್ತಿತ್ತು. "ಇದ್ದಾಗ ದುಂದು ಇಲ್ಲದಾಗ ಸುಂದು" ಈ ಸ್ಥಿತಿ ಹಲವು ನಟಿಯರದು. ಬಣ್ಣದ ಗೀಳು ಅಂಟಿಸಿಕೊಂಡ ಅದೆಷ್ಟೋ ನಟಿಯರು ಮನೆಬಿಟ್ಟು ಓಡಿ ಹೋದದ್ದುಂಟು. ಈ ಇಳಿಹೊತ್ತಿನಲ್ಲಿ ಸಂಬಂಧಿಕರಿಂದಲೂ ದೂರಾಗಿ ಇತ್ತ ಬಣ್ಣದ ಬದುಕಿನಿಂದಲೂ ದೂರಾಗಿ ಕೊನೆಯ ದಿನಗಳನ್ನು ಎಣಿಸುತ್ತಿರುವವರನ್ನು ಕಂಡಾಗ ಅಯ್ಯೋ ಎನಿಸದೆ ಇರದು. ಒಂದು ಕಾಲಕ್ಕೆ ತಮ್ಮ ಕಂಚಿನ ಕಂಠದಿಂದ, ಮೋಹಕ ನಗೆಯಿಂದ ಅದ್ಭುತ ನಟನೆಯಿಂದ ಅದೆಷ್ಟೋ ಪ್ರೇಕ್ಷಕರ ಹೃದಯಕ್ಕೆ ಕಿಚ್ಚು ಹಚ್ಚಿದ ಕಲಾವಿದೆಯರ ಅವಸ್ಥೆಯನ್ನು ಕಂಡು ಮರುಕ ಪಡಬೇಕೇ ಹೊರತು ಮತ್ತೇನನ್ನೂ ಮಾಡಲು ಸಾಧ್ಯವಿಲ್ಲವೇನೋ?

ಅವರೂ ಸುಶಿಕ್ಷಿತರಾಗಿದ್ದರೆ, ಅವರಲ್ಲಿಯೂ ಒಂದಿಷ್ಟು ತಿಳುವಳಿಕೆ ಇದ್ದರೆ ಬದುಕಿನ ಕೊನೆಯ ದಿನಗಳನ್ನು ಸಂತೋಷದಿಂದ ಕಳೆಯಬಹುದಾಗಿತ್ತೇನೋ? ಕೆಲ ಹಿರಿಯ ಕಲಾವಿದೆಯರಿಗೆ ತಾವು ರಂಗಭೂಮಿಯ ಕಲಾವಿದೆಯರು ಎಂದು ಹೇಳಿಕೊಳ್ಳುವ ಧೈರ್ಯವಿಲ್ಲದೆ ಮಕ್ಕಳ ಕಣ್ಣಂಜಿಕೆಯಲ್ಲಿ ಬದುಕಿನ ಬಂಡಿಯನ್ನು ಸಾಗಿಸುತ್ತಿದ್ದಾರೆ. ಕ್ಷೇತ್ರಕಾರ್ಯ ಕೈಗೊಂಡಾಗ ಇಂಥ ಸಮಸ್ಯೆಗಳು ಎದುರಾದವು. ಪ್ರೀತಿಯಿಂದ ವಿಶ್ವಾಸದಿಂದ ಅವರ ಮನವೊಲಿಸಿದಾಗ ಒಬ್ಬ ಶಿಕ್ಷಕಿ ತನ್ನ ತಾಯಿಯ ಜೊತೆಗೆ ಸಂದರ್ಶನಕ್ಕೆ ಅನುವು ಮಾಡಿಕೊಟ್ಟಳು. ಆ ತಾಯಿಯ ಮೊಗದಲ್ಲಿ ಏನೋ ಮಿಂಚು ಕಾಣಿಸಿತು. ಸಾವಿರಾರು ಮಕ್ಕಳಿಗೆ ಪಾಠ ಹೇಳಿಕೊಡುವ ಒಬ್ಬ ಶಿಕ್ಷಕಿ ತಾನು ರಂಗಭೂಮಿ ಕಲಾವಿದೆಯ ಮಗಳು ಎಂದು ಹೆಮ್ಮೆಯಿಂದ ಹೇಳಿಕೊಳ್ಳಲು ಹಿಂಜರಿಕೆ. ಸಮಾಜ ಮಹಿಳಾ ಕಲಾವಿದರನ್ನು ಯಾವ ರೀತಿ ನೋಡಿಕೊಳ್ಳುತ್ತದೆ ಎಂಬುದರ ದರ್ಶನ ನನಗಾಯ್ತು. ಅವಳೊಬ್ಬ ನೃತ್ಯಗಾರ್ತಿ. ಹಲವಾರು ಕಿರಿಯ ಕಲಾವಿದೆಯರಿಗೆ ನೃತ್ಯ ಕಲಿಸಿದ ಗುರು. ಮೇಲಾಗಿ ಒಬ್ಬ ಅದ್ಭುತ ನಟಿ. ಅವಳ ಬಣ್ಣದ ದಿನಗಳ ಪುಟಗಳನ್ನು ತಿರುವಿದಾಗ ಸಂತೃಪ್ತ ಸಂತೋಷದ ಛಾಯೆ ಅವಳ ಮೊಗದಲ್ಲಿ ಕಾಣದೇ ಇರಲಿಲ್ಲ.

ರಂಗಭೂಮಿ ನಟಿಯರೆಂದರೆ ಚಾರಿತ್ರ್ಯಹೀನರೆಂಬ ಭಾವ ಹಲವರದು. ಹೀಗಾಗಿ ಸಮಾಜದ ಕುಹಕ, ತಿರಸ್ಕಾರಕ್ಕೆ ಇವರು ಬಲಿಯಾಗುವುದು ಹೊಸತೇನಲ್ಲ. ಕೆಲ ನಟಿಯರು ತಾವು ಇಷ್ಟಪಟ್ಟವರನ್ನು ಬಾಳಸಂಗಾತಿಯನ್ನಾಗಿ ಮಾಡಿಕೊಂಡು ಆದರ್ಶ ದಂಪತಿಗಳಾಗಿ ಜೀವನವನ್ನು ನಡೆಸುತ್ತಿದ್ದಾರೆ. ಅಷ್ಟೇ ಅಲ್ಲ, 'ಭಾಗ್ಯವಂತಿ ನಾಟ್ಯಸಂಘ'ದ ಒಡತಿ ಪ್ರೇಮಾ ಬದಾಮಿ ಅವರು 2009ರಲ್ಲಿ ಐದು ಆದರ್ಶ ರಂಗಜೋಡಿ ದಂಪತಿಗಳಿಗೆ ಸನ್ಮಾನವನ್ನು ಇಟ್ಟುಕೊಂಡಿದ್ದು, ಇದಕ್ಕಿಂತ ಬಲವಾದ ಸಾಕ್ಷಿ ಇನ್ನೇನಿದೆ.

ಇಸ್ಲಾಂ ಧರ್ಮದಲ್ಲಿ ಹುಟ್ಟಿದ ಮಹಿಳೆಯರು ಧರ್ಮದ ಹಂಗು ತೊರೆದು ಕಲೆಯನ್ನು ನಂಬಿ ಬದುಕುತ್ತಿದ್ದಾರೆ. ಅಷ್ಟೇ ಅಲ್ಲ ಅದೆಷ್ಟೋ ಕಲಾವಿದೆಯರ ಮಕ್ಕಳಿಗೆ ತಮ್ಮ ಅಪ್ಪ ಯಾರೆಂದು ಗೊತ್ತಿಲ್ಲ.

'ಜಾಬಾಲಿ ಸತ್ಯಕಾಮನ' ಕಥೆ ನೆನಪಿಗೆ ಬರುತ್ತದೆ. ಇವರ ಜೀವನಕ್ಕೆ ಭದ್ರತೆ ಎಂಬುದು ಇಲ್ಲ. ಯಾವಾಗಲೂ ಅಭದ್ರತೆ ಇವರನ್ನು ಕಾಡುತ್ತದೆ. ಇವರಿಂದಲೇ ಗಲ್ಲಾ ಪೆಟ್ಟಿಗೆ ತುಂಬಿದರೂ, ಇವರ ಹೊಟ್ಟೆ ಮಾತ್ರ ತುಂಬಲಿಲ್ಲ. ಮಾಲಕ ಕೊಟ್ಟ ಸಂಬಳದಿಂದಲೇ ಇವರು ತೃಪ್ತರಾಗಬೇಕು. ಕೆಲವರಿಗೆ ರಂಗಭೂಮಿ 'ವರವೂ ಹೌದು, ಶಾಪವೂ ಹೌದು.' 'ನಾನು ಮಾತ್ರ ಬಣ್ಣದ ಮಗಳು ನೋಡ್ರಿ,' ನಾನು ಮೂರು ಸಲ ಹೃದಯಾಘಾತಕ್ಕೆ ಒಳಗಾಗೀನಿ. ಆದರೂ ನನಗ ಪಾತ್ರ ಮಾಡೋ ಹುಚ್ಚ ಮಾತ್ರ ಕಡಿಮೆ ಆಗಿಲ್ಲ. ಹೊಸಾ ನೀರು ಹರಿದು ಬರತಿರಬೇಕಾದರೆ ನಿಂತ ನೀರನ್ನು ಯಾರು ಕೇಳ್ತಾರ್ರಿ. ಹೀಗೆ ಸಂತೋಷ, ವಿಷಾದದ ಧ್ವನಿ ಒಂದೆಡೆಯಾದರೆ, ಇನ್ನೊಬ್ಬಳು ಪಾತ್ರಗಳು ನನಗ ಖುಷಿಕೊಟ್ಟಿವೆ. ಆದರೆ ರಂಗಭೂಮಿ ನನಗೆ ಖುಷಿಕೊಟ್ಟಿಲ್ಲ. ಬರೀ ನೋವು ತುಂಬಿದ ಬದುಕು ನಮ್ಮದು. ನಾವು ಸಮಾಜವನ್ನು ತಿದ್ದುತ್ತೇವೆ. ನಮ್ಮನ್ನು ತಿದ್ದುವವರ್‍ಯಾರು? ನಮ್ಮದು ಅಲೆಮಾರಿ ಬುದುಕು. ಮಕ್ಕಳಿಗೆ ಸರಿಯಾದ ಶಿಕ್ಷಣ ಕೊಡಾಕ ಆಗಲಿಲ್ಲ. ಹೀಗೆ ಇವರ ಶೋಕಗೀತೆ ಮುಂದುವರಿಯುತ್ತದೆ. ನೋವನ್ನು ಮರೆತು ಸಿಹಿಯನ್ನು ಹಂಚಿದವರ ಬದುಕು ಮಾತ್ರ ಸಿಹಿಯಾಗಲಿಲ್ಲ.

ಸುಮಾರು ಐವತ್ತು ವರ್ಷಗಳವರೆಗೆ ಬಣ್ಣದ ಬದುಕಿನಲ್ಲಿ ಕಲಾಸಾಮ್ರಾಜ್ಞಿಯರಾಗಿ ಮೆರೆದ ನಟಿಯರ ಸಧ್ಯದ ಅವಸ್ಥೆಯನ್ನು ನೋಡಿ ಅಯ್ಯೋ ಎನಿಸದೆ ಇರಲಿಲ್ಲ. ಬಾಳ ಮುಸ್ಸಂಜೆಯಲ್ಲಿ ದಿನಗಳನ್ನು ನೂಕುತ್ತಿರುವ ಇವರ ಹೃದಯವಂತಿಕೆಗೆ ತಲೆಬಾಗಲೇಬೇಕು. ಹಿರಿಯ ನಟಿಯರ ಬದುಕು ಬಹಳಷ್ಟು ಚಿಂತಾಜನಕವಾಗಿದೆ. ಅಂಥದರಲ್ಲೂ ಚಹಾಕುಡೀರಿ, ಪಾನಕ ಮಾಡಿನಿ ನಿಂದರಿ. ಮಜ್ಜಗಿ ಸಾರ ಮಾಡೀನಿ ಒಂದು ತುತ್ತ ಅನ್ನಾ ಉಂಡ ಹೋಗರಿ, ಎನ್ನುವ ಮಾತೃ ಹೃದಯಕ್ಕೆ ಶರಣು. ಇವರಿಗೆ ಯಾವದೇ ಮಾಶಾಸನವಿಲ್ಲ. ಒಪ್ಪತ್ತಿನ ಗಂಜಿಗೂ ಪರದಾಡುತ್ತಿದ್ದಾರೆ. ಕ್ಷೇತ್ರಕಾರ್ಯಕೈಕೊಂಡ ಸಂದರ್ಭದಲ್ಲಿ ಹಂಸನೂರಿನಲ್ಲಿ ಎಲ್ಲೂಬಾಯಿ ಚಿಮ್ಮಲ್ ಅವರ ಮನೆಯಲ್ಲಿಯೇ ಕುಳಿತು ಉಳಿದ ಹಿರಿಯ ಕಲಾವಿದೆಯರನ್ನು ಬರಹೇಳಿದಾಗ ಒಬ್ಬ ಬೊಚ್ಚುಬಾಯಿಯ ಅಜ್ಜಿ ಅದೆಷ್ಟು ಸಂಭ್ರಮದಿಂದ ಓಡಿ ಬಂದಿದ್ದಳೆಂದರೆ, 'ಭಾನುಮತಿ' ನಾಟಕದಲ್ಲಿನ ದುರ್ಯೋಧನನ ಪಾತ್ರದ ಒಂದು ಡೈಲಾಗನ್ನು ಹೇಳಿಯೇ ಬಿಟ್ಟಳು. ಆ ಉತ್ಸಾಹಕ್ಕೆ ಕಾರಣ ಯಾರೋ ಮ್ಯಾಲಿನ ಸಾಹೇಬರು ಬಂದಾರ. ನಮಗೆ ಮಾಶಾಸನದ ವ್ಯವಸ್ಥಾ ಮಾಡ್ತಾರ. ಅಂತಾ ತಿಳಕೊಂಡ ಬಂದ ಅವಳ ಆಶೆಗೆ ನಾನು ತಣ್ಣೀರೆರಚಿದ್ದೆ. ಎದ್ದು ಹೋಗುವಾಗ ನೀವರ ಏನರ ಕಟಪಟಿ ಮಾಡ್ರಿ, ಕಡಿಕ ನಿಮ್ಮ ಪುಸ್ತಕದಾಗ ಬರೀರಿ ಎಂಬ ಆ ಕಳಕಳಿಯ ಮಾತುಗಳನ್ನು ಕೇಳಿದರೆ ಬದುಕಿನ ಕೊನೆಯ ದಿನಗಳನ್ನು ಹೇಗೆ ಸಾಗಿಸುತ್ತಿದ್ದಾಳೆ ಎಂಬುದು ಗೊತ್ತಾಗುತ್ತದೆ.

ದೇವರು ಇವರಿಗೆ ಅದ್ಭುತವಾದ ಪ್ರತಿಭೆಯನ್ನು ಕೊಟ್ಟ, ಜೊತೆಗೆ ಒಂದಿಷ್ಟು ತಿಳುವಳಿಕೆಯನ್ನು ಕೊಟ್ಟಿದ್ದರೆ ನಮ್ಮ ನಟಿಯರ ಅದೃಷ್ಟವೇ ಖುಲಾಯಿಸುತ್ತಿತ್ತೇನೋ. ಶ್ರದ್ಧೆ, ಆಸಕ್ತಿ, ಅವಿರತ ದುಡಿಮೆ ಅವರದಾಗಿದ್ದರೂ, ಅವರ ಪರಿಶ್ರಮಕ್ಕೆ ಫಲ ಮಾತ್ರ ಸಿಗಲಿಲ್ಲ.

ಹೆತ್ತವರ ಸಾವಿನ ವಾರ್ತೆಯನ್ನು ಕೇಳಿಯೂ ಇವರು ಮುಖಕ್ಕೆ ಬಣ್ಣ ಬಳಿಯಲೇ ಬೇಕು. ಇಲ್ಲದೆ ಹೋದರೆ ಅವತ್ತಿನ ಆಟ ನಿಂತು ಹೋಗುತ್ತದೆ. ಆ ನಷ್ಟ ಕಂಪನಿ ಮಾಲಿಕನಿಗೆ ಅದನ್ನು ತುಂಬಿ ಕೊಡುವವರು ಯಾರು? ಬಣ್ಣ ಅಳಿಸಿ ಹೋಗುವಷ್ಟರಲ್ಲಿ ಕೊನೆ ಗಳಿಗೆಯಲ್ಲಿ ನೋಡಲು ಮಾರಿಯೂ ಸಿಗದೆ ಹಿಂದಿರುಗಿ ಬಂದ ನಿದರ್ಶನಗಳುಂಟು. ಒಂದು ಕಾಲಕ್ಕೆ ಕಂಪನಿ ಮಾಲಿಕರು ಹಾಗೂ ಕಲಾವಿದರ ನಡುವೆ ಸೌಹಾರ್ದಯುತ ಸಂಬಂಧಗಳು ಇದ್ದವು. ಕಂಪನಿ ಮಾಲಿಕರು ತಮ್ಮ ಕಂಪನಿಯಲ್ಲಿ ದುಡಿಯುವ ನಟ ನಟಿಯರನ್ನು ತಮ್ಮ ಮಕ್ಕಳಂತೆ ಪ್ರೀತಿಯಿಂದ ನೋಡಿಕೊಳ್ಳುವುದರ ಜೊತೆಗೆ ಹಬ್ಬ ಹುಣ್ಣಿಮೆಗೆ ಎಣ್ಣೆ ಸ್ನಾನ ಮಾಡಿಸಿ ಹೋಳಿಗೆ ಊಟ ಹಾಕಿಸುತ್ತಿದ್ದರಂತೆ. ಹೀಗೆ ಅದೆಷ್ಟೋ ಹಿರಿಯ ಕಲಾವಿದರು ತಮ್ಮ ಬಣ್ಣದ ಬದುಕಿನ ಚಿನ್ನದ ದಿನಗಳನ್ನು ಮೆಲುಕು ಹಾಕುತ್ತಾರೆ.

ಎಲ್ಲಿಯವರೆಗೆ ಇವರು ಸರ್ವಿಸ್ ಕಂಪನಿಯಲ್ಲಿ ದುಡಿತಾ ಇದ್ದರೋ ಅಲ್ಲಿಯವರೆಗೆ ಇವರ ಜೀವನ ಒಂದಿಷ್ಟು ಸುಖಕರವಾಗಿತ್ತು. ನ ಭೂತೋ ನ ಭವಿಷ್ಯೋ ಎಂಬಂತೆ ನಿಶ್ಚಿಂತೆಯ ಜೀವನ ಅವರದಾಗಿತ್ತು. ಯಾವಾಗ ಬಣ್ಣದ ಬದುಕಿಗೆ ವಿದಾಯ ಹೇಳಿದರೋ ಅಲ್ಲಿಂದ ಶುರುವಾಯ್ತು ಇವರ ಪ್ರಾರಬ್ಧ. ದುಡಿಯುವ ಹುಮ್ಮಸ್ಸಿದ್ದರು ಕಂಪನಿಗಳು ನೆಲಕಚ್ಚಿವೆ. ನಟನೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಇವರಿಗೆ ಬೇರೊಂದು ವೃತ್ತಿ ಗೊತ್ತಿಲ್ಲ. ಅಲ್ಲದೆ ಇವರು ಸರಕಾರಿ ನೌಕರರೂ ಅಲ್ಲ. ನಿವೃತ್ತಿಯ ನಂತರ ಪಿಂಚಣಿಯಲ್ಲಾದರೂ ನೆಮ್ಮದಿಯ ಬದುಕು ಸಾಗಿಸಲು. ಹೀಗಾಗಿ ಈ ಬಡಜೀವಗಳು ಕಂಗಾಲಾಗಿವೆ.

ರಟ್ಟೆಯಲ್ಲಿ ಬಲ ಇದ್ದಾಗ ನಾಲ್ಕು ಕಾಸು ಕೂಡಿಸಿಟ್ಟಿದ್ದರೆ ಈ ಇಳಿ ಹೊತ್ತಿನಲ್ಲಿ ತಮ್ಮ ಎರಡು ಹೊತ್ತಿನ ಗಂಜಿಗಾದರೂ ಕೊರತೆ ಇರಲಿಲ್ಲ. ಅವರೇ ಹೇಳುವಂತೆ ರೊಕ್ಕ ಸೊಕ್ಕ ಈ ಆಡಂಬರದ ಜೀವನದಾಗ ಕೂಡಿಡುವುದು ಇವರಿಗೆ ತಿಳಿಯಲೇ ಇಲ್ಲ. ಅದು ಅಲ್ಲದೆ ಅವರಿಗೆ ಸಿಗುವ ಸಂಬಳವಾದರೂ ಎಷ್ಟು? ಅವರೇನು ಆಯ್.ಟಿ.ಬಿ.ಟಿ. ಉದ್ಯೋಗಿಗಳಾ? ಕುಡುಕ ಗಂಡಂದಿರನ್ನು ಅವಿಧೇಯ ಮಕ್ಕಳನ್ನು ಕಟ್ಟಿಕೊಂಡು ಸಾಯಲಿಕ್ಕೂ ಆಗದೇ ಬದುಕಲಿಕ್ಕೂ ಆಗದೆ ರಂಗದ ಮೇಲೆ ಚಪ್ಪಾಳೆಗಿಟ್ಟಿಸಿಕೊಳ್ಳುವ ಇವರ ಬದುಕಿಗೊಂದು ಅರ್ಥವಿದೆಯೇ? ರಂಗದ ಮೇಲೆ ಮಹಾರಾಣಿಯ ಪಾತ್ರ ಮಾಡುವ ಒಬ್ಬ ನಟಿ ತೆರೆಯ ಹಿಂದುಗಡೆಯಲ್ಲಿ ಸಿಂಗಲ್ ಚಹಾಕ್ಕೂ ಇನ್ನೊಬ್ಬರಿಗೆ ಕೈಚಾಚುವ ಪ್ರಸಂಗವನ್ನು ನೋಡಿದರೆ ಇವರ ಬಣ್ಣದ ಬದುಕು ಅನಾವರಣಗೊಳ್ಳುತ್ತದೆ.

ಕೆಲವೊಂದು ಕಂಪನಿಗಳು ಸರಿಯಾಗಿ ಸಂಬಳವನ್ನು ಕೊಡದೇ ಇದ್ದಾಗ ಇವರ ಅವಸ್ಥೆ 'ಅತ್ತ ಧರಿ ಇತ್ತ ಪುಲಿ' ಬೇರೆಡೆ ಹೋಗುವಂತೆಯೂ ಇಲ್ಲ, ಅದೇ ಕಂಪನಿಯಲ್ಲಿ ಇರುವಂತೆಯೂ ಇಲ್ಲ. ಅತಂತ್ರ ಸ್ಥಿತಿಯಲ್ಲಿ ಬದುಕನ್ನು ಸಾಗಿಸಬೇಕು. ಅಮೇಚೂರಿನಲ್ಲಿ ಅವಕಾಶಗಳು ಸಿಕ್ಕರೆ ಅಲ್ಲಿಗೆ ಹೋಗಬೇಕು. ಆದರೆ ವೃತ್ತಿರಂಗಭೂಮಿಯಲ್ಲಿರುವ ಭದ್ರತೆ ಅಲ್ಲಿಲ್ಲ. ಅಭದ್ರತೆ ಅವರನ್ನು ಕಾಡುತ್ತದೆ. ಅದೆಷ್ಟೋ ತಾರಾಪತ್ನಿಯರು ಕಂಪನಿ ನಿಲ್ಲುವ ಹಂತಕ್ಕೆ ಬಂದಾಗ ಮೈಮೇಲಿನ ಒಡವೆ ಮಾರಿ ಕಂಪನಿಗೆ ಮರುಜೀವ ಕೊಟ್ಟಿದ್ದಾರೆ. ವೃದ್ಯಾಪ್ಯದ ಅಂಚಿನಲ್ಲಿರುವ ಅವರಿಗೆ ಈಗ ತುತ್ತಿನ ಚೀಲ ತುಂಬಿಸಿಕೊಳ್ಳುವುದೂ ದುಸ್ತರವಾಗಿದೆ.

'ಬಡವನ ಕೋಪ ದವಡೆಗೆ ಮೂಲ' ಎಂಬಂತೆ ರಾಜ್ಯ ಸರಕಾರದ ಹಾಗೂ ಕೇಂದ್ರಸರಕಾರದ ಮಾಶಾಸನವೂ ಇನ್ನು ಕೆಲವು ಹಿರಿಯ ಕಲಾವಿದೆಯರ ಕೈಗೆ ಎಟುಕಿಲ್ಲ. ಏನೆಲ್ಲಾ ಕಾಗದಪತ್ರ ಕೇಳುತ್ತಾರೆ. ಅವನ್ನೆಲ್ಲ ಎಲ್ಲಿಂದ ತರುವುದು? ನಾವು ನಾಟಕದಲ್ಲಿ ಪಾತ್ರ ಮಾಡಿದ್ದು ಸುಳ್ಳೆ? ನಿನ್ನೆ ಮೊನ್ನೆ ಬಂದವರು ಏನೆಲ್ಲಾ ವಶೀಲಿ ಹಚ್ಚಿ ಎರಡೂ ಮಾಶಾಸನ ತೆಗೆದುಕೊಳ್ಳುತ್ತಿದ್ದಾರೆ. ನಮ್ಮ ಕೂಗನ್ನು ಕೇಳುವವರೇ ಇಲ್ಲ. ಹೀಗೆ ನೋವು ತುಂಬಿದ ಹೃದಯದಿಂದ ಹೇಳುವುದನ್ನು ಕೇಳಿದರೆ ಇವರ ಈ ಕೂಗು ನಮ್ಮ ರಾಷ್ಟ್ರನಾಯಕರಿಗೆ ಮುಟ್ಟುವುದು ಯಾವಾಗ? ಅದೆಷ್ಟೋ ಕಲಾವಿದೆಯರು ರೋಸಿ ಹೋಗಿದ್ದಾರೆ. ಈ ಬಣ್ಣದ ಬದುಕು ನಮ್ಮೊಂದಿಗೆ ಮುಕ್ತಾಯವಾಗಲಿ. ಮಕ್ಕಳು, ಮೊಮ್ಮಕ್ಕಳು ಈ ಕ್ಷೇತ್ರಕ್ಕೆ ಬರುವುದು ಬೇಡ ಎಂಬ ಜಿಗುಪ್ಸೆಯೂ ಅವರಲ್ಲಿ ಬೆಳೆದಿದೆ.

ಇನ್ನೂ ಕೆಲವರಿಗೆ ತಮ್ಮ ದುಃಖ ದುಮ್ಮಾನ ನೋವು ಏನೆಲ್ಲವನ್ನು ಮರೆತು ಜೀವನ ಪಯಣದಲ್ಲಿ ಮುಂದುವರೆಯಲು ಬಣ್ಣದ ಬದುಕಿಗೆ ಮುಖಮಾಡಲೇಬೇಕು. ಅದು ಅವರಿಗೆ ಅನಿವಾರ್ಯ. ಕಲಾದೇವತೆ ನಮ್ಮ ಕೈ ಬಿಡುವದಿಲ್ಲ ಎಂಬ ಬಲವಾದ ನಂಬಿಕೆ ಅವರದು. ಆದಾಗ್ಯೂ ಮುಖದ ಬಣ್ಣ ಇವರ ಬದುಕನ್ನು ಕಲರ್ ಫುಲ್ ಮಾಡಲಿಲ್ಲ. ಸಾವಿರಾರು ಪ್ರೇಕ್ಷಕರನ್ನು ನಕ್ಕುನಗಿಸಿದ ಇವರ ಸ್ಥಿತಿಮಾತ್ರ ನೆಟ್ಟಗಾಗಲಿಲ್ಲ. ಆದರೂ ಕೆಲ ಹಿರಿಯ ನಟಿಯರು ಫಿನಿಕ್ಸ್ ಹಕ್ಕಿಯಂತೆ ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ಮಕ್ಕಳು ಒಳ್ಳೆಯ ಉದ್ಯೋಗದಲ್ಲಿದ್ದರೂ ತಮ್ಮ ಅನ್ನವನ್ನು ತಾವೇ ಸಂಪಾದಿಸಿಕೊಳ್ಳಬೇಕೆಂಬ ಮಾರ್ಕ್ಸನ ಸಿದ್ಧಾಂತಕ್ಕೆ ಬದ್ಧರಾಗಿ ಛಲದಿಂದ ಬದುಕನ್ನು ಸಾಗಿಸುತ್ತಿದ್ದಾರೆ. ಆ ಮಕ್ಕಳಿಗೂ ತಮ್ಮ ತಾಯಂದಿರ ಬಗ್ಗೆ ಹೆಮ್ಮೆಯಿದೆ.

ಇನ್ನು ಕೆಲ ಕಲಾವಿದೆಯರಿಗೆ ಇರಲು ಸೂರಿಲ್ಲ. ಬಾಡಿಗೆ ಕಟ್ಟಲು ಹಣವಿಲ್ಲ. ಸರಕಾರದಿಂದ ಮಂಜೂರಾದ ಜಾಗವೂ ದಲ್ಲಾಳಿಗಳ ದಬ್ಬಾಳಿಕೆಯಿಂದ ಕನ್ನಡಿಯೊಳಗಿನ ಗಂಟಾಗಿದೆ.

ನಮ್ಮ ಕಲೆ ಸಂಸ್ಕೃತಿ ಉಳಿಯಬೇಕಾದರೆ ಮೊದಲು ಕಲಾವಿದರು ಬದುಕಬೇಕು. ಅದಕ್ಕಾಗಿ ನಮ್ಮ ಘನ ಸರಕಾರ ಕೊನೆಯ ಪಕ್ಷ ಅವರಿಗೆ ಮೂಲಭೂತ ಸೌಕರ್ಯಗಳನ್ನಾದರೂ ಒದಗಿಸಿಕೊಡಬೇಕು. ಕಲೆ ಇವತ್ತು ಅವಸಾನದ ಅಂಚಿನಲ್ಲಿದೆ. ಕಿರುತೆರೆಗೆ ಚಿತ್ರ ಜಗತ್ತಿಗೆ ಅದೆಷ್ಟೋ ಕಲಾವಿದೆಯರು ಮುಖಮಾಡಿದ್ದರೂ ಕೂಡಾ ಅವರ ಬೇರುಗಳು ಇನ್ನೂ ರಂಗಭೂಮಿಯಲ್ಲಿನೆ ಚಾಚಿಕೊಂಡಿವೆ. ರಂಗಭೂಮಿ ಕೊಟ್ಟ ಖುಷಿ ಸಿನೇಮಾ, ಕಿರುತರೆ ಕೊಟ್ಟಿಲ್ಲವೆಂಬ ಕೊರಗು ಅವರದು. ಅಷ್ಟೇ ಅಲ್ಲ; ರಂಗಭೂಮಿಯ ಬಗ್ಗೆ ಅವರಿಗಿರುವ ಕಾಳಜಿ, ಕಳಕಳಿ ಎದ್ದು ಕಾಣುತ್ತದೆ. ನಮ್ಮ ಸಂಸ್ಕೃತಿ ಉಳಿಯಬೇಕಾದರೆ ಕಲಾವಿದರನ್ನೂ ನಾವು ಉಳಿಸಿಕೊಳ್ಳಬೇಕು. ನೊಂದ ಹೃದಯಕ್ಕೆ ತಂಪನ್ನೆರೆಯುವ ಕಾರ್ಯ ಆಗಬೇಕಾಗಿದೆ.

**ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನ:**

ವೃತ್ತಿರಂಗಭೂಮಿಯಲ್ಲಿ ಮಹಿಳೆಯ ಸಾಮಾಜಿಕ ಸ್ಥಾನಮಾನಗಳನ್ನು ನೋಡುವ ಪೂರ್ವದಲ್ಲಿ, ನಮ್ಮ ಇತಿಹಾಸದತ್ತ ಒಂದಿಷ್ಟು ಕಣ್ಣು ಹಾಯಿಸಿದರೆ ಆಯಾ ಕಾಲದಲ್ಲಿ ಮಹಿಳೆಯರ, ಅದರಲ್ಲೂ ಸಾಂಸ್ಕೃತಿಕ ಚಟುವಟಿಕೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರಿಗೆ ನಮ್ಮ ಸಮಾಜ ಕೊಟ್ಟಂತ ಸ್ಥಾನಮಾನ, ಎಂತದ್ದು ಎಂಬುದು ಗಮನಕ್ಕೆ ಬಾರದೇ ಇರದು.

ಮಹಿಳೆ ಕ್ರಿಯಾತ್ಮಕವಾಗಿ ಕೆಲವೊಂದು ಕ್ಷೇತ್ರದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದಳು ಎಂಬುದಕ್ಕೆ ವೈದಿಕಯುಗವೇ ನಮಗೆ ಸಾಕ್ಷಿ. ಲೋಪಾಮುದ್ರಾ, ವಿಶ್ವವಾರಾ, ಘೋಷಾ ಮೊದಲಾದ ಮಹಿಳೆಯರು ವೇದಗಳ ಮಂತ್ರವನ್ನು ರಚಿಸುತ್ತಿದ್ದರು. ಗಾರ್ಗಿ ಮೈತ್ರಿಯರು ತಮ್ಮ ಪಾಂಡಿತ್ಯ ವಿದ್ವತ್ತಿನಿಂದ ಸಮಾಜದಲ್ಲಿ ಒಂದು ಒಳ್ಳೆಯ ಸ್ಥಾನವನ್ನು ಪಡೆದುಕೊಂಡಿದ್ದರೆಂದು ಮಾತುಮಾತಿಗೂ ಇವರನ್ನೇ ಬೆರಳು ಮಾಡಿ ತೋರಿಸುತ್ತ ಬಂದಿದ್ದು ನಿಜ. ಹಾಗಾದರೆ ಅವತ್ತಿನ ಕಾಲದಲ್ಲಿ ಇದ್ದಂತ ಮಹಿಳೆಯರ ಅಂಕಿಸಂಖ್ಯೆಗಳನ್ನು ನಾವು ಲೆಕ್ಕಹಾಕಬೇಕಾಗುತ್ತದೆ.

ಹೋಗಲಿ ವೇದಗಳ ನಂತರವಾದರೂ ನಮ್ಮ ಮಹಿಳೆಯರಿಗೆ ಒಂದು ಸಾಮಾಜಿಕ ನ್ಯಾಯದೊರಕಿತ್ತೇ? ಸ್ಮೃತಿಕಾರರ ಕೈಯಲ್ಲಿ ಸಿಕ್ಕ ಮಹಿಳೆಯರ ಅವಸ್ಥೆ ಹೇಳತೀರದು. ಉಸಿರುಗಟ್ಟಿ

ಸಾಯುವ ವಾತಾವರಣದಲ್ಲಿ ಹೆರಿಗೆಯ ಯಂತ್ರವಾಗಿ, ಗಂಡನ ಆಜ್ಞಾಪರಿಪಾಲಕಳಾಗಿ, ಭೋಗದ ವಸ್ತುವಾಗಿ, ಉತ್ಸವಮೂರ್ತಿಯಾಗಿ ವಿಜೃಂಭಿಸತೊಡಗಿದಳು. ಅಡುಗೆ ಮನೆ ಅವರ ಸಾಮ್ರಾಜ್ಯವಾಯ್ತು. ಅವಳೇ ರಾಜಕುಮಾರಿಯಾಗಿ, ಅಡುಗೆ ಮನೆಯ ಪಾತ್ರೆಗಳೇ ಖಡ್ಗ, ಗುರಾಣಿಗಳಾಗಿ, ಒಳಗೊಳಗೆ ಕತ್ತಿ ಮಸೆಯುತ್ತ ಧ್ವನಿಹೀನಳಾಗಿ ಬದುಕನ್ನು ಸಾಗಿಸಿದಳು. ಹೆಣ್ಣು ಕೊಟ್ಟ ಮನಿಗೆ ಹೋಗುವಳು ತಮಗೆ ಸತ್ತ ಮೇಲೆ ಮೋಕ್ಷ ಸಿಗಬೇಕಾದರೆ ಪುತ್ರನೇ ಬೇಕು ಎಂಬ ಪುತ್ರಮೋಹ ಆವತ್ತಿನ ಕಾಲದಲ್ಲಿ ಬಲವಾಗಿ ಬೇರೂರಿತ್ತು. ಇವತ್ತಿಗೂ ಅದೂ ಮುಂದುವರೆದ್ಧಿದೆ.

ಬಹಳಷ್ಟು ದಂಪತಿಗಳು ಪುತ್ರ ಸಂತಾನವನ್ನೇ ಬಯಸಿ ಹರಕೆ ಹೊತ್ತಿರುತ್ತಾರೆ. ಅಚಾನಕ ಹೆಣ್ಣುಮಗುವಾದರೆ ಪಶ್ಚಾತ್ತಾಪಪಡುತ್ತಾರೆ. ಹೊಯ್ಸಳ ದೊರೆ ವಿಷ್ಣುವರ್ಧನನ ಪಟ್ಟದ ರಾಣಿ ಶಾಂತಲೆಯನ್ನು ಅವಳ ತಂದೆ ತಾಯಿಗಳು ಧರ್ಮೆಶ್ವರ ದೇವರಿಗೆ ಹರಕೆ ಹೊತ್ತು ಹೆತ್ತರಂತೆ ಬಹುಶಃ ಅವರು ಹರಕೆ ಹೊತ್ತದ್ದು ಗಂಡು ಮಗುವಿಗಾಗಿ, ಹೆಣ್ಣುಮಗು ಹುಟ್ಟಿದಾಗ ಮುದ್ದಿನಿಂದ ಬೆಳೆಸಿರಬಹುದು. ಹೀಗೆ ಅನಾದಿ ಕಾಲದಿಂದಲೂ ಹೆಣ್ಣು ಎಂದರೇನೆ--- ಕೀಳು ದೃಷ್ಟಿಯಿಂದ ಕಾಣುವ ವೃತ ನಮ್ಮಲ್ಲಿ ಬೆಳೆದುಬಂದಿದೆ.

ಅರಸೊತ್ತಿಗೆ ಹಾಗೂ ಶ್ರೀಮಂತ ಮನೆತನದ ಹೆಣ್ಣು ಮಕ್ಕಳಿಗೆ ಬಾಲ್ಯದಲ್ಲಿಯೇ ತಕ್ಕಮಟ್ಟಿಗೆ ಕಲೆ, ಸಂಗೀತದ ವಿದ್ಯಾಭ್ಯಾಸ ನಡೆಯುತ್ತಿತ್ತು. ನಮ್ಮ ಪ್ರಾಚೀನ ಶಾಸನಗಳನ್ನು ನೋಡಿದಾಗ ಮಹಿಳೆ ತನಗಿಷ್ಟವಾದ ಕ್ಷೇತ್ರದಲ್ಲಿ ಒಂದಿಷ್ಟು ಸಾಧನೆ ಮಾಡಿದ ಉದಾಹರಣೆಗಳು ಸಿಗುತ್ತವೆ. "ಮಹಾಸಾಮಂತ ಶೂದ್ರಕಾಂಕನ ಹೆಂಡತಿಯಾದ ಜಕ್ಕಿ ಸುಂದರಿಯನ್ನು 'ಸಹಜ ಸರಸ್ವತಿ' ಎಂದು ಕರೆಯಲಾಗಿದೆ. ತ್ರಿಭುವನ ಮಲ್ಲದೇವನ ಪಟ್ಟದರಾಣಿ ಚಂದಲದೇವಿಯು "ಶ್ರೀ ನೃತ್ಯವಿದ್ಯಾಧರಿ" ಎನಿಸಿಕೊಂಡಿದ್ದಳು. ರವಿದೇವ ಎಂಬ ದಂಡನಾಯಕನ ಪತ್ನಿ ಕಿಬ್ಬಲದೇವಿಯು "ಪ್ರತಿಭಾ ಸರಸ್ವತಿ" ಎಂದು ಕರೆಯಿಸಿಕೊಂಡದ್ದಲ್ಲದೆ ಅಜ್ಞಾನವೆಂಬ ಕಲ್ಮಷವನ್ನು ಕಳೆದುಕೊಂಡವಳೆಂದು ಹೊಗಳಿಸಿಕೊಂಡಿದ್ದಳು. ಕದಂಬ ವಂಶದ ರಾಜ ದಯಸಿಂಹನ ರಾಣಿ ಚೆಲುವೆ ಮೇಚಲದೇವಿಯು ಅತಿ ಚತುರೋಕ್ತಿಯಲ್ಲಿ ಸರಸ್ವತಿಗೂ ಮಿಗಿಲೆನಿಸಿಕೊಂಡಿದ್ದಳು. ವಿಷ್ಣುವರ್ಧನನ ಪಟ್ಟದ ರಾಣಿ ಶಾಂತಲೆಯನ್ನು ನಾಟ್ಯ ರಾಣಿ ಎಂದು ಹಲವು ಶಾಸನಗಳು ಹೊಗಳಿವೆ"[4]

---

[4] ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ. ಎಂ. ಚಿದಾನಂದ ಮೂರ್ತಿ ಪುಟ 457-458

ಹೀಗೆ ಅರಸುಮನೆತನದ ಶ್ರೀಮಂತಮನೆತನದ ಹೆಣ್ಣುಮಕ್ಕಳು ಕಲೆ, ಸಂಗೀತ, ನೃತ್ಯದಲ್ಲಿ ತಮ್ಮದೇ ಆದಂತ ಒಂದು ವಿಶಿಷ್ಟ ಪ್ರಭಾವವನ್ನು ಬೀರಿದ್ದರು.

ಹೀಗೆ ನಮ್ಮ ವೇದಗಳು, ಶಾಸನಗಳು, ಮಹಿಳೆಯನ್ನು ಬಹಳಷ್ಟು ವೈಭವೀಕರಿಸಿವೆ. ಕಣ್ಣು ಮುಚ್ಚಿದರೆ ಸಾಕು ಗಾರ್ಗಿ, ಮೈತ್ರಯಿಯರು ನಮ್ಮ ಕಣ್ಣಮುಂದೆ ಕುಣಿಯುತ್ತಾರೆ. ಆದರೆ ಒಂದಂತು ಸತ್ಯ ಇವರ್‍ಯಾರು ಸಾಮಾನ್ಯವರ್ಗದ ಪ್ರತಿನಿಧಿಗಳು ಅಲ್ಲ. ಮೇಲ್ವರ್ಗದ ಪ್ರತಿನಿಧಿಗಳಾಗಿ ಬಂದವರು.

ಹೆಣ್ಣು ಯಾವಾಗಲೂ ಸ್ಥಾಪಿತ ಹಿತಾಸಕ್ತಿಗಳ ಕೈಯಲ್ಲಿ ಬೆಳೆಯುತ್ತ ಬಂದಿದ್ದಾಳೆ. ಸ್ವತಂತ್ರವಾಗಿ ಬದುಕುವ ಹಕ್ಕನ್ನು ಕಳೆದುಕೊಂಡ ನಿರಕ್ಷರ ಕುಕ್ಷಿಯಾದ ಹೆಣ್ಣಿಗೆ ಬದುಕು ದುಸ್ತರವಾದರೂ ಬೂದಿಮುಚ್ಚಿದ ಕೆಂಡದಂತೆ ಬದುಕುವುದು ಅನಿವಾರ್ಯವಾಯ್ತು. ಇದು ಮಧ್ಯಮ ಹಾಗೂ ಕೆಳವರ್ಗದ ಹೆಣ್ಣುಮಕ್ಕಳ ಪಾಡು. ಒಂದೆಡೆ ಮಧ್ಯಮ ವರ್ಗದ ಹೆಣ್ಣುಮಕ್ಕಳು ಸಂಪ್ರದಾಯದ ಚೌಕಟ್ಟಿನಲ್ಲಿಯೇ ಸಿಕ್ಕು ಒದ್ದಾಡುತ್ತಿದ್ದರೇ ಕೆಳವರ್ಗದ ಪಾತ್ರದವರು, ಕಲಾವಂತರು, ದಾಸರು ಈ ಮನೆತನದ ಹೆಣ್ಣು ಮಕ್ಕಳು ಸಂಗೀತ ನೃತ್ಯದಲ್ಲಿ ನೈಪುಣ್ಯತೆಯನ್ನು ಪಡೆದಿದ್ದರು. ಸಂಗೀತ ನೃತ್ಯದ ಮೂಲಕ ಗರ್ಭಗುಡಿಯ ಮುಂದಿನ ರಂಗಮಂಟಪದಲ್ಲಿ ಸೇವೆಯನ್ನು ಗೇಯ್ಯುವವರಿಗೆ ರಂಗಭೋಗದ ವೇಶ್ಯಯರೆಂದು ಕರೆದರೆ. ವಿಗ್ರಹಕ್ಕೆ ಸಲ್ಲುವ ಅಭಿಷೇಕ, ಗಂಧಲೇಪನ, ಧೂಪದೀಪ, ಪುಷ್ಪ ಇತ್ಯಾದಿಗಳ ಮೂಲಕ ದೇವರಿಗೆ ಸೇವೆಯನ್ನು ಮಾಡುವವರಿಗೆ ಅಂಗಭೋಗದ ವೇಶ್ಯಯರೆಂದು ಕರೆಯುತ್ತಿದ್ದರು. ಸುಮಾರು 1430ರಲ್ಲಿ ಚಾಮರಸ ಪ್ರಭುಲಿಂಗಲೀಲೆಯಲ್ಲಿ ಮಾಯೆ ಮಧುಕೇಶ್ವರನ ಪೂಜಿಸಿದ ರೀತಿಯನ್ನು ಅವಳು ರಂಗಮಂಟಪದಲ್ಲಿ ಮಾಡಿದ ನೃತ್ಯವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

> ಮಿಸುಪ ಧೂಪದ ಧೂಮದಲಿ ಕೆಂ
> ಪೆಸೆವ ಲೋಚನವಾನತೆಯ ಭರ
> ವಸಕೆ ಸೂಸಿದ ಸುಳಿಗುರುಳು ದೀಪಂಗಳುಬ್ಬೆಯಲಿ
> ಕುಸರಿ ಬೆಮರಿಡುವಂಗ ಮಿಗೆ ರಂ
> ಜಿಸಲು ಮಧುಕೇಶ್ವರನ ಸಂಭೋ
> ಗಿಸಿಯೆ ಬಂದಳೊ ಪೇಳೆನಲ್ಮೆಚೆದಿರ್ದಳಾ ಮಾಯೆ.

ಮಾಯೆ ಮಧುಕೇಶ್ವರನ ಮುಂದೆ ಹಚ್ಚಿದ ಧೂಪ ದೀಪದ ಹೊಗೆಯಿಂದ. ಝುಳದಿಂದ ಕೆಂಪಾದ ಕಣ್ಣುಗಳು. ಬೆಮರಿಡುವ ಅಂಗ ಇದನ್ನೆಲ್ಲ ನೋಡಿದಾಗ ಅವಳು ಮಧುಕೇಶ್ವರನನ್ನು ಭೋಗಿಸಿಯೇ ಬಂದಂತೆ ಕವಿ ಕಲ್ಪನೆ ಸುಂದರವಾಗಿದೆ.

ಸುಳಿವ ಹಸ್ತದ ಜಾತಿಭಾವದ

ಬಳಿಯಲಾಡುವ ನೋಟ ನೋಟದ

ಉಳಿಯವೊಲು ತಗೆದತ್ತ ತಿರುಗುವ ಕೊರಳು ಕೊರಳಂತೆ

ಬಳಕುತಿಹ ನಡು ನಡುವಿನಂದಕೆ

ಹೊಳೆವ ಪಾದದ ಪಾಡು ಪಾಡಿನ

ನಿಲುಕಡೆಯ ನಿರೆಗೆಯಲಿ ಮಾಯೆ ಲಾಸ್ಯದಲ್ಲಿ

ನೃತ್ಯವೆಂದಾಗ ಅಲ್ಲಿ ಹಾವಭಾವ ಮುಖ್ಯ ಅದರಂತೆ ಅವಳ ಸುಂದರ ಕೈಗಳು ತಿರುಗಿದತ್ತ ಮೋಹಕ ಕಣ್ಣಿನ ನೋಟ ಸುಳಿಯುತ್ತಿತ್ತು. ಆ ನೋಟಕ್ಕೆ ತಕ್ಕಂತೆ ಕೊಂಕುವ ಕೊರಳು, ಬಳಕುವ ನಡು, ಅದರ ಲಯಕ್ಕೆ ತಕ್ಕಂತೆ ಗೆಜ್ಜೆ ಕಟ್ಟಿದ ಹೆಜ್ಜೆಗಳು ಹೀಗೆ ಮಾಯೆ ನೋಡುಗರ ಕಂಗಳಿಗೆ ಮೋಹಕವಾಗಿ ಕಾಣುತ್ತಾಳೆ.

ಮೃತ್ತಿಕೆಯ ಮಾಟಕದ ರೂಹಿನ

ಪುತ್ತಳಿಗಳನು ದೇಗುಲಕೆ –

ತೆತ್ತಸಿದರೆಂಬಂತೆ ಮಾಯೆಯ ನೋಡುವರ್ತಿಯ—

ಸುತ್ತಿ ಮುತ್ತಿ – ಗವಾಕ್ಷರಂಧ್ರದ"

ಭಿತ್ತಿಯಲಿ ನೆವೆ ಕೀಳಿಸಿರ್ದರು

ಚಿತ್ತಜಗ್ರಹ ಸೋಂಕಿದಂತಿರೆ ಕೂಡೆ ನೋಟಕರು"[5]

ಮಾಯೆಯ ನೃತ್ಯವನ್ನು ನೋಡುವದಕ್ಕಾಗಿ ಪ್ರೇಕ್ಷಕರು ದೇವಾಲಯದ ಗೋಡೆಗಳಿಗೆ, ಕಿಡಕಿಗಳಿಗೆ ಮಣ್ಣಿನ ಗೊಂಬೆಗಳನ್ನು ಅಂಟಸಿದಂತೆ ಕಾಮನಿಗೆ ಸೆರೆಯಾದಂತೆ ನೋಟಕರು ಮುಗಿಬಿದ್ದು ನೋಡುತ್ತಿದ್ದರೆಂಬುದನ್ನು ನೊಡಿದಾಗ ಆ ಕಾಲಕ್ಕೆ ಸಂಗೀತ, ನೃತ್ಯ ಎಂತಹ ಪ್ರಾದಾನ್ಯತೆಯನ್ನು ಪಡೆದಿತ್ತು ಎಂಬುದು ಗೊತ್ತಾಗುತ್ತದೆ.

ಒಂದು ಕಾಲಕ್ಕೆ ಕಲೆ, ಸಂಗೀತ, ಅರಸೊತ್ತಿಗೆ ದೇವಾಲಯಗಳಿಗೆ ಮಾತ್ರ ಸೀಮಿತವಾಗಿತ್ತು. ಕಲೆಯನ್ನು ಪ್ರತಿಷ್ಠೆಗಾಗಿ ಉಳಿಸಿಕೊಂಡು ಬಂದವರು ರಾಜರು ಅದೆಷ್ಟೋ ರಾಜಮನೆತನಗಳು ತಮ್ಮ ದರ್ಬಾರಿನಲ್ಲಿ ಸಂಗೀತ ನೃತ್ಯದ ರಸದೌತಣವನ್ನು ಉಣಬಡಿಸುತ್ತಿದ್ದವು. ಸ್ವತ ರಸಿಕ ಅರಸರು ತಾವೂ ಸಂಗೀತ ಸುಧೆಯನ್ನು ಆಸ್ವಾದಿಸುತ್ತಿದ್ದರು. ಅದಕ್ಕೆಂದೇ ರಾಜನರ್ತಕಿಯರಿಗೆ ತಮ್ಮ ಅರಮನೆಯಲ್ಲಿ ಒಂದು ಆಶ್ರಯವನ್ನು ಸ್ಥಾನವನ್ನು ಕೊಟ್ಟಿದ್ದರು. ಕಲೆ ಸಂಗೀತಕ್ಕೆ ನೀರೆರೆದವರು ಅದನ್ನು ಉಳಿಸಿದವರು

---

[5] ಚಾಮರಸನ ಪ್ರಭುಲಿಂಗಲೀಲೆ ಸಂಪಾದಕರು. ಶಿ.ಶಿ. ಬಸವನಾಳ ಪುಟ. 46–48.

ಪ್ರಭುಗಳು ಒಂದೆಡೆಯಾದರೆ, ದೇವಾಲಯಗಳಲ್ಲಿ ದೇವದಾಸಿಯರು ನೃತ್ಯ ಸಂಗೀತದ ಮೂಲಕ ದೇವರಿಗೆ ಸೇವೆಯನ್ನು ಸಲ್ಲಿಸುತ್ತಲಿದ್ದರು. ಅವರಿಗೂ ಸಮಾಜದಲ್ಲಿ ಒಂದು ಗೌರವದ ಸ್ಥಾನವಿತ್ತು. ಜೊತೆಗೆ ತಿದ್ದಿತೀಡಿದ ರೂಪವೇ ಅವರಿಗೆ ಬಂಡವಾಳ ಅವರಿಗೋಸ್ಕರ ದೇವಾಲಯದ ಹತ್ತಿರವೇ ಒಂದು ಕೇರಿಯನ್ನು ನಿರ್ಮಾಣಮಾಡಿ ಎಲ್ಲ ಸೌಕರ್ಯಗಳನ್ನು ಒದಗಿಸಿಕೊಡುವುದಲ್ಲದೇ ಉಪಜೀವನಕ್ಕೆಂದು ಒಂದಿಷ್ಟು ಭೂಮಿಯನ್ನು ಕೊಟ್ಟು, ಕಲೆಯನ್ನು ಕಲಾವಿದರನ್ನು ಪೋಷಿಸಿಕೊಂಡು ಬರುವ ವಾಡಿಕೆ ಅಂದಿನ ಕಾಲದಲ್ಲಿತ್ತು.

ಯಾವಾಗ ಮುಸ್ಲಿಂರ ಆಕ್ರಮಣ, ವಸಾಹತು ಶಾಹಿಗಳ ನಿರ್ಮಾಣ ನಮ್ಮ ದೇಶದ ಮೇಲೆ ನಡೆಯಿತೋ, ಪ್ರಭುತ್ವ ಕ್ಷೀಣಿಸಿ ದೇವಾಲಯಗಳು ನಾಶವಾದವೋ? ಇವನ್ನೇ ನಂಬಿ ಬದುಕನ್ನು ಸಾಗಿಸುತ್ತಿದ್ದವರು ಬೀದಿಗೆ ಬರಬೇಕಾಯ್ತು. ತುತ್ತಿನ ಚೀಲವನ್ನು ತುಂಬಿಸಿಕೊಳ್ಳುವದಕ್ಕಾಗಿ ಪಡಬಾರದ ತೊಂದರೆಯನ್ನು ಪಡಬೇಕಾಯ್ತು. ಆಗ ಅವರ ನೆರವಿಗೆ ಬಂದುದು ರಂಗಭೂಮಿ. ಅವರಲ್ಲಿರುವ ಪ್ರತಿಭೆಯನ್ನು ಗುರುತಿಸಿ ಅವರಿಗೊಂದು ನೆಲೆಯನ್ನು ಒದಗಿಸಿಕೊಟ್ಟ ಶ್ರೇಯಸ್ಸು ನಮ್ಮ ವೃತ್ತಿರಂಗಭೂಮಿಗೆ ಸಲ್ಲಬೇಕು. ಒಬ್ಬರ ಋಣ ಇನ್ನೊಬ್ಬರ ಮೇಲಿದೆ ರಂಗಭೂಮಿ ಆ ಸಂಗೀತ ಗಾರ್ತಿಯರಿಗೆ ಆಶ್ರಯಕೊಟ್ಟರೆ. ಆ ಸಂಗೀತ ಗಾರ್ತಿಯರು ರಂಗಭೂಮಿಯನ್ನು ಉಳಿಸಿ ಬೆಳೆಸಿದರು. ಕಲೆ ಸಂಗೀತಕ್ಕೆ ನ್ಯಾಯ ಸಲ್ಲಿಸಿದವರು ಈ ಶ್ರಮಿಕ ವರ್ಗದ ಮಹಿಳೆಯರೇ. ಉತ್ತರ ಕರ್ನಾಟಕದ ರಂಗಭೂಮಿಗೊಂದು ಹೊಸ ತಿರುವನ್ನು ಕೊಟ್ಟವರು ಶ್ರೀಮಂತ ಗೊಳಿಸಿದವರುಈ ಮಹಿಳೆಯರೇ. ಇವರಿಂದಲೇ ರಂಗಭೂಮಿ ರಂಗೇರಿತು. ಬೆರಳಣಿಕೆಯಷ್ಟು ಇದ್ದ ಕಂಪನಿಗಳು ಯಾವಾಗ ಮಹಿಳೆ ರಂಗಭೂಮಿಗೆ ಪದಾರ್ಪಣೆ ಮಾಡಿದಳೋ ಆಗ ಹಲವಾರು ಕಂಪನಿಗಳು ಜನ್ಮಪಡೆದವು. ಕಂಪನಿಗಳ ಸಂಖ್ಯೆ ಹೆಚ್ಚಾದಂತೆ ನಟಿಯರ ಬೇಡಿಕೆ ಹೆಚ್ಚಾಯಿತು.

ಸಂಗೀತದ ಜೊತೆಗೆ ತಮ್ಮ ಅದ್ಭುತ ನಟನೆಯಿಂದ ರಂಗಭೂಮಿಯ ಸಾಮ್ರಾಜ್ಞಿಯರಾಗಿ ಮೆರೆದರು. ಆವತ್ತಿನ ಸಮಾಜ ಸಂಘದ ಒಡೆಯರು ಅವರನ್ನು ಗೌರವದಿಂದಲೇ ಕಾಣುತ್ತಿದ್ದರು. ಇವರದು ಅಲೆಮಾರಿ ಬದುಕು ಕಂಪನಿ ಹೋದಕಡೆಗೆಲ್ಲಾ ಇವರು ಹೋಗಲೇಬೇಕು. ಹಾಗಾಗಿ ಒಂದೊಂದು ಊರಿನಲ್ಲಿ ಒಂದೊಂದು ಅನುಭವ. ಇವರಾ! ನಾಟಕದವರು ಎಂಬ ಕೀಳರಿಮೆ ಹಾಗಾಗಿ ಅವರಿಗೆ ಇರಲಿಕ್ಕೆ ಬಾಡಿಗೆ ಮನೆಗಳು ಕೊಡುತ್ತಿರಲಿಲ್ಲವಂತೆ ಇನ್ನು ಕೆಲವರು ನಮ್ಮ ಊರಿಗೆ ಬಂದು ಬಹಾಳs ಚೆಂದ ನಾಟಕ ಮಾಡಿದ್ರಿ ಸಾಕ್ಷಾತದೇವಿನೇ ನಮ್ಮೂರಿಗೆ ಬಂದಾಳಂತ ಅನಸ್ತು ಅಂತ ಉಡಿ

ತುಂಬಿ ಕಳುಹಿಸಿದವರೂ ಉಂಟು ಕಹಿ ಸಿಹಿ ಎರಡರ ಅನುಭವಗಳು ಹಲವರಿಗೆ ಎರಡನ್ನೂ ಅನುಭವಿಸಲೇಬೇಕು. ಇವರು ಹಗಲು ಹೊತ್ತಿನಲ್ಲಿ ಕಾಣುವುದೇ ಅಪರೂಪ ಆ ಕಾಲಕ್ಕೆ ಶ್ರೀಕಂಠಶಾಸ್ತ್ರಿಗಳು, ಗೋಕಾಕ ಕಂಪನಿ ಮಾಲೀಕರು ಚಿತ್ತರಗಿ ಕಂಪನಿ ಮಾಲೀಕರು ನಟಿಯರನ್ನು ಹೊರಗೆ ಹೋಗಲು ಬಿಡುತ್ತಿರಲಿಲ್ಲವಂತೆ ಹೋದರೂ ಸಹ ತಲೆತುಂಬಾ ಸೆರಗುಹೊದ್ದುಕೊಂಡು ಕಾರಿನಲ್ಲಿ ಹೋಗಬೇಕು. ರಾತ್ರಿ ಹೊತ್ತು ಬಣ್ಣದ ಬೆಳಕಿನಲ್ಲಿ ನೋಡಿದವರನ್ನು ಹಗಲು ಹೊತ್ತಿನಲ್ಲಿ ನೋಡಿದರೆ ಆಶ್ಚರ್ಯ ನಿರಾಶೆಯಾಗುವದರಲ್ಲಿ ಸಂದೇಹವೇ ಇಲ್ಲ. ಬಹಳಷ್ಟು ಪ್ರೇಕ್ಷಕರು ನಾಟಕದ ನಟಿಯರನ್ನು ನೋಡಲೆಂದೇ ಬಂದವರಿರುತ್ತಾರೆ. ಯಾಕೆಂದರೆ ಬಣ್ಣದ ಬದುಕಿನ ಹಿಂದಿನ ಸತ್ಯ ಅವರಿಗೆ ಗೊತ್ತಿರುವದಿಲ್ಲ. ಬಣ್ಣಕ್ಕೆ ಮರುಳಾಗಿ ಮನೆಮಠಕಳಕೊಂಡವರುಂಟು. ಕಂಪನಿ ಮಾಲೀಕ ತನ್ನ ನಾಟಕದ ಕಲೆಕ್ಷನ್ ಹೆಚ್ಚಿಸಿಕೊಳ್ಳಲು ನಟಿಯರ ಕಾಳಜಿ ಮಾಡುವುದು ಅನಿವಾರ್ಯವಾಗಿತ್ತು.

ಅದ್ಭುತ ನಟನೆಯ ಸುಂದರ ಮೈಮಾಟದ ನಟಿಯರು ಕಂಪನಿಯ ಆಸ್ತಿಯೇ ಆಗಿದ್ದರು. ಅವರೇ ಮುಂದೆ ಕಂಪನಿ ಮಾಲೀಕನ ತಾರಾ ಪತ್ನಿಯರ ಪಟ್ಟವನ್ನು ಅಲಂಕರಿಸಿದ್ದುಂಟು. ಅದಷ್ಟೋ ಹಿರಿಯ ಕಲಾವಿದೆಯರಿಗೆ ನಟನೆಯೊಂದನ್ನು ಬಿಟ್ಟರೆ ಬೇರೆ ಹೊರಪ್ರಪಂಚದ ಜ್ಞಾನವೇ ಇರಲಿಲ್ಲ. ಕಲೆಯೇ ಅವರಿಗೆ ದೈವ ತಮ್ಮ ಶ್ರದ್ಧೆ ಭಕ್ತಿಯಿಂದ ರಂಗಭೂಮಿಯನ್ನು ಶ್ರೀಮಂತಗೊಳಿಸಿದ ಈ ನಟಿಯರ ಬದುಕು ಮಾತ್ರ ಶ್ರೀಮಂತವಾಗಲಿಲ್ಲ.

ರಂಗಭೂಮಿ ರಂಗಭೂಮಿಯ ಮಹಿಳೆಯರು, ಎಂದರೇನೆ ಒಂದು ರೀತಿಯ ಉಪೇಕ್ಷಗೆ ಒಳಗಾದಂತ ಕ್ಷೇತ್ರ ತನ್ನ ನಡೆ ನುಡಿಯಿಂದ ಅವಳು ಸಚ್ಚಾರಿತ್ರ್ಯಳಾಗಿದ್ದರೂ ಅವಳನ್ನು ನೋಡುವ ದೃಷ್ಟಿಕೋನ ಬದಲಾಗಿಲ್ಲ. ಹಾಗಂತ ಇನ್ನುಳಿದ ಕ್ಷೇತ್ರದ ಮಹಿಳೆಯರ ಸ್ಥಿತಿ ನೆಟ್ಟಗಿದೆ ಎಂದು ಹೇಳುವಂತೆಯೂ ಇಲ್ಲ ಸುಪ್ರಿಂಕೋರ್ಟಿನ ನ್ಯಾಯಾಧೀಶರಾದ ರಂಗನಾಥ ಮಿಶ್ರ ಅವರು ಹೇಳಿದ ಮಾತನ್ನು ಕೇಳಿದರೆ ಗೊತ್ತಾಗುತ್ತದೆ "ಕಛೇರಿಗಳಲ್ಲಿ ಕೆಲಸ ಮಾಡುವುದನ್ನು ನಿಲ್ಲಿಸಿ ಪುರುಷರೊಂದಿಗೆ ಸ್ಪರ್ಧಿಸುವುದನ್ನು ನಿಲ್ಲಿಸಿ ಮನೆಗೆ ಮರಳಿ, ಮಹಿಳೆಯ ಸ್ಥಾನ ಮನೆಯಲ್ಲಿ"[6] 1990ರಲ್ಲಿ ನ್ಯಾಯಸ್ಥಾನದಲ್ಲಿ ಕುಳಿತು ಎಲ್ಲರಿಗೂ ನ್ಯಾಯವನ್ನು ಒದಗಿಸುವ ಬುದ್ಧಿಜೀವಿಗಳೆ ಹೀಗೆ ಹೇಳುವುದು ಎಂಥ ವಿಪರ್ಯಾಸ? ಇನ್ನು ನಿರಕ್ಷರ ಕುಕ್ಷಿಗಳೂ, ಹೊರಪ್ರಪಂಚದ ಗಂಧವೇ ಇಲ್ಲದ ರಂಗಭೂಮಿಯನ್ನೇ ತಮ್ಮ ಜಗತ್ತೆಂದು ತಿಳಿದಂತ ಮಹಿಳೆಯರಿಗೆ ಇವತ್ತಿನ ಸಮಾಜ ಕೊಟ್ಟಂತ ಸ್ಥಾನವನ್ನು ನೋಡಿದರೆ ಸಮಾಧಾನಕರವಾಗಿಲ್ಲ.

---

[6] ಮಹಿಳೆ ಬಿಡುಗಡೆಯ ಹಾದಿಯಲ್ಲಿ ಲೇಖಕಿ ಎಸ್. ಗಾಯತ್ರಿ ಪುಟ-36

ಅರವತ್ತರ ದಶಕದಲ್ಲಿದ್ದ ವೃತ್ತಿರಂಗಭೂಮಿಯ ಅಬ್ಬರ ಅರ್ಭಟ ಇಳಿಮುಖವಾಗುತ್ತ ನಡೆದಾಗ ಅದೆಷ್ಟೋ ಕಲಾವಿದೆಯರು ಗ್ರಾಮೀಣ ರಂಗಭೂಮಿಯನ್ನು ಆಶ್ರಯಿಸಬೇಕಾಯ್ತು. ಊರಿನ ಜಾತ್ರೆ ಉತ್ಸವಗಳಲ್ಲಿ ಗ್ರಾಮೀಣ ಭಾಗದಲ್ಲಿ ಈಗಲೂ ನುರಿತ ನಟಿಯರನ್ನು ಕರೆಯಿಸಿ ನಾಟಕ ಮಾಡುವ ಪದ್ಧತಿಉಂಟು ಅಂಥ ಸಂದರ್ಭದಲ್ಲಿ ಊರ ಪ್ರಮುಖರೆನಿಸಿಕೊಂಡವರು ವಿಶೇಷ ಮುತುವರ್ಜಿ ವಹಿಸುವುದು ಸಹಜ. ಆಗೆಲ್ಲ ಅವರ ಪತ್ನಿಯರು ಈ ನಟಿಯರನ್ನು ಸವತಿಮಾತ್ಸರ್ಯದಿಂದಲೇ ಕಾಣುವುದುಂಟು. ಊರ ಕಾಮುಕರ ಕಣ್ಣು ಇವರ ಮೇಲೆ ಬಿದ್ದರೆ ರಾತ್ರೋ ರಾತ್ರಿ ಊರಿನ ಅಡ್ಡರಸ್ತೆಯವರೆಗೆ ನಡೆದುಕೊಂಡು ಬಂದು ಮುಂದೆ ಬಸ್ಸಿಡಿದು ಊರು ಸೇರಿದ ಅನುಭವಗಳು ಇವರಿಗೆ ಹೊಸದಲ್ಲ.

ಕಲಾವಿದೆಯರು ತಮ್ಮೂರಿಗೆ ಬಂದಿದ್ದಾರೆ ಎಂದು ಹೋಳಿಗೆ ಊಟಮಾಡಿಸಿದ ಉದಾಹರಣೆಗಳು ಇವೆ. ಉಂಡಮೇಲೆ ಕುಳಿತ ಜಾಗಕ್ಕೆ ನೀರು ಸಿಂಪಡಿಸಿಯೋ ಇಲ್ಲಾ ಸೆಗಣಿಯಿಂದ ಸಾರಿಸಿಯೋ ಮಡಿಮಾಡಿದ್ದುಂಟು ಸಿಹಿಹೋಳಿಗೆ ಉಂಡ ಮನಸ್ಸು ಕಹಿಯಾಗಿರಲಿಕ್ಕೆ ಸಾಕು ಇವರ ಬದುಕು ಸಮಾಜಮುಖಿಯಾಗಲೇ ಇಲ್ಲ "ಜಗವೆಲ್ಲ ನಗುತಿರಲಿ ಜಗದಲವು ನನಗಿರಲಿ" ಎಂಬ ಕವಿವಾಣಿಯಂತೆ ಬದುಕಿದವರು ಇವರು. "ಮನುಷ್ಯರ ಹೃದಯಗಳನ್ನು ಬೆಸೆಯುವ ಶಕ್ತಿ ಅವನ ಮನಸ್ಸನ್ನು ಬೆಸೆಯುವ ಶಕ್ತಿ, ಸಂಗೀತ ನಾಟಕಕ್ಕೆ ಬಿಟ್ಟರೆ ಮತ್ತಾವುದಕ್ಕೂ ಇಲ್ಲ. ಜಾತಿ ಮತ ಮೀರಿದ್ದು ಕಲೆ"[7] ಗದುಗಿನ ಡಾ॥ ಸಿದ್ದಲಿಂಗ ಸ್ವಾಮಿಗಳು ಹೇಳಿದ ಮಾತು ಪ್ರಸ್ತುತ. ನಮ್ಮದು ಜಾತ್ಯಾತೀತ ದೇಶ ಎನ್ನುವುದು ಬರೀ ಹಾಳೆಯಲ್ಲಿ. ನಿಜವಾಗಿಯೂ ಅದನ್ನು ಅನುಷ್ಠಾನಕ್ಕೆ ತಂದವರು ರಂಗಭೂಮಿಯ ಕಲಾವಿದರು. ಸರ್ವಧರ್ಮ ಸಮನ್ವಯತೆ ನೋಡಲು ಸಿಗುವುದು ರಂಗಭೂಮಿಯಲ್ಲಿ ಮಾತ್ರ. ರಂಗಭೂಮಿಯ ಕಲಾವಿದರು ಪಬ್ಲಿಕ್ ಪ್ರಾಪರ್ಟಿ ಇದ್ದಂತೆ. ಅವರು ಸಣ್ಣದೊಂದು ತಪ್ಪು ಮಾಡಿದರೂ ಬೆಳಕಿಗೆ ಬರುತ್ತದೆ ಜಡ ಸಮಾಜಕ್ಕೆ ಚಲನೆಯನ್ನು ಕೊಡುವ ಶಕ್ತಿ ರಂಗಭೂಮಿಗಿದೆ. ಇಂಥ ರಂಗಭೂಮಿಗೆ ಇನ್ನಷ್ಟು ಚೈತನ್ಯವನ್ನು ತುಂಬಿದವರು ಮಹಿಳೆಯರು ಅದೆಷ್ಟೋ ಹಿರಿಯ ಕಲಾವಿದೆಯರು ಕಂಪನಿಗಳು ನಷ್ಟದಲ್ಲಿದ್ದಾಗ ಮೈಮೇಲಿನ ಒಡವೆಗಳನ್ನು ಮಾರಿ ಆರ್ಥಿಕ ಸಹಾಯವನ್ನು ಮಾಡಿ ಕಂಪನಿಗಳನ್ನು ಉಳಿಸಿದ್ದಾರೆ. ರಂಗಭೂಮಿಯನ್ನು ಬೆಳೆಸಿದ್ದಾರೆ. ಅಂಥವರ ಬಗ್ಗೆ ನಮಗೊಂದಿಷ್ಟು ಸಹಾನುಭೂತಿ, ಅನುಕಂಪದ ಅವಶ್ಯಕತೆ ಇದೆ.

---

[7] ಚಂದ್ರಶೇಖರ ವಸ್ತ್ರದ. "ಕನ್ನಡ ಜಗದ್ಗುರು." ಪುಟ–78.

ಕಲೆ, ಕಲಾವಿದರನ್ನು ಉಳಿಸುವ ಪ್ರಯತ್ನ ನಾವುಗಳು ಮಾಡಬೇಕಾಗಿದೆ. ಯಾಕೆಂದರೆ ಸಮಾಜವನ್ನು ತಿದ್ದುವ ಕೆಲಸವನ್ನು ನಾಟಕಗಳು ಮಾಡುತ್ತವೆ. ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರ ಮೇಲೆ ಸತ್ಯ ಹರಿಶ್ಚಂದ್ರ ನಾಟಕ ಬಹಳಷ್ಟು ಪ್ರಭಾವವನ್ನು ಬೀರಿತ್ತು. ಸಮಾಜ ಕೆಟ್ಟರೆ ನಾಟಕ ನೋಡಿ ಸುಧಾರಿಸಿಕೊಳ್ಳಬಹುದು. ಆದರೆ ನಾಟಕಕಾರನ ಕೆಟ್ಟರ ಏನು ಮಾಡುವುದು ಎಂದು ಬೇಂದ್ರೆ ಅವರು ಹೇಳಿದ ಮಾತಿನಲ್ಲಿ ಔಚಿತ್ಯವಿದೆ.

ಸರಕಾರ ಯಾವುಯಾವುದಕ್ಕೋ ಏನೆಲ್ಲಾ ದುಡ್ಡು ಖರ್ಚು ಮಾಡುತ್ತದೆ. ಈ ಕಲಾವಿದರನ್ನು ಕಣ್ಣೆತ್ತಿಯೂ ನೋಡುವದಿಲ್ಲ ಎಂಬ ಆರೋಪ ಕೆಲ ನಟಿಯರದು ಅಲ್ಲದೆ ಇವರಿಗೆ ತಮ್ಮದೇ ಆದಂತ ಒಂದು ಕಲಾವಿದರ ಸಂಘವೂ ಇಲ್ಲ ಪ್ರತಿಭೆ ಇದೆ. ಆದರೆ ಪ್ರತಿಭೆಗಳಿಗೆ ಅವಕಾಶಗಳಿಲ್ಲ ಎಂಬ ಕೊರಗು ಇನ್ನು ಕೆಲವರದು.

ಅವರನ್ನು ಹತ್ತಿರದಿಂದ ಕಂಡಾಗ ಮಾತ್ರ ಸತ್ಯ ಏನೆಂಬುದು ಗೊತ್ತಾಗುತ್ತದೆ ಝುಗಮಗಿಸುವ ಬಣ್ಣದ ಬೆಳಕಿನಲ್ಲಿ ನೋಡಿದವರಿಗೆ ಸತ್ಯ ಹೇಗೆ ಗೊತ್ತಾಗಬೇಕು?

ಇದಕ್ಕಾಗಿ ವೃತ್ತಿರಂಗಭೂಮಿಗೆ ಸಮಾಜ ಋಣಿಯಾಗಿರಬೇಕು. ಸರ್ಕಾರ ಮತ್ತು ಸಮಾಜ ಇವರ ನೋವು ನಲಿವುಗಳಿಗೆ ಸ್ಪಂದಿಸಬೇಕು. ಮೂರು ವರ್ಷಗಳ ಕಾಲ ಕ್ಷೇತ್ರಕಾರ್ಯ ಕೈಕೊಂಡಾಗ ಅರಿವಿಗೆ ಬಂದ ಅವರ ಸಮಸ್ಯೆಗಳಿಗೆ ಕೆಲವು ಪರಿಹಾರಗಳನ್ನು ಸೂಚಿಸಬಹುದೆನಿಸುತ್ತದೆ.

1. ಮಹಿಳೆಯರಾಗಲಿ, ಪುರುಷರಾಗಲಿ 45 ವಯಸ್ಸು ದಾಟಿದ ಮೇಲೆ ರಂಗಭೂಮಿ ಅವರನ್ನು ಹೊರಹಾಕುತ್ತದೆ. ಮುಖದ ಮೇಲೆ ಗೆರೆಮೂಡಿದರೆ ಪ್ರೇಕ್ಷಕರು ಅಂಥವರನ್ನು ಇಷ್ಟ ಪಡುವುದಿಲ್ಲ. ಆಗ ಅವರು ಅಕ್ಷರಶಹ ನಿರುದ್ಯೋಗಿಗಳಾಗುತ್ತಾರೆ. ಆದಾಯ ನಿಂತು ಹೋಗುತ್ತದೆ. ಆದ್ದರಿಂದ ಸರ್ಕಾರ ಮಾಶಾಸನ ನೀಡಲು 60 ವರ್ಷ ಆಗಿರಲೇಬೇಕೆಂಬ ನಿಬಂಧನೆಯನ್ನು ಸಡಿಲಿಸಿ 45 ವರ್ಷಕ್ಕೆ ಮಾಶಾಸನ ನೀಡಬೇಕು.
2. ಮಾಶಾಸನ ನೀಡುವ ರೀತಿಯನ್ನು ಸರ್ಕಾರ ಜಾರಿಗೊಳಿಸಿದ್ದರೂ ಅನೇಕರಿಗೆ ಅದು ತಲುಪಿಲ್ಲ. ಕಲಾವಿದರ ಅಜ್ಞಾನ, ಅನಕ್ಷರತೆ, ಮಧ್ಯವರ್ತಿಗಳ ಹಣ ಮಾಡುವ ಹಾವಳಿ, ವಶೀಲಿಬಾಜಿ ದಂದೆಗಳು ಇದಕ್ಕೆ ಕಾರಣವಾಗಿವೆ. ಸರಕಾರ ಕಲಾವಿದರನ್ನು ಗುರುತಿಸುವುದಕ್ಕಾಗಿ ಹಿರಿಯ ಕಲಾವಿದರ ಸಮೀತಿಯೊಂದನ್ನು ರಚಿಸಬೇಕು. ಈ ಸಮೀತಿ ಇಡೀ ಕರ್ನಾಟಕವನ್ನು ಸಂಚರಿಸಿ ಅರ್ಹ ಕಲಾವಿದರನ್ನು ಗುರುತಿಸಿ ಸರಕಾರಕ್ಕೆ ವರದಿ ನೀಡಬೇಕು. ಈ ವರದಿಯ ಆಧಾರದ ಮೇಲೆ ಸರಕಾರ ಇವರಿಗೆ ಮಾಶಾಸನ ನೀಡಬೇಕು. ಇದರಿಂದ ಮಾಶಾಸನಕ್ಕಾಗಿ ಕಲಾವಿದರು ಕಂಡ ಕಂಡವರ ಕೈಕಾಲು ಹಿಡಿಯುವುದು ತಪ್ಪುತ್ತದೆ. ಮನೆ ಬಾಗಿಲಿಗೆ ಮಾಶಾಸನ ಬರುತ್ತದೆ.

3. ಮಕ್ಕಳಿಲ್ಲದ, ಮಕ್ಕಳಿಂದ ದೂಡಲ್ಪಟ್ಟ, ಯಾರ ಆಸರೆಯೂ ಇಲ್ಲದ ಕಲಾವಿದರೂ ಅನೇಕರಿದ್ದಾರೆ. ಇಂಥವರಿಗಾಗಿ ರಾಜ್ಯಸರ್ಕಾರ ಪ್ರತ್ಯೇಕವಾಗಿ ವೃದ್ಧಾಶ್ರಮ ಒಂದನ್ನು ಸ್ಥಾಪಿಸಿ ಇಂಥ ಕಲಾವಿದರು ಕೊನೆಯ ದಿನಗಳನ್ನು ನೆಮ್ಮದಿಯಿಂದ ಕಳೆಯುವಂತೆ ನೋಡಿಕೊಳ್ಳಬೇಕಾಗಿದೆ.
4. ಊರಿಂದೂರಿಗೆ ಅಲೆಯುವ ಮಂಡಳಿಗಳೊಂದಿಗೆ ಕಲಾವಿದರೂ ಅಲೆಯಬೇಕು. ಅವರೊಂದಿಗೆ ಅವರ ಮಕ್ಕಳು ಅಲೆಯಬೇಕು. ಹೀಗಾಗಿ ಕಲಾವಿದರ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಾರೆ. ಸರಕಾರ ರಾಜ್ಯದ ನಾಲ್ಕು ವಿಭಾಗಗಳಲ್ಲಿ ವಿಭಾಗಕ್ಕೊಂದು ಉಚಿತ ವಸತಿ ಶಾಲೆಗಳನ್ನು ತೆರೆದು ಕನಿಷ್ಠ ಪಿ.ಯು.ಸಿ. ವರೆಗಾದರೂ ಇವರಿಗೆ ಶಿಕ್ಷಣ ಕೊಡುವ ಮೂಲಕ ಇವರ ಸಮಸ್ಯೆ ಬಗೆಹರಿಸಬಹುದು.
5. ಜಿಲ್ಲೆಗೊಂದು ರಂಗಶಾಲೆ ಸ್ಥಾಪಿಸಿ, ರಂಗಾಸಕ್ತರಿಗೆ ಅಭಿನಯ, ಸಂಗೀತ, ನಾಟಕ ರಚನೆ, ನಿರ್ದೇಶನ ವಿವಿಧ ರೀತಿಯ ವಾದ್ಯಗಳನ್ನು ನುಡಿಸುವ ತರಬೇತಿಯನ್ನು ಈ ಶಾಲೆಗಳ ಮೂಲಕ ನೀಡಬೇಕು. ಇದನ್ನೊಂದು ಡಿಪ್ಲೋಮಾ ಕೋರ್ಸ ರೀತಿಯಲ್ಲಿ ಮಾನ್ಯತೆ ನೀಡಬೇಕು. ರಂಗಭೂಮಿಯಿಂದ ನಿವೃತ್ತಿಗೊಂಡ ಕಲಾವಿದರನ್ನು ಅವರ ಶೈಕ್ಷಣಿಕ ಅರ್ಹತೆ ನೋಡದೇ ಇಂಥ ಶಾಲೆಗಳಿಗೆ ಶಿಕ್ಷಕರನ್ನಾಗಿ ನೇಮಿಸಬೇಕು. ಅವರ ಪ್ರತಿಭೆಯನ್ನು ಬಳಸಿಕೊಳ್ಳಲು ಸಮಾಜಕ್ಕೆ ಅವಕಾಶ ಮಾಡಿಕೊಡಬೇಕು.
6. ಪ್ರತಿ ತಾಲ್ಲೂಕಿಗೊಂದರಂತೆ ಸುಸಜ್ಜಿತ ರಂಗ ಮಂದಿರಗಳನ್ನು ಸ್ಥಾಪಿಸಿ ವೃತ್ತಿರಂಗ ಮಂಡಳಿಗಳಿಗೆ ಅನುಕೂಲತೆ ಕಲ್ಪಿಸಿ ಕೊಡಬೇಕು. ಇಂಥ ಸರ್ಕಾರಿ ರಂಗಮಂದಿರಗಳಲ್ಲಿ ನಾಟಕ ಪ್ರದರ್ಶಿಸುವ ಮಂಡಳಿಗಳಿಗೆ ಕಡಿಮೆದರದ ಬಾಡಿಗೆ ಇರಬೇಕು. ಅನುಮತಿಗಾಗಿ ವಿವಿಧ ಇಲಾಖೆಗಳಿಗೆ ಅಲೆದಾಡುವ ಶ್ರಮ ಇರದಂತೆ ನೋಡಿಕೊಳ್ಳಬೇಕು. ಇಷ್ಟೇ ಅಲ್ಲ ಇಂಥ ರಂಗಮಂದಿಗಳು ನಿರ್ಮಾಣವಾದರೆ ಸುತ್ತಮುತ್ತಲ ಭಾಗಗಳಿಗೆ ರಂಗ ಚಟುವಟಿಕೆಗಳಿಗೆ ಉತ್ತೇಜನವೂ ಸಿಗುತ್ತದೆ.

ಕಂಪನಿ ನಾಟಕಗಳಿಂದ ಜನಪದ ರಂಗಭೂಮಿ, ಜನಪದ ಕಲೆಗಳು ಲವಲವಿಕೆ ಕಳೆದುಕೊಂಡವು. ಸಿನೇಮಾಗಳು ಬಂದನಂತರ ವೃತ್ತಿರಂಗಭೂಮಿಯ ಬಣ್ಣ ಮಾಸಿತು. ಟಿ.ವಿ.ಯ ಧಾರಾವಾಹಿಗಳು ಬಂದನಂತರ ಸಿನೆಮಾ ತನ್ನ ಆಕರ್ಷಣೆ ಕಳೆದುಕೊಂಡಿತು. ಈಗ ಧಾರಾವಾಹಿಗಳು ಕೂಡ ಜನರಲ್ಲಿ ಬೇಸರವನ್ನುಂಟುಮಾಡುತ್ತಿದ್ದು ಜನ ಮತ್ತೆ ರಂಗಭೂಮಿಯತ್ತ ವಾಲುತ್ತಿದ್ದಾರೆ. ಆದ್ದರಿಂದ ಸರಕಾರ ಮತ್ತು ಸಮಾಜ ಮೇಲೆ ತಿಳಿಸಿದ ಎಲ್ಲಾ ಸೌಕರ್ಯಗಳನ್ನು ಅವರಿಗೆ ಒದಗಿಸಿದರೆ ಮತ್ತೆ ವೃತ್ತಿರಂಗಭೂಮಿ ತನ್ನ ಮೊದಲಿನ ವೈಭವಕ್ಕೆ ಮರಳಬಹುದು.

# ಅಧ್ಯಾಯ-4

# ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರು ಹಾಗೂ ಅವರ ಕೊಡುಗೆ

# ಅಧ್ಯಾಯ–ನಾಲ್ಕು

# ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರು ಹಾಗೂ ಅವರ ಕೊಡುಗೆ

ನನ್ನ ಅಧ್ಯಯನದ ಅನುಕೂಲಕ್ಕಾಗಿ ಮಹಿಳಾ ಕಲಾವಿದೆಯರು ಸಾಧಿಸಿದ ಸಾಧನೆಯನ್ನು ಇಲ್ಲಿ ವಿವರಿಸಲಾಗಿದೆ.

1. ಹೆಚ್ಚು ಮಹಿಳೆಯರನ್ನು ನೀಡಿದ ಗ್ರಾಮಗಳು
2. ಮುಸ್ಲಿಂ ಮಹಿಳೆಯರು
3. ಕಂಪನಿ ಒಡತಿಯರಾಗಿ
4. ರಂಗ ಅಭಿನೇತ್ರಿಯರಾಗಿ
5. ಇಡೀ ಕುಟುಂಬವಾಗಿ ತೊಡಗಿಸಿಕೊಂಡವರು
6. ತೆರೆಯಮರೆಯ ಪ್ರತಿಭೆಗಳು
7. ವಿಶೇಷ ಪಾತ್ರಕ್ಕೆ ಮೀಸಲಾದವರು
8. ಸಂಗೀತಗಾರ್ತಿಯರಾಗಿ ಮಿಂಚಿದವರು

## 1. ಹೆಚ್ಚು ಮಹಿಳೆಯರನ್ನು ನೀಡಿದ ಗ್ರಾಮಗಳು :

ಉತ್ತರ ಕರ್ನಾಟಕ ಒಂದಿಲ್ಲೊಂದು ಕಾರಣದಿಂದ ಸದಾ ಸುದ್ದಿಯಲ್ಲಿರುವ ನಾಡು. ಬರದ ಬೇಗೆಯಿಂದಲೋ, ಬಿಸಿಲ ಝಳದಿಂದಲೋ, ರೈತರ ಆತ್ಮಹತ್ಯೆಯಿಂದಲೋ, ಹೀಗೆ ಸತತ ಎಲ್ಲರ ಬಾಯಲ್ಲಿಯೂ ತಾಂಬೂಲ ತಂಬಾಕಿನಂತೆ ಯಾವಾಗಲೂ ಈ ಪ್ರದೇಶದ ಕಥೆ ಹಸಿಹಸಿಯಾಗಿಯೇ ಇರುತ್ತದೆ.

ಬರದ ನಾಡಾದರೇನು? ಇಲ್ಲಿ ಕಲೆ, ಸಾಹಿತ್ಯಕ್ಕೆ ಮಾತ್ರ ಬರವಿಲ್ಲ. ಸಾಂಸ್ಕೃತಿಕವಾಗಿ ಶ್ರೀಮಂತನಾಡು ನಮ್ಮದು. ಕಲಾದೇವತೆಯ ಆರಾಧಕರು ನಾವುಗಳು ಎಂಬುದಕ್ಕೆ ಉತ್ತರ ಕರ್ನಾಟಕದ ಹಲವು ಗ್ರಾಮಗಳನ್ನು ಊರುಗಳನ್ನು ನೋಡಿದಾಗ ಗಮನಕ್ಕೆ ಬಾರದೆ ಇರದು.

ಮುಂಬೈ ಕರ್ನಾಟಕ, ಹೈದ್ರಾಬಾದ ಕರ್ನಾಟಕ, ಮದ್ರಾಸ ಕರ್ನಾಟಕ, ಹೀಗೆ ಹರಿದು ಹಂಚಿಹೋಗಿದ್ದ ಈ ನಾಡು, ಸಾಂಸ್ಕೃತಿಕವಾಗಿ ಎಲ್ಲರ ಮನಸುಗಳನ್ನು ಬೆಸೆಯುವ ಒಂದು ಕೊಂಡಿಯ ಹಾಗೆ ರಂಗಭೂಮಿ ಒಂದೆಡೆ ಸದ್ದಿಲ್ಲದೆ ತನ್ನ ಕೆಲಸವನ್ನು ಮಾಡುತ್ತಲಿತ್ತು.

ಚಾಲುಕ್ಯರು, ಹೊಯ್ಸಳರು, ಕದಂಬರು, ನಿಜಾಮರು, ನವಾಬರು ಆಳಿದ ನಾಡು ನಮ್ಮದು.

ಸಾಮ್ರಾಜ್ಯ ವಿಸ್ತಾರ, ವೈರಿಗಳನ್ನು ಗೆಲ್ಲುವುದು ಪ್ರಜೆಗಳ ಸುಃಖ ದುಃಖದಲ್ಲಿ ಭಾಗಿಯಾದಂತ ದಣಿದ ಮನಸುಗಳಿಗೆ ಒಂದಿಷ್ಟು ಮನರಂಜನೆಯ ಅವಶ್ಯಕತೆಯಿತ್ತು. ಆ ಕೆಲಸವನ್ನು ರಾಜನರ್ತಕಿಯರು ಮಾಡುತ್ತಿದ್ದರು. ಅವರ ಮನಸ್ಸಿನ ಬೇಸರವೂ ದೂರವಾದಂತಾಯಿತು. ಇವರಿಗೆ ಬದುಕುವುದಕ್ಕೆ ಒಂದುದಾರಿಯಾಯ್ತು. ಎಲ್ಲಿಯವರೆಗೆ ಈ ಅರಸೊತ್ತಿಗೆ, ಸಾಮ್ರಾಜ್ಯಶಾಹಿಯಿತ್ತೋ ಅಲ್ಲಿಯವರೆಗೂ ಈ ಕಲಾವಿದೆಯರು ನೆಮ್ಮದಿಯ ಬದುಕನ್ನು ಸಾಗಿಸಿದ್ದರು. ಯಾವಾಗ ಈ ಸಾಮ್ರಾಜ್ಯಗಳು ಅವನತಿಯ ಹಾದಿಯನ್ನು ಹಿಡಿದವೋ ಆವಾಗ ಈ ಕಲಾವಿದೆಯರ ಬದುಕು ನೆಲೆತಪ್ಪಿದ ಹಕ್ಕಿಯಂತಾಯಿತು. ಸಂಗೀತ, ನೃತ್ಯ ಒಂದನ್ನು ಬಿಟ್ಟರೆ ಮತ್ತೇನೂ ಅವರಿಗೆ ಗೊತ್ತಿಲ್ಲ. ಸೌರಮಂಡಲದಲ್ಲಿಯ ಉಲ್ಕೆ ಉರುಳಿ ಬಿದ್ದಾಗ ಅದೂ ಒಂದೆಡೆಗೆ ಬೀಳದೆ ಇಡೀ ಭೂಮಂಡಲದಲ್ಲಿ ಚಿಕ್ಕ ಚಿಕ್ಕ ಕಣಗಳಾಗಿ ಬೀಳುವಂತೆ, ಈ ನರ್ತಕಿಯರು ತಮ್ಮ ತುತ್ತಿನ ಚೀಲವನ್ನು ತುಂಬಿಸಿಕೊಳ್ಳುವುದಕ್ಕಾಗಿ ಉತ್ತರ ಕರ್ನಾಟಕದ ಕೆಲ ಪ್ರದೇಶಗಳಲ್ಲಿ ಬಂದು ನೆಲೆಸಿರಬಹುದು.

ದೇವದಾಸಿಯರು, ಪಾತ್ರದವರು ಎಂಬ ಹೆಸರಿನಿಂದ ಕರೆಯಲ್ಪಡುವ ಇವರು ಅಂಗಭೋಗದ, ರಂಗಭೋಗದ ವೇಶ್ಯೆಯರಾಗಿ ಬದುಕುವ ದಾರಿಯನ್ನು ಕಂಡುಕೊಂಡರು. ಜೊತೆಗೆ ತಮಗೆ ಅನುಕೂಲವಾದ ಸೂಕ್ತ ಸ್ಥಳಗಳನ್ನು ಆಯ್ಕೆಮಾಡಿಕೊಂಡಿರಬಹುದು. ತಮ್ಮ ಅನುಕೂಲಕ್ಕಾಗಿ ಆಯ್ಕೆ ಮಾಡಿಕೊಂಡು, ಸಂಗೀತ ನೃತ್ಯದ ಮೂಲಕ ಹೊಟ್ಟೆಹೊರೆದುಕೊಳ್ಳುತ್ತಿರುವಾಗ ರಂಗಭೂಮಿಯ ಕಣ್ಣು ಈ ನಟಿಯರ ಮೇಲೆ ಬಿದ್ದರಲಿಕ್ಕೆ ಬೇಕು. ಆವತ್ತಿನ ವೃತ್ತಿನಾಟಕಗಳು ಸಂಗೀತಪ್ರಧಾನವಾಗಿದ್ದವು. ಒಟ್ಟಾರೆ ಬೀದಿಗೆ ಬಿದ್ದವರಿಗೆ ಒಂದು ಆಶ್ರಯತಾಣವಾಯ್ತು ಅಂದಿನ ರಂಗಭೂಮಿ.

ಹೀಗೆ ಉತ್ತರ ಕರ್ನಾಟಕದ ಕೆಲವೊಂದು ಗ್ರಾಮಗಳಾದ ಬದಾಮಿ ತಾಲೂಕಿನ ಹಂಸನೂರು, ಹೊಸಪೇಟ ತಾಲೂಕಿನ ಮರಿಯಮ್ಮನಹಳ್ಳಿ, ಕೂಡ್ಲಿಗಿ, ಹಾವೇರಿ ಜಿಲ್ಲೆಯ ಶಿಗ್ಗಾಂವ, ಬಾಗಲಕೋಟಿ ಜಿಲ್ಲೆಯ ಇಲಕಲ್ ಈ ಕೆಲವೊಂದು ಊರುಗಳಲ್ಲಿ ನಟಿಯರು ಇರುವುದು ತಿಳಿದು ಬಂತು. ಅಧ್ಯಯನದ ದೃಷ್ಟಿಯಿಂದ ಅವನ್ನು ಒಂದೊಂದಾಗಿ ನೋಡುವುದು ಅವಶ್ಯ.

## 1. ಹಂಸನೂರು ಗ್ರಾಮ :

ಚಾಲುಕ್ಯರಾಳಿದ, ಶಿಲ್ಪಕಲೆಯ ತವರೂರಾದ ಬದಾಮಿ ತಾಲೂಕಿನ ಹಂಸನೂರು ಗ್ರಾಮ ಒಂದು ಸಾಂಸ್ಕೃತಿಕ ಕೇಂದ್ರ ಅದಕ್ಕೆ ಅದರದೇ ಆದ ವಿಶೇಷತೆಯಿದೆ. ಚನ್ನದಾಸ ಪರಂಪರೆಯಿಂದ ಬೆಳೆದು ಬಂದಿರುವ, ಊರ ಹನುಮಂತದೇವರ ಸೇವಕರು ಎಂದು ಹೇಳಿಕೊಳ್ಳುವ, ಈ ಮನೆತನದ ಹೆಣ್ಣು ಮಕ್ಕಳು ನಟನೆಯನ್ನೇ ನಂಬಿ ಬದುಕಿದವರು. ಶ್ರೇಣಿಕೃತ ವ್ಯವಸ್ಥೆಯಲ್ಲಿ ಬದುಕುತ್ತಿರುವ ಇವರ ಮನೆಗಳಿಗೆ ಹೋದರೆ ಅಲ್ಲೊಬ್ಬ ನಟಿ ಇರಲೇಬೇಕು.

ಆದರೆ ಇವರ್‍ಯಾರೂ ಸ್ವ ಇಚ್ಚೆಯಿಂದ ನಟನೆಗೆ ಇಳಿದವರಲ್ಲ. ಬದುಕುವುದಕ್ಕೆ ಒಂದು ದಾರಿ ಕಂಡುಕೊಂಡವರು. ದೇವರ ಹೆಸರಿನಲ್ಲಿ ಪ್ರಾರಂಭವಾದ ಇವರ ಸೇವೆ ಊರ ದಣಿಯರ ಸ್ವಹಿತಾಸಕ್ತಿಯ ಪರಾಕಾಷ್ಠತೆಯನ್ನು ತಲುಪಿ ಬಿಸಿತುಪ್ಪ ಉಗಳಲಿಕ್ಕೂ ಆಗದೆ, ನುಂಗಲಿಕ್ಕೂ ಆಗದೆ ಪುರುಷ ದಬ್ಬಾಳಿಕೆಯ ಜೇಡ ಬಲೆಯಲ್ಲಿ ಸಿಕ್ಕು ಒದ್ದಾಡಬೇಕಾಯ್ತು. ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಕಲೆಯ ಹೆಸರಿನಲ್ಲಿ ಈ ದಾರಿಯನ್ನು ಹಿಡಿಯುವುದು ಅನಿವಾರ್ಯವಾಯ್ತು.

ಅಂಗ ಪ್ರದರ್ಶನಕ್ಕೆ ಊರ ಹನುಮಂತದೇವರ ಓಕುಳಿ ಒಂದು ಸೂಕ್ತ ಸ್ಥಳವಾದರೆ, ಜೊಲ್ಲು ಸುರಿಸುವವರಿಗೆ ಇದೊಂದು ಪುಕ್ಕಟೆ ಮನರಂಜನೆ. "ಹರಕೆಗೆ ತಂದ ಕುರಿ ತಳಿರು ಮೇಯ್ದಂತೆ" ಮೌಢ್ಯದ ಬಂದನದಲ್ಲಿ ಸಿಕ್ಕು ಒದ್ದಾಡುವವರು ಈ ದಲಿತ ಮಹಿಳೆಯರೇ.

ಚನ್ನದಾಸ ಕುಟುಂಬದ ಗಂಡಸರಿಗೆ ಊಳಲು ಭೂಮಿ ಇಲ್ಲ. ದುಡಿಯಲು ಕೆಲಸವಿಲ್ಲ, ಇದ್ದರೂ ಮಾಡುವ ಮನಸ್ಸಿಲ್ಲ. ಹೀಗಾಗಿ ಮನೆಯ ಅಧಿಪತ್ಯ ಮಹಿಳೆಯರದೇ. ಇನ್ನೊಂದು ವಿಶೇಷ ಈ ಗ್ರಾಮದಲ್ಲಿ ಪುರುಷ ಕಲಾವಿದರೇ ಇಲ್ಲ. ಅದೇನೆ ಇರಲಿ ಮೇಲ್ವರ್ಗದ ಸಮಾಜ ತನ್ನ ಆಶೆ ಆಮಿಷಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಈ ಕೆಳವರ್ಗದ ಹೆಣ್ಣು ಮಕ್ಕಳ ಮೇಲೆ ಹೇರಿದ ಕಟ್ಟಳೆಗಳು, ಒಂದು ಸಾಂಸ್ಕೃತಿಕ ವಾತಾವರಣವನ್ನು ಸೃಷ್ಟಿಸಿದಂತು ನಿಜ.

ಅಷ್ಟೇ ಅಲ್ಲ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯನ್ನು ಪ್ರವೇಶಿಸಿದ ಮೊದಲ ಮಹಿಳೆ ಎಂಬ ಹೆಗ್ಗಳಿಕೆಗೆ ಕಾರಣಳಾದ ಎಲ್ಲೂಬಾಯಿ ಗುಳೇದಗುಡ್ಡ ಇವಳು ಮೂಲತಃ ಹಂಸನೂರಿನ ಕಲಾವಿದೆ. ಗುಳೇದಗುಡ್ಡದ ಗುರುಲಿಂಗಪ್ಪ ಗೊಂಬಿ ಎಂಬ ಕಲಾವಿದನ ಕೈ ಹಿಡಿದ ಕಾರಣ, ಗಂಗೂಬಾಯಿ ದೇವದಾಸ ಇದ್ದವಳು ಗಂಗೂಬಾಯಿ ಗುಳೇದಗುಡ್ಡ ಆಗಿರಲಿಕ್ಕೆ ಬೇಕು. ಅಲ್ಲಿನ ಕೆಲ ಹಿರಿಯ ನಟಿಯರನ್ನು ಭೇಟಿಯಾದಾಗ ಈ ವಿಷಯ ತಿಳಿದು ಬಂದಿತು. ಹಂಸನೂರು ಇವತ್ತಿಗೂ ಕೂಡ ತನ್ನದೇ ಆದ ಒಂದು ಸಾಂಸ್ಕೃತಿಕ ನೆಲೆಯನ್ನು ಕಂಡುಕೊಂಡಿದೆ.

ಹಂಸನೂರಿನ ಪ್ರಮುಖ ಹಿರಿಯ ಕಲಾವಿದೆಯರು 1) ರಂಗಮ್ಮ ಧೋತ್ರೆ, 2) ಎಲ್ಲೂಬಾಯಿ ಚಿಮ್ಮಲ್, 3) ಅಂಬವ್ವ ಗುರಿಕಾರ, 4) ತಿಪ್ಪವ್ವ ಮಲಕಲ್, 5) ಪದ್ಮಾವತಿ ಚಿಂತಾಕಲ್.

## 1. ರಂಗಮ್ಮ ಧೋತ್ರೆ :

ಬದಾಮಿಯಿಂದ ಸುಮಾರು 12 ಕಿ.ಮೀ. ಅಂತರದಲ್ಲಿರುವ ಅಮೀನಗಡದಿಂದ ಬದಾಮಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಸಿಗುವ ಗ್ರಾಮವೇ ಈ ಹಂಸನೂರ ಮುಖ್ಯ ರಸ್ತೆಯಿಂದಿಳಿದು ಮತ್ತೆ ಎರಡು ಕಿ.ಮಿ ವರೆಗೂ ಗ್ರಾಮಕ್ಕೆ ನಡೆದುಕೊಂಡೇ ಹೋಗಬೇಕು.

ಮೇ ತಿಂಗಳು ಸುಡು ಬಿಸಿಲು, ಆದಾಗ್ಯೂ ಹಂಸನೂರಿನ ನಟಿಯರನ್ನು ಕಾಣುವ ತವಕದಲ್ಲಿ ಬಿಸಿಲೂ ಬೆಳದಿಂಗಳಾಯ್ತು. ಎದುರಿಗೆ ಬಂದವರನ್ನೆಲ್ಲ ವಿಚಾರಿಸುತ್ತ ನಡೆದಾಗ, ಪುಟ್ಟ ಮನೆಯಲ್ಲಿ ಯಾವದೇ ಬಿಗುಮಾನವಿಲ್ಲದ ದೊಡ್ಡ ಮನಸ್ಸಿನ ಆ ಹಿರಿಯ ನಟಿಯನ್ನು ಕಂಡಾಗ ಮನಸ್ಸು ಹಗುರಾಯ್ತು.

ಇಂಥ ವಿಷಯದ ಮ್ಯಾಲ ಪುಸ್ತಕಾ ಬರ್ಲಿಕತ್ತೀನಿ ಅದಕ್ಕೆ ನಿಮ್ಮ ಸಹಕಾರ ಬೇಕು ಎಂದಾಗ, ಯವ್ವಾ ನನಮಗಳ ಇದರಿಂದ ಏನ ಉಪಯೋಗ ಐತಿ. "ಯಾವ ಸರಕಾರನೂ ನಮಗ ದರಕಾರ ಮಾಡಿಲ್ಲ." ನೀವು ಇಲ್ಲಿತನಕ ಬಂದಿರಿ ಅಂದ್ರ ಒಂದ್ನಾಲ್ಕು ಸುಖ ದುಃಖದ ಅನುಭವಾನs ತಮ್ಮ ಮುಂದ ಹಂಚಿಕೊಳ್ಳಬೇಕನಸ್ತದ, ಎಂದು ಬಾಯ್ತುಂಬ ಎಲೆ ಅಡಿಕೆ ತುಂಬಿಕೊಂಡ ರಂಗಜ್ಜಿ ತನ್ನ ಬಣ್ಣದ ಬದುಕಿನ ಒಂದೊಂದೆ ಪುಟಗಳನ್ನು ಬಿಚ್ಚಿಟ್ಟಳು.

ಆಗಿನ ನಾಲ್ಕನೇಯ ಇಯತ್ತೆವರೆಗೆ ಓದಿದ ರಂಗಮ್ಮನ ಬದುಕು ಹಸನಾಗಬೇಕಾಗಿತ್ತು. ವಿಧಿಯ ಆಟ ಹೆತ್ತವ್ವ ಯಾರೆಂಬುದೇ ಇವಳಿಗೆ ಗೊತ್ತಿಲ್ಲ. ತಾಯಿ ಎನಿಸಿಕೊಂಡವಳು ಸಮಾಜಕ್ಕೆ ಹೆದರಿ ಕೆಲೋಡಿ ರಂಗನಾಥನ ಗುಡಿಯಲ್ಲಿ ಮಗುವನ್ನು ಬಿಟ್ಟು ಹೋದಳು. ಮಕ್ಕಳಿಲ್ಲದ ರಾಮವ್ವ ಎಂಬ ಹೆಣ್ಣು ಮಗಳು ಈ ಮಗುವಿಗೆ ತಾಯಿಯ ಪ್ರೀತಿಯನ್ನು ಧಾರೆಯೆರೆದಳು. ಅವಳ ಕೈಕೂಸಾಗಿ ನರಸಿಂಹಭಟ್ಟ ಗವಾಯಿಗಳ ಕಣ್ಣಕೂಸಾಗಿ ಬೆಳೆಯತೊಡಗಿದಳು ಈ ಹುಡುಗಿ. ಗವಾಯಿಗಳ ಗರಡಿಯಲ್ಲಿ ಬೆಳೆದ ಈ ಹುಡುಗಿಗೆ ಇನ್ನೇನು ಬೇಕು. ಸಾಕು ತಾಯಿ ರಾಮವ್ವಳೂ ಕೂಡಾ ಒಳ್ಳೇ ಹಾಡುಗಾರ್ತಿ. ರಂಗಮ್ಮ ಹನ್ನೆರಡು ವರ್ಷದವಳಿದ್ದಾಗ ರಂಗಭೂಮಿಯ ಪ್ರವೇಶವಾಯ್ತು. ಎಲ್ಲೂಬಾಯಿ ಗುಳೇದಗುಡ್ಡ ರಂಗಭೂಮಿ ಪ್ರವೇಶಿಸಲು ಗುರುಲಿಂಗಪ್ಪ ಗೊಂಬಿ ಕಾರಣರಾದರೆ, ರಂಗಮ್ಮ ಧೋತ್ರೆ ರಂಗಭೂಮಿಗೆ ಬರಲು ಚಂದಪ್ಪ ಧೋತ್ರೆ ಕಾರಣರಾಗುತ್ತಾರೆ.

ಮೈಂದರಗಿ ರೇಣುಕಾಚಾರ್ಯರ ಕಂಪನಿಯಲ್ಲಿ ಸುಮಾರು 25 ವರ್ಷ ಅವಳು ಬಣ್ಣಹಚ್ಚುತ್ತಾಳೆ. ಎಚ್. ಎನ್. ಹೂಗಾರರ 'ದಸರಾ' ನಾಟಕದಲ್ಲಿ 'ಮಲ್ಲಿ' ಪಾತ್ರದಲ್ಲಿ ವಿಶೇಷವಾಗಿ

ಮಿಂಚಿದ ರಂಗಮ್ಮ ಒಂದು ಕಾಲಕ್ಕೆ ರಂಗಭೂಮಿಯ ಸಾಮ್ರಾಜ್ಞಿಯಾಗಿ ಮೆರೆದವಳು. 'ಮಾರುತಿ ಸೀನ್ಸ" ಎಂಬ ಕಂಪನಿ ಕೂಡಾ ಕಟ್ಟಿ ಕೈ ಸುಟ್ಟುಕೊಂಡವಳು.

"ಈ ಬಣ್ಣದ ಬದುಕು ನಮಗೇನೂ ಸುಖಾಕೊಟ್ಟಿಲ್ಲರೀSS ನನ್ನ ಮೊಮ್ಮಕ್ಕಳಿಗೆ ಚಂದಂಗ ಸಾಲಿಕಲಿಸ್ತಿನಿ. ಇಲ್ಲಿಗೆ ಈ ಬಣ್ಣದ ಬದುಕು ಮುಗುದ ಹೋಗ್ಲಿ" ಎನ್ನುವ ಈ ಎಪ್ಪತ್ತರ ರಂಗಮ್ಮನಿಗೆ ರಂಗಭೂಮಿ ಏನೂ ಕೊಡಲಿಲ್ಲವೆಂಬ ಕಳವಳ.

ಆಗ ನಾವು ಶ್ರದ್ಧೆಯಿಂದ ರಂಗತಾಲೀಮು ಮಾಡುತ್ತಿದ್ದವು. ಈಗಿನವರಿಗೆ ಹಾಡಾಕೂ ಬರೂದಿಲ್ಲ, ಮಾತಾಡಾಕೂ ಬರೂದಿಲ್ಲ, ಎಲ್ಲಕ್ಕಿಂತ ಮುಖ್ಯ ನಟನೆ ಮಾಡುವ ಹೆಣ್ಣುಮಕ್ಕಳು ಸಭ್ಯರಾಗಿರಬೇಕು ಎಂಬ ಅನುಭವದ ಮಾತು ಅಜ್ಜಿಯದು.

ಹಂಸನೂರು ದೊಡ್ಡ ಕಲಾವಿದರನ್ನು ಕೊಟ್ಟ ಒಂದು ಪುಟ್ಟ ಗ್ರಾಮ. ಅಂಥವರಲ್ಲಿ ಈ ರಂಗಮ್ಮ ಧೋತ್ರೆಯೂ ಒಬ್ಬಳು. ಆದರೆ ಇವಳು ಮಾತ್ರ ಯಾರ ಗಮನಕ್ಕೂ ಬಾರದೆ ಎಲೆಮರೆಯ ಕಾಯಿಯಂತೆ ಬದುಕನ್ನು ಸಾಗಿಸುತ್ತಿದ್ದಾಳೆ. ಕಲಾವಿದರಿಗೆ ಸಿಗುವ ಯಾವುದೇ ಕೇಂದ್ರ ರಾಜ್ಯದ ಮಾಶಾಸನವೂ ಇಲ್ಲದೆ ಬದುಕಿನ ಕೊನೆಯ ದಿನಗಳನ್ನು ನೂಕುತ್ತಿದ್ದಾಳೆ.

**ಎಲ್ಲೂಬಾಯಿ ಚಿಮ್ಮಲ್ :**

ಎಲ್ಲೂಬಾಯಿ ಚಿಮ್ಮಲ್‌ಳ ತಾಯಿ ರೇಣವ್ವಾ ಚಿಮ್ಮಲ್ ಅವಳೂ ಒಬ್ಬ ದೊಡ್ಡ ಕಲಾವಿದೆ. ಕಂದಗಲ್ ಹನುಮಂತರಾಯರ ಕಂಪನಿಯಲ್ಲಿ ರಹೆಮಾನವ್ವ ಕುಕನೂರ ಕಂಪನಿಯಲ್ಲಿ ಬಣ್ಣ ಹಚ್ಚಿದ ಅನುಭವ ಅವಳದು. "ತಾಯಿಯಂತೆ ಮಗಳು ನೂಲಿನಂತೆ ಸೀರೆ" ಎಂಬಂತೆ ನಟನೆ ಎನ್ನುವುದು ಎಲ್ಲೂಬಾಯಿಗೆ ದೈವದತ್ತ ಕೊಡುಗೆ. ಐದನೇಯ ತರಗತಿಯವರೆಗೆ ಓದಿದ ಎಲ್ಲೂಬಾಯಿ ತಾಯಿ ಹೋದಲ್ಲೆಲ್ಲಾ ತಾಯಿಯ ಸೆರಗಿಡಿದು ಅಡ್ಡಾಡಿರಬಹುದು. ಈ ಎಳೆಮನಸ್ಸು ಬಣ್ಣಕ್ಕೆ ಮಾರುಹೋಗಿ ಒಳಗೊಳಗೆ ತಾನೂ ತನ್ನ ತಾಯಿಯಂತೆ ಆಗಬೇಕೆಂಬ ಬಯಕೆ. ಅದಕ್ಕೆ ತಾಯಿಯ ಪ್ರೋತ್ಸಾಹವೂ ಇತ್ತು. ಹೀಗಾಗಿ ಚಿಕ್ಕ ವಯಸ್ಸಿನಲ್ಲಿಯೇ ಮುಖಕ್ಕೆ ಬಣ್ಣ ಬಳಿಯಬೇಕಾಯ್ತು. ಸುಳ್ಯದ ದೇಸಾಯಿ ಕಂಪನಿಯಲ್ಲಿ ಒಂದು ವರ್ಷ, ಮೈಂದಿರಗಿ ಕಂಪನಿಯಲ್ಲಿ ಒಂದೈದು ವರ್ಷ ದುಡಿದ ಎಲ್ಲೂಬಾಯಿ ಹಲವಾರು ಪೌರಾಣಿಕ ನಾಟಕಗಳನ್ನು ಮಾಡಿದಳು. ಬಾಸಿಂಗಬಲ, ಸೊಲ್ಲಾಪುರದ ಸಿದ್ಧರಾಮೇಶ್ವರ ಮುಂತಾದ ನಾಟಕಗಳಲ್ಲಿ ನಾಯಕಿಯ ಪಾತ್ರ ಮಾಡುತ್ತಿದ್ದ ಎಲ್ಲೂಬಾಯಿ ಪೌರಾಣಿಕ ನಾಟಕಗಳಲ್ಲಿ ದ್ರೌಪದಿಯ ಪಾತ್ರ ಮಾಡಿ ಭೇಷ್ ಎನಿಸಿಕೊಂಡದುಂಟು.

ನಟನೆಯ ಜೊತೆಜೊತೆಗೆ ಸುಳ್ಳದ ಹನುಮಂತಪ್ಪ ಮಾಸ್ತರ ಹತ್ತಿರ ಸಂಗೀತಾಭ್ಯಾಸ, ಇಂಪಾದ ಧ್ವನಿಯಲ್ಲಿ ರಂಗಗೀತೆಗಳನ್ನು ಹಾಡುತ್ತಿದ್ದಳು. ಹೊಟ್ಟೆಪಾಡಿಗಾಗಿ ನಾನು ಈ ವೃತ್ತಿಗೆ ಬಂದರೂ ಕೂಡಾ ನನಗೆ ಅದರಲ್ಲಿ ಶ್ರದ್ಧೆ ಆಸಕ್ತಿ ಇತ್ತು. ಈಗ ಕಲೆ ಕಲೆಯಾಗಿ ಉಳಿದಿಲ್ಲ. ಆಗ ನಟಿಯರ ಸಂಖ್ಯೆ ಕಡಿಮೆ ಇತ್ತು. ಕಲೆಗೆ ಬೆಲೆ ಇತ್ತು. ಈಗ ನಟಿಯರ ಸಂಖ್ಯೆ ಜಾಸ್ತಿಯಾಗಿದೆ ಆದರೆ ಕಲೆಗೆ ಬೆಲೆ ಇಲ್ಲ ಎಂಬ ನೋವು ಅಲ್ಲಿತ್ತು.

ಕಂಪನಿ ನಾಟಕದ ನಂತರ ಎಲ್ಲೂಬಾಯಿ ಹೆಚ್ಚು ದುಡಿದದ್ದು ಅಮೇಚೂರನಲ್ಲಿ. ಸಂಬಳ ಹೆಚ್ಚಿಗೆ ಸಿಗುವದೆಂಬ ಕಾರಣಕ್ಕೆ ನಾನು ಅಮೆಚೂರಿಗೆ ಹೋದೆ ಎನ್ನುತ್ತಾಳೆ ಎಲ್ಲೂಬಾಯಿ ಚಿಮ್ಮಲ್. ಪಾರ್ಶ್ವವಾಯು ಪೀಡಿತಳಾಗಿ ಹಾಸಿಗೆ ಹಿಡಿದ ಎಲ್ಲೂಬಾಯಿಗೆ ಇನ್ನೂ ನಟನೆ, ನಾಟಕದ ಹುಚ್ಚು ಹೋಗಿಲ್ಲ. ಮಹಿಳಾ ಟ್ರೂಪ್ ಮಾಡಿಕೊಂಡು ನಾಟಕಗಳನ್ನು ಆಡಬೇಕೆನ್ನುತ್ತಾರೆ.

ಮೊಮ್ಮಗಳು ಸುನಿತಾಳಿಗೆ ಅಜ್ಜಿಯ ಬಗ್ಗೆ, ತಮ್ಮ ಮನೆತನದ ಬಗ್ಗೆ ಅಪಾರ ಗೌರವ ಮತ್ತು ಹೆಮ್ಮೆ. ಎಲ್ಲೂಬಾಯಿಯ ನಂತರ ಯಾರೂ ಅವರ ಮನೆಯಲ್ಲಿ ಈ ಬಣ್ಣದ ಬದುಕಿಗೆ ಮುಖ ಮಾಡಿಲ್ಲ.

ಅಕಾಡಮಿಯ ಪ್ರಶಸ್ತಿಗಳು, ತಾಲೂಕಾ ಮಟ್ಟದ ಪ್ರಶಸ್ತಿಗಳನ್ನು ಪಡೆದುಕೊಂಡ ಎಲ್ಲೂಬಾಯಿ ಚಿಮ್ಮಲ್ ಅವಳದು ತುಂಬು ಸಂಸಾರ, ಸುಖಿ ಸಂಸಾರ. ರಂಗಭೂಮಿ ನನಗೆ ಎಲ್ಲಾನೂ ಕೊಟ್ಟದ ಎಂಬ ಸಂತೃಪ್ತಭಾವ ಅವರ ಮುಖದಲ್ಲಿತ್ತು.

**ಅಂಬವ್ವ ಗುರಿಕಾರ :**

ಎಲ್ಲೂಬಾಯಿ ಚಿಮ್ಮಲ್ ಅವರು ತಮ್ಮ ಮೊಮ್ಮಗನನ್ನು ಕಳಿಸಿ 80ರ ಹರೆಯದ ಬೊಚ್ಚುಬಾಯಿಯ ಅಜ್ಜಿಯನ್ನು ಕರೆಕಳಿಸಿದರು. ಅವಳೇ ಅಂಬವ್ವ ಗುರಿಕಾರ.

ಇಬ್ಬರು ನಟಿಯರು ಕೂಡಿದಾಗ ಎರಡು ನದಿಗಳ ಸಂಗಮವಾದಂತಾಯಿತು. ನಾನು ಮುದುಕಿ, ನಾನು ರೋಗಿ ಎಂಬುದನ್ನು ಮರೆತು ಎರಡೂ ಜೀವಗಳು ಗತಕಾಲದ ಆ ಬಣ್ಣದ, ಚಿನ್ನದ ದಿನಗಳನ್ನು ಮೆಲುಕು ಹಾಕತೊಡಗಿದರು.

ಹಂಸನೂರಿನಲ್ಲಿ ಬಣ್ಣ ಹಚ್ಚಿದ ಮೊದಲ ಹೆಣ್ಣು ಮಗಳು ಎಂಬ ಹೆಗ್ಗಳಿಕೆಗೆ ಪಾತ್ರಳಾದ ಈ ಅಜ್ಜಿಗೆ, ಹಲವು ವೃತ್ತಿ ಕಂಪನಿಗಳಲ್ಲಿ ನಟಿಸಿದ ಅನುಭವ. ಸಂಬಳ ಕಡಿಮೆ ದೊಡ್ಡ ಸಂಸಾರ ಹೀಗಾಗಿ ಸಂಸಾರದ ತಾಪತ್ರಯ ತಪ್ಪಲಿಲ್ಲ. ಪೌರಾಣಿಕ ನಾಟಕ ಅಕ್ಷಯಾಂಬರದಲ್ಲಿ 'ದ್ರೌಪದಿ'ಯ ಸಂಭಾಷಣೆಯನ್ನು ಹೇಳಿದ 'ಎವರ್ ಗ್ರೀನ್' ಅಜ್ಜಿಯನ್ನು ಹೇಗೆ ಮರೆಯಲು ಸಾಧ್ಯ?

ಒಂದು ಕಾಲಕ್ಕೆ ತನ್ನ ಅಭಿನಯದಿಂದ ಪ್ರೇಕ್ಷಕರಲ್ಲಿ ಭಾವವಿರೇಚನವನ್ನುಂಟು ಮಾಡುತ್ತಿದ್ದ ಅಜ್ಜಿಗೆ ಈ ಬಾಳಸಂಜೆಯಲ್ಲಿ ಅವಳ ಕಣ್ಣೀರನ್ನು ಒರೆಸುವವರು ಯಾರೂ ಇಲ್ಲ. ಯಾವ ಪ್ರಶಸ್ತಿಗಳು, ಮಾಶಾಸನವೂ ಇಲ್ಲದೆ ಒಪ್ಪತ್ತಿನ ಗಂಜಿಗೂ ಗತಿಇಲ್ಲದೆ ಬದುಕುತ್ತಿದ್ದಾಳೆ. ಯಾರೋ ನಿನ್ನ ನೋಡಾಕ ಬಂದಾರ ಅಂದಾಗ ನಮಗ ರೊಕ್ಕಾ ಕೊಡೋ ಸಾಹೇಬ್ರ ಬಂದಾರಂತ, ಓಡಿ ಬಂದೆ. ಒಂದು ಕಾಲಕ್ಕೆ ತನ್ನ ನಟನೆಯಿಂದ ಎಲ್ಲರ ನೋವನ್ನು ದೂರ ಮಾಡಿದ ಅಂಬವ್ವನ ಕಣ್ಣಂಚಿನಲ್ಲಿ ನೀರು ಬಾರದೆ ಇರಲಿಲ್ಲ. ಈ ಅಜ್ಜಿಯ ನೋವನ್ನು ದೂರ ಮಾಡುವವರು ಯಾರು? ಮತ್ತೆ ನಟನೆಯಲ್ಲಿ ಮುಂದುವರಿಯಲು ಶಕ್ತಿಸಾಲದು. ಬದುಕುವುದು ಅನಿವಾರ್ಯ.

ಒಂದು ಕಾಲಕ್ಕೆ ತನ್ನ ಅದ್ಭುತ ನಟನೆಯಿಂದ ಪ್ರೇಕ್ಷಕರ ನೋವನ್ನು ದೂರಮಾಡಿ ನಕ್ಕು ನಗಿಸಿದ, ಕಲೆಯನ್ನು ನಂಬಿ ಬದುಕಿದ ಈ ಅಜ್ಜಿಗೆ ಅನಾಥಪ್ರಜ್ಞೆ ಕಾಡುತ್ತಲಿದೆ. ದುಡ್ಡೂ ಇಲ್ಲ, ಗ್ಲಾಮರೂ ಇಲ್ಲ, ಎಲ್ಲವೂ ಬರೀ ಬಯಲು.

**ತಿಪ್ಪವ್ವ ಮಲಕಲ್ :**

ಬಡತನದ ಬೇಗೆಯಲ್ಲಿ ಬೆಳೆದ ತಿಪ್ಪವ್ವಳಿಗೆ ರಂಗಭೂಮಿ ಆಶ್ರಯನೀಡಿತು. ಇವಳೇನೂ ಅಂಥ ಹೇಳಿಕೊಳ್ಳುವಂತಹ ಸ್ಪುರದ್ರೂಪಿ ಹೆಣ್ಣುಮಗಳಲ್ಲ. ಆದರೂ ತನ್ನ ನಟನೆಯಿಂದ ರಂಗಭೂಮಿಯಲ್ಲಿ ಒಳ್ಳೆಯ ಹೆಸರನ್ನು ಮಾಡಿದ್ದಳು.

ಶಿರೂರ ಮಾಚಯ್ಯನವರ ಕಂಪನಿ, ಸಿದ್ದಲಿಂಗಶಾಸ್ತ್ರಿಗಳ ಕಂಪನಿ, ಬೆಳವಡಿ ಈರತಯ್ಯನವರ ಕಂಪನಿ, ಹೀಗೆ ಹಲವು ಕಂಪನಿಗಳಲ್ಲಿ ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ತನ್ನ ಛಾಪನ್ನು ಮೂಡಿಸಿದ್ದಳು. ಇಂದಿನ ದಿನಗಳಿಗಿಂತ ಅಂದಿನ ದಿನಗಳೇ ಸೊಗಸಾಗಿದ್ದವು ಎಂದು ಆ ದಿನಗಳನ್ನು ಮೆಲುಕು ಹಾಕುತ್ತಾಳೆ. ಸಂಬಳ ಕಡಿಮೆ ಇದ್ದರೂ ನಮ್ಮನ್ನು ಗೌರವದಿಂದ ಕಾಣುತ್ತಿದ್ದರು ಎನ್ನುತ್ತಾಳೆ. ದುಡ್ಡಿನ ಮೋಹ ಯಾರಿಗಿಲ್ಲ? ಹೆಣ್ಣು, ಹೊನ್ನು, ಮಣ್ಣನೊಲ್ಲದ ಅಣ್ಣಂದಿರು ಯಾರು? ಎಂದು ಶರಣರೇ ಪ್ರಶ್ನೇ ಮಾಡಿರುವಾಗ ಇನ್ನು ದುಡ್ಡಿಗಾಗಿ ದುಡಿಯುವ ಇವರಿಗೆ ಮೋಹ ಇರದೇ ಇರುತ್ತದೆಯೇ? ಅದಕ್ಕೆಂದೆ ಕಂಪನಿ ನಾಟಕಗಳಲ್ಲಿ ಕೊಡುವ ಸಂಬಳ ಯಾವದಕ್ಕೂ ಸಾಕಾಗುವುದಿಲ್ಲವೆಂದು ಬರಬರುತ್ತ ಅಮೆಚೂರಿನ ಮೊರೆಹೋದಳು. ಈಗ ದುಡಿದು ಜೀವನ ಸಾಗಿಸುತ್ತಿದ್ದಾಳೆ.

ರಂಗಭೂಮಿ ಇವಳಿಗೂ ಖುಷಿ ಕೊಟ್ಟಿಲ್ಲ. ಏನೋ ಬೇಸರ ನಿರಾಶೆ ಅವಳ ಮುಖದಲ್ಲಿತ್ತು. ಈ ಸ್ಥಿತಿಗೆ ಬರಲಿಕ್ಕೆ ಕಾರಣ ಯಾರು? ತಪ್ಪು ಯಾರದು? ಅದಕ್ಕೆ ಅವರೇ ಉತ್ತರ ಹುಡುಕಬೇಕು.

ಪದ್ಮಾವತಿ ಚಿಂತಾಕಲ್, ಅಂಬೂಬಾಯಿ ಚಿಮ್ಮಲ್ ಹೀಗೆ ಇನ್ನೂ ಹತ್ತು ಹಲವಾರು ಕಲಾವಿದರನ್ನು ರಂಗಭೂಮಿಗೆ ಕೊಡುಗೆಯಾಗಿ ನೀಡಿದ ಹಿರಿಮೆ ಈ ಗ್ರಾಮದ್ದು. ಗ್ರಾಮೀಣ ಪ್ರದೇಶದಲ್ಲಿ ರಂಗಭೂಮಿ ಬೆಳೆಯಲು ಈ ಹೆಣ್ಣುಮಕ್ಕಳೇ ಕಾರಣ ಆದರೆ ಇವರ ಬದುಕು ಮಾತ್ರ ಬಂಗಾರವಾಗಲಿಲ್ಲ. ಒಂದು ಕಾಲ ಇತ್ತು ಹಂಸನೂರು ಕಲಾವಿದೆಯರೆಂದರೆ, ಜನ ಮೂಗಿನ ಮೇಲೆ ಬೆರಳಿಟ್ಟು ನೋಡುತ್ತಿದ್ದರಂತೆ. ಆದರೆ ಇವತ್ತು ಹಣಕ್ಕಾಗಿ ಕಲೆಯನ್ನು ಮಾರಿಕೊಳ್ಳುವ ನಟಿಯರ ಸಂಖ್ಯೆ ಹೆಚ್ಚಾಗಿದೆ ಎಂದು ಕೇಳಿದಾಗ ಬೇಸರವಾಗದೇ ಇರಲಿಲ್ಲ.[1]

### ಮರಿಯಮ್ಮನ ಹಳ್ಳಿ :

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಮರಿಯಮ್ಮನ ಹಳ್ಳಿ ತುಂಗಭದ್ರೆಯ ದಡದಲ್ಲಿ ವಿಜಯನಗರ ಸಾಮ್ರಾಜ್ಯದ ನೆರಳಲ್ಲಿ ಆಸರೆ ಪಡೆದಂತಹ ಗ್ರಾಮ.

ಮುತ್ತು ರತ್ನಗಳನ್ನು ಬಳ್ಳದಿಂದ ಅಳೆದು ಮಾರುತ್ತಿದ್ದ ಬಂಗಾರದ ಹೊಗೆ ಹಾಯುತ್ತಿದ್ದ, ಕಲೆ ಸಂಸ್ಕೃತಿಗೆ ಹೆಸರಾದ ಹಂಪೆಯ ವಿರುಪಾಕ್ಷನ ಕೃಪಾಕಟಾಕ್ಷ ಈ ಮರಿಯಮ್ಮನ ಹಳ್ಳಿಯ ಮೇಲೆ ಇದ್ದಿರಬಹುದು. ಅದಕ್ಕೆಂದೆ ಈ ಗ್ರಾಮ ಕಲಾವಿದರ ತವರೂರಾಗಿದೆ.

ದೇವದಾಸಿ ಕುಟುಂಬದ ಮನೆತನಗಳು 'ನಾಯಕ' ಎಂಬ ಹೆಸರಿನಿಂದ ಕರೆಯಲ್ಪಟ್ಟು, ಈ ಗ್ರಾಮದ ಅದೆಷ್ಟೋ ಮಹಿಳೆಯರು ನಟನೆಗೆ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ. ಈ ಗ್ರಾಮದಲ್ಲಿ ಒಂದುಕಾಲಕ್ಕೆ ಸುಮಾರು 20 ಕ್ಕಿಂತ ಹೆಚ್ಚು ನಟಿಯರು ಕಂಡು ಬರುತ್ತಿದ್ದರು. 1) ತಳವಾರ ಹಣಮಂತೆವ್ವಾ 2) ಬಾಳೀಕಾಯಿ ಹಣಮಂತೆವ್ವಾ, 3) ಗಂಗಮ್ಮ, 4) ನಾಗರತ್ನಮ್ಮ, 5) ಎಸ್. ಶ್ಯಾಮಲ, 6) ಎಸ್. ರೇಣುಕಾ, 7) ಸುವರ್ಣಮ್ಮ, 8) ಅಂಜನಮ್ಮ, 9) ಹುಲಗೆಮ್ಮ, 10) ಉಚ್ಚಮ್ಮ, 11) ಸರ್ವಮಂಗಳಾ, 12) ಸಾವಿತ್ರಿ ಕೆ., 13) ಬಿ. ಶಾರದಾ, 14) ಎ. ರೇಣುಕಾ, 15) ಎನ್. ರೇಣುಕಾ.

ಇವರೆಲ್ಲಾ ಗ್ರಾಮೀಣ ರಂಗಕಲಾವಿದೆಯರು ಜಾತ್ರೆ ಉತ್ಸವಗಳಲ್ಲಿ ಹಳ್ಳಿಯ ಜನ ತಮ್ಮಲ್ಲಿರುವ ಕಲೆಯನ್ನು ವ್ಯಕ್ತಪಡಿಸುವುದಕ್ಕೆ ಪ್ರತಿವರ್ಷ ನಾಟಕಗಳನ್ನು ಆಡುತ್ತಾರೆ. ಇಡೀ ನಾಟಕದಲ್ಲಿ ಒಂದೆರಡು ಸ್ತ್ರೀ ಪಾತ್ರಗಳು ಇದ್ದೇ ಇರುತ್ತವೆ. ಅದಕ್ಕಾಗಿ ಆ ಹಳ್ಳಿಯ ಪುರುಷ ಕಲಾವಿದರು (ಹವ್ಯಾಸಿ) ಈ ನುರಿತ ಕಲಾವಿದೆಯರನ್ನು ಹುಡುಕಿಕೊಂಡು ಅವರೊಂದಿಗೆ ಸಂಭಾವನೆಯ ಮಾತುಕತೆಯ ನಂತರ ಅವರು ಕೊಟ್ಟ ತಾರೀಖಿಗೆ ಹೋಗಿ ನಾಟಕವಾಡಿಬರುವ ಪರಿಪಾಠವುಂಟು. ಅದನ್ನೇ ಒಂದು ವೃತ್ತಿಯನ್ನಾಗಿ ಮಾಡಿಕೊಂಡ ನಟಿಯರು ಈ ಮರಿಯಮ್ಮನಹಳ್ಳಿ ಹಾಗೂ ಕೂಡ್ಲಿಗಿಯಲ್ಲಿ ಕಂಡುಬರುತ್ತಾರೆ.

---

[1] 19-5-2009 ರಂದು ಹಂಸನೂರಿನಲ್ಲಿ ಈ ಕಲಾವಿದೆಯನ್ನು ಸಂದರ್ಶನ ಮಾಡಿದ್ದು.

ಮರಿಯಮ್ಮನ ಹಳ್ಳಿಯಿಂದ ಕೂಡ್ಲಿಗಿಗೆ ಹೋದಾಗ, ಯಾರೊಬ್ಬ ನಟಿಯೂ ನನಗೆ ಸಿಗಲಿಲ್ಲ. ಆ ನಟಿಯರ ಹೆಸರುಗಳು ಹೀಗಿವೆ. 1) ಶಿವಕುಮಾರಿ, 2) ಕಮಲಾ, 3) ಅಂಜನಮ್ಮ, 4) ಜ್ಯೋತಿ, 5) ಪದ್ಮಾ, 6) ಸಣ್ಣವೆಂಕಮ್ಮ, 7) ದುಶ್ಶಿಲಾ.

ಈ ವೃತ್ತಿರಂಗಭೂಮಿ ಅವನತಿಯ ಹಾದಿ ಹಿಡಿದ ಮೇಲೆ ಬಹುಸಂಖ್ಯಾತ ವೃತ್ತಿರಂಗಭೂಮಿ ನಟಿಯರು ಈ ಗ್ರಾಮೀಣ ರಂಗಭೂಮಿಯನ್ನೇ ನಂಬಿದ್ದಾರೆ. ಒಂದು ಆಟಕ್ಕೆ ಒಂದು ದಿನಕ್ಕೆ ಏನಿಲ್ಲವೆಂದರೂ ಎರಡರಿಂದ ಮೂರುಸಾವಿರ ರೂಪಾಯಿ ಸಂಭಾವನೆ ಪಡೆಯುತ್ತಾರೆ.

**1) ಮರಿಯಮ್ಮನ ಹಳ್ಳಿ ನಾಗರತ್ನಮ್ಮ :**

ನಾಯಕ ಮನೆತನದ ಕೃಷಿಕರ ಕುಟುಂಬದಲ್ಲಿ ಜನಿಸಿದ ನಾಗರತ್ನಮ್ಮಳಿಗೆ ಬಡತನ ಬೆನ್ನತ್ತಿಯೇ ಬಂದಿತ್ತು. ಆದಾಗ್ಯೂ ಪ್ರತಿಭೆಗೇನೂ ಕೊರತೆಯಿರಲಿಲ್ಲ. ಆ ಬಡತನದ ಬೇಗೆಯಲ್ಲಿಯೂ ಹೈಸ್ಕೂಲವರೆಗೆ ಶಿಕ್ಷಣ ಮುಗಿಸಿದ ನಾಗರತ್ನಮ್ಮಳಿಗೆ ನಾಟಕದ ಗೀಳು ಅಂಟಿಕೊಂಡಿತ್ತು. ಹತ್ತು ವರ್ಷದವಳಿದ್ದಾಗಲೇ ವಾರಿಗೆಯ ಹುಡುಗಿಯರನ್ನೆಲ್ಲಾ ಸೇರಿಸಿಕೊಂಡು 'ಸಂಸಾರ' ಎಂಬ ನಾಟಕವನ್ನು ಆಡಿದ್ದಳು. ಮುಂದೊಂದು ದಿನ ಸಂಸಾರ ಎಂಬ ಸಮುದ್ರದಲ್ಲಿ ಬೀಳುತ್ತೇನೆಂಬ ಪರಿಜ್ಞಾನ ಬಹುಶಃ ಹತ್ತು ವರ್ಷದ ಬಾಲಿಕೆಗೆ ಇರಲಿಕ್ಕಿಲ್ಲ.

ನಾಗರತ್ನಮ್ಮನವರ ತಂದೆ, ಮಗಳು ಕಲಾವಿದೆಯಾಗಬೇಕೆಂದು ಕನಸು ಕಂಡವರು. ಹಾಗಾಗಿ ಮಗಳ ಆಶೆಗೆ ಅವರು ಅಡ್ಡಿಯಾಗಲಿಲ್ಲ. ಇವರದು ತುಂಬು ಕುಟುಂಬ, ತಂದೆ ಮಾರೆಪ್ಪಕೂಡಾ ಬಯಲಾಟ ಕಲಾವಿದರು. 'ಸಂಸಾರ' ನಾಟಕದ ನಂತರ 'ಹರಿಶ್ಚಂದ್ರ' ನಾಟಕದಲ್ಲಿ ಲೋಹಿತಾಶ್ವನ ಪಾತ್ರ ಮಾಡಿದಳು. ತಂದೆಯಿಂದ ಬಳುವಳಿಯಾಗಿ ಬಂದ ನಟನೆ, ಜೊತೆಗೆ ಕಲಾವಿದರ ಪರಿಸರದಲ್ಲಿ ಬೆಳೆದ ಈ ಹುಡುಗಿ ನೋಡಿದ್ದನ್ನು ಕರಗತ ಮಾಡಿಕೊಳ್ಳುವ ಅದ್ಭುತ ಕಲೆ ಅವಳಲ್ಲಿತ್ತು.

ಹೈಸ್ಕೂಲಿನಲ್ಲಿ ಓದುತ್ತಿರುವಾಗಲೆ ಸೋಗಿ, ಬಾಗಳಿ, ಕೂಲಹಳ್ಳಿ ಈ ಪರಿಚಿತ ಊರುಗಳಿಗೆ ಹೋಗಿ ನಾಟಕವಾಡಿ ಬರುತ್ತಿದ್ದಳು. ಬಿಡುವಿನ ವೇಳೆಯಲ್ಲಿ ತೋಟಯ್ಯಸ್ವಾಮಿ ಅವರ ಹತ್ತಿರ ರಂಗಗೀತೆಗಳನ್ನು ಅಭ್ಯಾಸ ಮಾಡುತ್ತಿದ್ದಳು.

ಮೊದಮೊದಲು ಹಾಸ್ಯ ಮತ್ತು ಖಳನಾಯಕಿಯ ಪಾತ್ರ ಮಾಡುತ್ತಿದ್ದ ನಾಗರತ್ನಮ್ಮ ನಾಯಕಿಯ ಪಾತ್ರಕ್ಕೆ ಜಂಪಾಗುತ್ತಾಳೆ. ಹಳ್ಳಿಯ ಪರಿಸರದಲ್ಲಿ ಆಗೆಲ್ಲಾ ಗೌಡರದೇ ದರ್ಬಾರು. ಕಲಾವಿದರನ್ನು

ನೋಡುವ ದೃಷ್ಟಿಕೋನವೇ ಬೇರೆ. ಹಾಗಾಗಿ ಹಲವಾರು ಸಲ ಪೇಚಿನ ಪ್ರಸಂಗಗಳಿಗೂ ಸಿಕ್ಕಿಹಾಕಿಕೊಂಡದ್ದುಂಟು ಮತ್ತೆ ಉಪಾಯದಿಂದ ಪಾರಾದುದ್ದುಂಟು.

ಕಂಪನಿ ನಾಟಕಗಳಿಗಿಂತ ಹೆಚ್ಚು ಗ್ರಾಮೀಣ ರಂಗಭೂಮಿಯಲ್ಲಿ ದುಡಿದ ಅನುಭವ ಇವರದು. "ಇಬ್ಬರೂ ಪೈಲ್ವಾನರಿದ್ದಾಗ ಚಂದ್ದಂಗೆ ಕುಸ್ತಿ ಆಡಬಹುದು. ಆದರೆ ಒಬ್ಬನೆ ಪಳಗಿದವ ಇದ್ದರೆ ಕುಸ್ತಿ ಆಡುವುದು ಕಷ್ಟ' ಎನ್ನುವ ನಾಗರತ್ನಮ್ಮ ಹೆಚ್ಚಾಗಿ ಪೌರಾಣಿಕ ನಾಟಕಗಳಾದ ರಕ್ತರಾತ್ರಿ, ಕುರುಕ್ಷೇತ್ರ ಮಲ್ಲಮ್ಮನ ಪವಾಡ, ಇಂಥ ನಾಟಕಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಮೊದಲೆಲ್ಲಾ ಪೌರಾಣಿಕ ನಾಟಕಗಳೇ ಹೆಚ್ಚು ಪ್ರಚಲಿತವಾಗಿದ್ದವು.

ಹೊಟ್ಟೆಪಾಡಿಗಾಗಿಯೇ ಇವಳು ರಂಗಭೂಮಿಗೆ ಬಂದವಳು. ಸುಭದ್ರಮ್ಮ ಮನಸೂರ ಅವರ ಒಡನಾಟದಲ್ಲಿಯೇ ಬೆಳೆದವಳು. ಸಹ ಕಲಾವಿದರೊಂದಿಗೆ ಅನ್ಯೂನ್ಯತೆಯಿಂದ ಇದ್ದವಳು. ಸಾರ್ವಜನಿಕವಾಗಿ ತನ್ನನ್ನು ತಾನು ಗುರುತಿಸಿಕೊಂಡವಳು. ಕಲಾದೇವತೆಯ ಆರಾಧಕಳಾದ ನಾಗರತ್ನಮ್ಮ ರಾಜಕೀಯ ರಂಗದಲ್ಲಿಯೂ ಮಿಂಚಿದ್ದು ಒಂದು ವಿಶೇಷವೇ 1976–77ರಲ್ಲಿ ಗ್ರಾಮ ಪಂಚಾಯತಿಯ ಚುನಾವಣೆಯಲ್ಲಿ ಓಣಿಯ ಜನರ ಅಭಿಮಾನಕ್ಕೆ ಮಣಿದು "ಅರಳಿದ ಹೂ"ವಿನ ಗುರ್ತಿನೊಂದಿಗೆ ನಿರೀಕ್ಷೆಗೆ ಮೀರಿ ಮತವನ್ನು ಪಡೆದು ಪಂಚಾಯ್ತಿಯ ಸದಸ್ಯಳಾಗಿ ಆರಿಸಿಬಂದಳು. 1994ರಲ್ಲಿ ತಾಲೂಕು ಪಂಚಾಯ್ತಿಯ ಅಧ್ಯಕ್ಷರಾಗಿ ಯಾವದೇ ಆಶ ಆಮಿಷೆಗಳಿಗೆ ಬಲಿ ಬೀಳದೆ ಶೋಷಣೆಗೆ ಒಳಗಾದವರಿಗೆ, ಹಿಂದುಳಿದವರಿಗಾಗಿ, ಅದರಲ್ಲೂ ಮಹಿಳೆಯರಿಗಾಗಿ ಅಭಿವೃದ್ಧಿಪರ ಕಾರ್ಯಗಳನ್ನು ಮಾಡಿದರು. ರಂಗಭೂಮಿ ಹಾಗೂ ರಾಜಕೀಯ ಎರಡನ್ನೂ ಸರಿದೂಗಿಸಿಕೊಂಡು ಹೋದ ಏಕೈಕ ಮಹಿಳೆ ಈ ನಾಗರತ್ನಮ್ಮ.

1978ರಲ್ಲಿ ಎಲ್ಲ ಮಹಿಳೆಯರೇ ಸೇರಿಕೊಂಡು 'ರಕ್ತರಾತ್ರಿ' ನಾಟಕವನ್ನು ಆಡುತ್ತಾರೆ. ಮುಂದೆ ಕೆಲವೇ ದಿನಗಳಲ್ಲಿ 'ವೃತ್ತಿಕಲಾವಿದರ ಸಂಘ'ವನ್ನು ಕಟ್ಟಿ 'ರೊಚ್ಚಿಗೆದ್ದ ರೈತ' ಎಂಬ ಸಾಮಾಜಿಕ ನಾಟಕವನ್ನಾಡುತ್ತಾರೆ. ಗ್ರಾಮೀಣ ರಂಗಭೂಮಿಯಲ್ಲಿಯ ಇವರ ವಿಭಿನ್ನರೀತಿಯ ಅಭಿನಯವನ್ನು ನೋಡಿ 'ಮದರ್' ಸಿನೆಮಾದಲ್ಲಿ ಒಂದು ಅವಕಾಶ ಸಿಗುತ್ತದೆ. ರಂಗಭೂಮಿಯಿಂದ ಸಿಗುವ ಸಂತೋಷ ಇದರಿಂದ ಸಿಗಲು ಸಾಧ್ಯವಿಲ್ಲ. ಗ್ರಾಮೀಣ ರಂಗಭೂಮಿನೆ ನಮ್ಮ ಜೀವನೋಪಾಯಕ್ಕೆ ದಾರಿ. ಎಲ್ಲಾ ನೋವನ್ನು ಮರೆಸುವ ಶಕ್ತಿ ಈ ರಂಗಭೂಮಿಗಿದೆ ಎನ್ನುವ ಅರವತ್ತರ ಅಂಚಿನಲ್ಲಿರುವ ನಾಗರತ್ನಮ್ಮನವರು ಉತ್ಸಾಹದ ಚಿಲುಮೆಯಾಗಿದ್ದಾರೆ.

ಎರಡು ಮಕ್ಕಳಾದ ಮೇಲೆ ಗುಡಿಹಳ್ಳಿ ನಾಗರಾಜ ಅವರು ಇವರಿಗೆ ಬದುಕನ್ನು ಕಟ್ಟಿಕೊಟ್ಟರು. ಸುಮಾರು 18 ವರ್ಷಗಳಿಂದ ಈ ಎರಡೂ ಜೋಡಿ ಬದುಕಿನ ಬಂಡಿಗೆ ಹೆಗಲು ಕೊಟ್ಟು ಮುನ್ನಡೆಯುತ್ತಲಿವೆ. ನಾಗರತ್ನಮ್ಮನವರಿಗೆ ಗುಡಿಹಳ್ಳಿಯವರೇ ಒಂದು ಸ್ಫೂರ್ತಿ. ಸಧ್ಯ ಗ್ರಾಮೀಣ ರಂಗಭೂಮಿ ಹಾಗೂ ಕಿರುತೆರೆ ಎರಡನ್ನೂ ನಿಭಾಯಿಸಿಕೊಂಡು ಹೋಗುವದರ ಜೊತೆಗೆ ಹಲವಾರು ಪ್ರಶಸ್ತಿಗಳಿಗೂ ಇವರು ಭಾಜನರಾಗಿದ್ದಾರೆ. ಸಾವಿತ್ರಮ್ಮ ದೇ.ಜ.ಗೌಡ ಪ್ರಶಸ್ತಿ, (ರಂಗಭೂಮಿಯಲ್ಲಿ ಮಹಿಳೆಗೆ ಸಿಕ್ಕ ಮೊದಲ ಪ್ರಶಸ್ತಿ) ಕರ್ನಾಟಕ ನಾಟಕ ಅಕ್ಯಾಡಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ನಾಡಚೇತನ, ಭಾರ್ಗವಪ್ರಶಸ್ತಿ, ಹೀಗೆ ಹಲವಾರು ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡ ನಾಗರತ್ನಮ್ಮ ನಾಟಕ ಅಕ್ಯಾಡಮಿ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಮನಸ್ಸು ಮಾಡಿದರೆ ಮಹಿಳೆ ಏನೆಲ್ಲಾ ಮಾಡಲು ಸಾಧ್ಯ ಎಂಬುದನ್ನು ಸಾಧಿಸಿತೋರಿಸಿ ರಂಗಕಲೆಯನ್ನು ಉಳಿಸಿ ಬೆಳೆಸುತ್ತಿದ್ದಾಳೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳವತಿಯಿಂದ ಬಳ್ಳಾರಿ, ರಾಯಚೂರು, ಧಾರವಾಡ, ಗದಗ, ಹಾವೇರಿ, ಕೊಪ್ಪಳ ಮುಂತಾದವುಗಳ ಕಡೆಗೆ ಬೀದಿನಾಟಕಗಳ ಪ್ರದರ್ಶನ ಮಾಡಿದ್ದಾರೆ.[2]

**ಎಸ್. ರೇಣುಕಾ (ಶೆರೆಗಾರ) :**

ಮರಿಯಮ್ಮನ ಹಳ್ಳಿಯ ಇನ್ನೊರ್ವ ನಟಿ ಈ ಎಸ್. ರೇಣುಕಾ. ಮೂಲತಃ ಇವಳೂ ಕಲಾವಿದರ ಕುಟುಂಬದಿಂದಲೇ ಬಂದವಳು. ತಾಯಿ ಸುವರ್ಣಮ್ಮ, ಅಕ್ಕ ಶ್ಯಾಮಲಾ ಇವರೂ ಗ್ರಾಮೀಣ ರಂಗಭೂಮಿ ಕಲಾವಿದರೇ.

ಬಣ್ಣದ ಪರಿಸರದಲ್ಲಿ ಬೆಳೆದ ರೇಣುಕಾಳಿಗೂ ಸಹಜವಾಗಿ ಆ ಕ್ಷೇತ್ರ ಅವಳನ್ನು ಕೈ ಬೀಸಿ ಕರೆದಿರಬಹುದು. 5ನೇಯ ತರಗತಿಯಲ್ಲಿ ಇರುವಾಗಲೇ ಅಂದರೆ 1972 ರಿಂದಲೇ ರಂಗಭೂಮಿಗೆ ಬಂದದ್ದು. "ಯಾರ ವಿಶ್ವಾಸ ಯಾರಿಗೆ?" ಈ ನಾಟಕದಲ್ಲಿ ಸುಶೀಲಾ ಎಂಬ ಸಾಧ್ವಿಯ ಪಾತ್ರ ಮಾಡಿದ ನೆನಪು ಇನ್ನೂ ಅವಳಿಗೆ ಹಸಿಯಾಗಿಯೇ ಇದೆ. ಮರಿಯಮ್ಮನ ಹಳ್ಳಿ ನಾಗರತ್ನಮ್ಮನವರೇ ನನಗೆ ಮೊದಲು ಬಣ್ಣಹಚ್ಚಿದ್ದು ಎಂದು ಹೇಳುತ್ತಾಳೆ. ಅಲ್ಲದೆ ಮನೆಯ ಪರಿಸ್ಥಿತಿಯೂ ಇವಳನ್ನು ಈ ರಂಗಕ್ಕೆ ಎಳೆದು ತಂದಿತು. "ಈಜಲು ಮನಸಿರದಿದ್ದರೂ, ನೀರಿಗೆ ಬಿದ್ದಮೇಲೆ ಈಜಾಡಬೇಕಲ್ಲ."

ಎಸ್. ಎಸ್. ಜೋಶಿ ಅವರ ರತ್ನಮಾಂಗಲ್ಯ ನಾಟಕದಲ್ಲಿ ಮಾಳಿ ಪಾತ್ರ, ಅಣ್ಣತಂಗಿಯಲ್ಲಿ ಗೌರಿಪಾತ್ರ, ಆದರ್ಶ ಪ್ರೇಮದಲ್ಲಿ ನಾಗಿಪಾತ್ರ ಹೀಗೆ ಹೆಚ್ಚಾಗಿ ಹಾಸ್ಯ ಪಾತ್ರಕ್ಕೆ ಬ್ರ್ಯಾಂಡ ಆಗಿದ್ದ ರೇಣುಕಾಗೆ ರತ್ನಮಾಂಗಲ್ಯದ ಮಾಳಿ ಪಾತ್ರ ಹೆಚ್ಚು ಖುಷಿಕೊಟ್ಟ ಪಾತ್ರವಂತೆ. ಗ್ರಾಮೀಣ ಭಾಷೆಯ ಸೊಗಡು, ದಲಿತ

---

[2] ದಿನಾಂಕ 26-11-2008 ರಂದು ಬೆಂಗಳೂರಿನ 'ವಿಜಯನಗರ' ಬಡಾವಣೆಯಲ್ಲಿ ಭೇಟಿಯಾದದ್ದು.

ವರ್ಗದ ಕಥೆಯನ್ನೊಳಗೊಂಡ ಒಂದು ಸುಂದರ ಸಾಮಾಜಿಕ ನಾಟಕ ಅದಾಗಿದ್ದರಿಂದ ಅದೂ ಅವಳಿಗೆ ಇಷ್ಟವಾಗಿರಬಹುದು.

ರಕ್ತರಾತ್ರಿ, ಕುರುಕ್ಷೇತ್ರ, ಚಿತ್ರಾಂಗದಾ, ಹಲವು ಪೌರಾಣಿಕ ನಾಟಕದಲ್ಲಿಯೂ ಅಭಿನಯಿಸಿದ ಹಿರಿಮೆ ಇವಳದು. ರಕ್ತರಾತ್ರಿಯಲ್ಲಿ ಪುರುಷ ಪಾತ್ರವನ್ನೂ ಮಾಡಿದ್ದಾಳೆ. ಬೀದಿ ನಾಟಕದಲ್ಲಿಯೂ ನಟಿಸಿದ ಅನುಭವ ಇವಳದು.

"ಆಗಿನ ಸಮಾಜ ನಮ್ಮನ್ನು ಗೌರವದಿಂದ ಕಾಣುತ್ತಿತ್ತು. ನಾಟಕ ಮುಗಿದ ತಕ್ಷಣ ಸಿಹಿ ಊಟ ಮಾಡಿಸಿ ಬಂಡಿಕೊಟ್ಟು ಕಳುಹಿಸಿಕೊಡುತ್ತಿದ್ದರು. ಇತ್ತಿತ್ತಲಾಗಿ ಗೌರವ ಕಡಿಮೆಯಾಗುತ್ತಲಿದೆ." ಎನ್ನುವ ಇವಳು ರಾಯಚೂರು, ಬೀದರ, ಗುಲ್ಬರ್ಗಾ, ಚಿತ್ರದುರ್ಗ, ಮೈಸೂರು ಬಿಜಾಪೂರ ಎಲ್ಲ ಊರುಗಳನ್ನು ಸುತ್ತಿದ್ದಾಳೆ. ಪ್ರೇಕ್ಷಕರಿಂದ ಮಾನಸನ್ಮಾನಗಳು ಸಾಕಷ್ಟು ಸಿಕ್ಕಿವೆ. ಆದರೆ ಸರಕಾರದಿಂದ ಏನೂ ಇಲ್ಲ ಎನ್ನುವ ರೇಣುಕಾ ಮಾಶಾಸನದ ದಾರಿ ಕಾಯುತ್ತಲಿದ್ದಾಳೆ. ಸಧ್ಯ 'ಹಂಸಲೇಖ' ಅವರ 'ಭಗವತಿ ಕಾಡು' ಈ ಸಿನೇಮಾದಲ್ಲಿ 'ಕರವೀರವ್ವನ' ಪಾತ್ರ ಮಾಡುತ್ತಿದ್ದಾಳೆ.

ಪಿ. ಬಿ. ದುತ್ತರಗಿ ಹಾಗೂ ಶಂಕರಯ್ಯ ಹಿರೇಮಠರ ಕಂಪನಿಯಲ್ಲಿಯೂ ನಟಿಸಿದ್ದಾಳೆ. ಆದಾಗ್ಯೂ ವೃತ್ತಿರಂಗ ಭೂಮಿಗಿಂತ ಇವಳು ಹೆಚ್ಚಾಗಿ ಮಿಂಚಿದ್ದು ಅಮಚೂರಿನಲ್ಲಿ. ಮನೆಯಲ್ಲಿ ಎಲ್ಲರ ಪ್ರೋತ್ಸಾಹವೂ ಇದೆ. ಮಗನಿಗೆ ಎಂ.ಎ., ಬಿ.ಇಡಿ ಒಳ್ಳೆಯ ಶಿಕ್ಷಣ ಕೊಟ್ಟಿದ್ದಾಳೆ. 25 ರೂಪಾಯಿಯಿಂದ ಪ್ರಾರಂಭವಾದ ಇವಳ ಬಣ್ಣದ ಬದುಕು ಇವತ್ತು 3000 ರೂಪಾಯಿಗೆ ಬಂದು ನಿಂತಿದೆ. ರಂಗಭೂಮಿನೆ ನನ್ನದೇವರು ಎಂದು ನಂಬಿದ ಕಲಾವಿದೆ ಈ ರೇಣುಕಾ.

**ಕೆ. ಸರ್ವ ಮಂಗಳಾ :**

ಮರಿಯಮ್ಮನ ಹಳ್ಳಿಯ ಸರ್ವಮಂಗಳಾ ಇವಳೂ ಕೂಡಾ ಅಮೆಚೂರ ಕಲಾವಿದೆ. "ವಯಸ್ಸು ಇದ್ದಾಗ ನಮ್ಮನ್ನು ಕೇಳುತ್ತಿದ್ದರು. ಈಗ ನಮ್ಮನ್ನು ಕೇಳುವವರೇ ಇಲ್ಲ ಮೆಡಂ, ಒಂದು ತಾಯಿಯ ಪಾತ್ರಕ್ಕೂ 20 ವರ್ಷದ ಹುಡುಗಿಯನ್ನು ಕೇಳುತ್ತಾರೆ." ಪಟಪಟ ಅಳ್ಳುಹುರಿದಂತೆ ಮಾತನಾಡುವ ಸರ್ವಮಂಗಳಾ ಈಗ ಹೆಚ್ಚಾಗಿ ಬೀದಿ ನಾಟಕಗಳಿಗೆ ಹೊಂದಿಕೊಂಡಿದ್ದಾಳೆ. ಇಲ್ಲಿಯವರೆಗೂ ಸುಮಾರು 1500 ಪ್ರದರ್ಶನಗಳನ್ನು ಕೊಟ್ಟಿದ್ದಾಳಂತೆ.

ಕೆಲವು ನಟಿಯರು ವೃತ್ತಿ ನಾಟಕ ಕಂಪನಿಯಲ್ಲಿ ಗೌರವವನ್ನು ಪಡೆದುಕೊಂಡಿದ್ದರೆ, ಇನ್ನು ಕೆಲವರು ಅಮಚೂರಿನಲ್ಲಿ. ಅದರೆ ಈ ಸರ್ವಮಂಗಳಾ ಬೀದಿ ನಾಟಕದಲ್ಲಿ ಮರ್ಯಾದೆ ಗೌರವ ಸಿಗುತ್ತದೆ ಎಂದು ಹೇಳುತ್ತಾಳೆ. ಅವರವರ ಭಾವಕ್ಕೆ ಅವರವರ ಭಕುತಿಗೆ ಎಂಬಂತೆ ಒಬ್ಬೊಬ್ಬರಿಗೆ ಒಂದೊಂದರಲ್ಲಿ

ತೃಪ್ತಿ. ಅಮೆಚೂರ ಕೂಡಾ ಈಗತನ್ನ ಗೌರವವನ್ನು ಕಳೆದುಕೊಳ್ಳುತ್ತಿದೆ. ಹಾಗಾಗಿ ನಾನು ಅದನ್ನು ದೂರಮಾಡಿ 'ಕಲಾರಂಗ' ಎಂಬ ತಂಡದಿಂದ (ಅದರ ಅಧ್ಯಕ್ಷರು ಮಂಜುನಾಥ) ಬೀದಿನಾಟಕಗಳನ್ನು ಹೆಚ್ಚಾಗಿ ಮಾಡುತ್ತಿದ್ದೇನೆ ಎನ್ನುತ್ತಾಳೆ ಮಂಗಳಾ.

ಮೊದಲೆಲ್ಲಾ ಸುಮಾರು ಹದಿನೈದು ವರ್ಷ ಅಮಚೂರಿನಲ್ಲಿ ದುಡಿದಿದ್ದಾಳೆ. ಕಲಿತಕಳ್ಳ, ಕೆಟ್ಟಮೇಲೆ ಬುದ್ಧಿಬಂತು, ಅಣ್ಣತಂಗಿ, ಇತ್ಯಾದಿ. ಯಾವದೇ ಒಂದು ಪಾತ್ರಕ್ಕೆ ಸೀಮಿತಳಾಗದೆ ನಾಯಕಿ, ವಿಲನ್, ಹಾಸ್ಯ ಎಲ್ಲ ಪಾತ್ರಗಳಲ್ಲೂ ಸೈ ಎನಿಸಿಕೊಂಡಿದ್ದಾಳೆ.

ತಿಳವಳಿಕೆ ಇಲ್ಲದಾಗ ನಾನು ಈ ವೃತ್ತಿಗೆ ಬಂದೆ. ಕಲಾವಿದರ ಜೀವನ ಜೀವನಾನೆ ಅಲ್ಲ. ಗಯ್ಯಾಳಿತನ, ಬಾಯಿಬಡಕರು ಮಾತ್ರ ಇಲ್ಲಿ ಬದುಕಲು ಸಾಧ್ಯ. ಅಮಾಯಕರು ಬದುಕುವುದು ಕಷ್ಟ ಎನ್ನುತ್ತಾಳೆ ಸರ್ವಮಂಗಳಾ. ಇವಳೂ ಕೂಡಾ ಹಂಸಲೇಖಾ ಅವರ ಭಗವತಿ ಕಾಡು ಈ ಸಿನೇಮಾದಲ್ಲಿ ಕೆಂಚವ್ವನ ಪಾತ್ರ ಮಾಡಿದ್ದಾಳೆ.

**ಎಸ್. ಶ್ಯಾಮಲಮ್ಮ :**

ಇವಳು ಎಸ್. ರೇಣುಕಾಳ ಅಕ್ಕ ಇವಳ ಪ್ರೇರಣೆಯಿಂದಲೇ ಎಸ್. ರೇಣುಕಾ ರಂಗಭೂಮಿಗೆ ಬಂದದ್ದು. ಶ್ಯಾಮಲಮ್ಮ ಒಬ್ಬ ಹಳೆಯ ತಲೆಮಾರಿನ ಕಲಾವಿದೆ. ಮೇಲಾಗಿ ಹವ್ಯಾಸಿ ಕಲಾವಿದೆ. ಬೇಗನೆ ಮದುವೆ ಮಕ್ಕಳು ಆಗಿದ್ದಕ್ಕೆ 1972 ರಿಂದಲೇ ಈ ವೃತ್ತಿಯಿಂದ ದೂರ ಸರಿದಿದ್ದಾಳೆ.

ಇವರ ಮಕ್ಕಳು ಯಾರೂ ಈ ವೃತ್ತಿಗೆ ಬಂದಿಲ್ಲ. ಇವಳೊಬ್ಬ ಹಾಸ್ಯ ಕಲಾವಿದೆ. ಹೆಚ್ಚಾಗಿ ಹಾಸ್ಯ ಪಾತ್ರವನ್ನೆ ಮಾಡುತ್ತಿದ್ದಳಂತೆ. ಅಣ್ಣತಂಗಿ, ಅಣ್ಣತಮ್ಮ, ಜೀವನಯಾತ್ರಿ ಹೀಗೆ ಹಲವು ನಾಟಕಗಳಲ್ಲಿ ಕೇವಲ 25-30 ರೂಪಾಯಿಗೂ ಇವಳು ಬಣ್ಣಹಚ್ಚಿದ್ದಾಳೆ. ಇದಕ್ಕೆಲ್ಲಾ ಕಾರಣ ಮನೆಯ ಪರಿಸ್ಥಿತಿ. ಒಂದು ಕಾಲಕ್ಕೆ ಮರಿಯಮ್ಮನಹಳ್ಳಿಯಲ್ಲಿ 20 ರಿಂದ 25 ಕಲಾವಿದೆಯರು ಇದ್ದರು. ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಕಲಾವಿದೆಯರನ್ನು ನೀಡಿದ ಗ್ರಾಮ ಈ ಮರಿಯಮ್ಮನಹಳ್ಳಿ ಎನ್ನುತ್ತಾಳೆ ಶ್ಯಾಮಲಮ್ಮ.

**ಕೆ. ಸಾವಿತ್ರಮ್ಮ :**

ಇವಳ ತಾಯಿ ಕೆ. ಈರಮ್ಮ ಹಾಗೂ ಸೋದರತ್ತೆ ರುದ್ರಮ್ಮ ಇಬ್ಬರೂ ನಟಿಯರೇ. ಎಸ್.ಬಿ. ರಾಮರಾವ್, ಆದವಾನಿ ಲಕ್ಷ್ಮಿದೇವಿ ಅವರೊಂದಿಗೆ ಬಣ್ಣಹಚ್ಚಿದ ಅನುಭವ ಇವರದು.

ಇವರದು ಮೂಲತಃ ಕಂಪ್ಲಿ. ಈ ಸಾವಿತ್ರಮ್ಮ 3 ವರ್ಷದ ಮಗುವಿದ್ದಾಗಲೇಸೆ ಅವರ ತಾಯಿ ಈರಮ್ಮ ಮರಿಯಮ್ಮನ ಹಳ್ಳಿಗೆ ಬಂದು ನೆಲೆಸಿದ್ದಾರೆ.

ಹೆಚ್ಚು ಕಮ್ಮಿ ಕಲಾವಿದೆಯರ ಪರಿಸ್ಥಿತಿ ಒಂದೇ. ಆರಕ್ಕೆ ಏರಲಿಲ್ಲ ಮೂರಕ್ಕೆ ಇಳಿಯಲಿಲ್ಲ. ಹೊಟ್ಟೆಹೊರೆದುಕೊಳ್ಳುವುದಕ್ಕಾಗಿ ಅನಿವಾರ್ಯವಾಗಿ ಈ ರಂಗಭೂಮಿಯನ್ನು ಆಶ್ರಯಿಸಬೇಕಾಯಿತು. ಇವರ ತಾಯಿಗೆ ಇವರು 8 ಜನ ಮಕ್ಕಳು. ಸಾವಿತ್ರಮ್ಮ ಒಮ್ಮೊಮ್ಮೆ ವಿಲನ್ ಪಾತ್ರವನ್ನು ಮಾಡಿದ್ದುಂಟು. ಹೆಚ್ಚಾಗಿ ನಾಯಕಿ ಹಾಗೂ ಹಾಸ್ಯ ಪಾತ್ರಗಳಲ್ಲಿ ಮಿಂಚಿದ ಈ ನಟಿ ಈಗ ತೆರೆಯಿಂದ ಹಿಂದಕ್ಕೆ ಸರಿದ್ದಾಳೆ.

ಹೀಗೆ ಮರಿಯಮ್ಮನಹಳ್ಳಿ ಸಾಂಸ್ಕೃತಿಕವಾಗಿ ತನ್ನನ್ನು ತಾನು ಗುರುತಿಸಿಕೊಂಡಿದೆ. ಹಿರಿಯ ಕಲಾವಿದೆಯರು ಕಣ್ಮರೆಯಾಗಿದ್ದಾರೆ. ಇನ್ನುಳಿದ ನಟಿಯರು ನಾವು ಹೋದಾಗ ಭೇಟಿಯಾಗಲಿಲ್ಲ.[3]

**ಶಿಗ್ಗಾಂವ ಕಲಾವಿದೆಯರು :**

ಒಂದು ಕಾಲಕ್ಕೆ ನವಾಬರ ಆಡಳಿತಕ್ಕೆ ಒಳಪಟ್ಟಂತ, ಸಂಗೀತ ಕಲೆಗೆ ಹೆಸರಾದಂತ ಅದೆಷ್ಟೊ ರಂಗಭೂಮಿಯ ಕಲಾವಿದೆಯರನ್ನು ನಾಡಿಗೆ ನೀಡಿದ ಹೆಗ್ಗಳಿಕೆ ಈ ಶಿಗ್ಗಾಂವದು.

ಬಹಳಷ್ಟು ಕಲಾವಿದೆಯರು ರಂಗಭೂಮಿಯನ್ನೇ ನಂಬಿಬದುಕಿದವರು. ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಈ ಕಲಾವಿದೆಯರು ಈಗ ಹುಬ್ಬಳ್ಳಿ, ಹುಬ್ಬಳ್ಳಿ ಹತ್ತಿರ ಇರುವ ಬಿಡನಾಳದಲ್ಲಿ ನೆಲೆಸಿದ್ದಾರೆ. ಶಿಗ್ಗಾಂವದ ಪ್ರಮುಖ ನಟಿಯರೆಂದರೆ 1) ಶಾಂತಾಬಾಯಿ ಉಜ್ಜಯಿನಿಮಠ, 2) ಲಕ್ಷ್ಮಿದೇವಿ ಶಿಗ್ಗಾಂವ, 3) ಶಾರಮ್ಮ ಶಿಗ್ಗಾಂವ, 4) ರಾಧಮ್ಮ ಶಿಗ್ಗಾಂವ, 5) ದೇವಕಾರಾಣಿ ಶಿಗ್ಗಾಂವ, 6) ರೂಪಾ ಶಿಗ್ಗಾಂವ, 7) ಶೋಭಾ ಶಿಗ್ಗಾಂವ, 8) ರತ್ನಮ್ಮ ಶಿಗ್ಗಾಂವ.

ಇವರಿಂದ ಊರು ಪ್ರಸಿದ್ಧಿಗೆ ಬಂತೋ ಅಥವಾ ಊರಿಂದ ಇವರು ಪ್ರಸಿದ್ಧಿಗೆ ಬಂದರೋ ಇದೊಂದು ಬೀಜವೃಕ್ಷನ್ಯಾಯದಂತೆ. ಅದೇನೆ ಇರಲಿ ಅಳಿದುಳಿದ ಹಿರಿಯ ಕಲಾವಿದೆಯರನ್ನು ಬೆಳಕಿಗೆ ತರುವುದೇ ಅಧ್ಯಯನದ ಮುಖ್ಯ ಉದ್ದೇಶ.

**ದೇವಿಕಾರಾಣಿ ಶಿಗ್ಗಾಂವ (ಬೀಡನಾಳ) :**

ಇವಳೇನೂ ಕಲಾವಿದರ ಮನೆತನದಲ್ಲಿ ಹುಟ್ಟಿದವಳಲ್ಲ. ಆದಾಗ್ಯೂ ಈ ದೇವಿಕಾರಾಣಿ ಈ ಕ್ಷೇತ್ರಕ್ಕೆ ಪದಾರ್ಪಣೆ ಮಾಡಿದಳು.

ಇವರು ಮೂರು ಜನ ಅಕ್ಕತಂಗಿಯರು, ಶಾಂತಮ್ಮ, ದೇವಿಕಾ, ಲಕ್ಷ್ಮಿ. ಇವಳ ಅಕ್ಕ ಶಾಂತಮ್ಮಳನ್ನು ಸಿದ್ದಯ್ಯಾ ದೊಡವಾಡ ಇವರು ಮದುವೆ ಮಾಡಿಕೊಂಡರು. ಸಿದ್ದಯ್ಯ ದೊಡ್ಡವಾಡ "ಸಮಾಜವಿಕಾಸ ನಾಟ್ಯಸಂಘ ದೊಡ್ಡವಾಡ" ಈ ಕಂಪನಿಯ ಮಾಲೀಕರು ಕಂಪನಿ ಮಾಲೀಕನನ್ನು

[3] ದಿನಾಂಕ : 8-7-2010 ರಂದು ಮರಿಯಮ್ಮನಹಳ್ಳಿಯಲ್ಲಿ ಸಂದರ್ಶನ ಮಾಡಿದ್ದು.

ಮದುವೆಯಾದ ಶಾಂತಮ್ಮ ಆಗಾಗ ಪಾತ್ರದಾರಿಗಳು ಕೈಕೊಟ್ಟಾಗ ಒಂದೊಂದೆ ಪಾತ್ರಗಳನ್ನು ಮಾಡತೊಡಗಿದಳು. ಆ ಬಣ್ಣದ ಜಗತ್ತೇ ಅಂತದ್ದು. ಎಂತವರನ್ನೂ ಮೋಡಿ ಮಾಡುವ ಶಕ್ತಿ ಅದಕ್ಕಿದೆ.

ಅಕ್ಕ, ಮಾವ ಇಬ್ಬರೂ ಕಲಾವಿದರು. ಮೇಲಾಗಿ ಮಾವನ ಕಂಪನಿ, ಕೇಳುವುದೇನು? "ಸಮಾಜವಿಕಾಸ ನಾಟ್ಯ ಸಂಘ ದೊಡ್ಡವಾಡ" ಈ ಕಂಪನಿಯಲ್ಲಿ ಈ ಹುಡುಗಿ ಬಣ್ಣಹಚ್ಚಲು ಶುರು ಮಾಡಿದಳು. ಅದೂ 1962ರಲ್ಲಿ ಇವಳ ಮೊದಲ ನಾಟಕ "ಗಂಡನಮನೆ." ಅಲ್ಲಿ ಎರಡು ವರ್ಷ ಬಣ್ಣ ಹಚ್ಚಿದ ಈ ನಟಿ ಮುಂದೆ ಓಬಳೇಶ್ವರ ಕಂಪನಿಗೆ ಬರುತ್ತಾಳೆ. ಆಗ ಇವಳ ವಯಸ್ಸು 16 ವರ್ಷ. ಯಾವಾಗ ಕಂಪನಿ ನಾಟಕಗಳು ಪ್ರಾರಂಭವಾದವೋ ಆವಾಗಿನಿಂದ ಒಂದು ಕಂಪನಿ ಬಿಟ್ಟು ಇನ್ನೊಂದು ಕಂಪನಿಗೆ ಹೋಗುವ ಪರಿಪಾಠ ಇದ್ದದ್ದೆ. ಕಾರಣಗಳು ಹಲವು.

ಈ ದೇವಿಕಾರಾಣಿ, ಓಬಳೇಶ್ವರ ಕಂಪನಿಗೆ ಬಂದಮೇಲೆ ಖಾದಿಸೀರೆ, ಮುಂಡೆಮಗ, ಶರಣಬಸವೇಶ್ವರ, ಜಗಜ್ಯೋತಿ ಬಸವೇಶ್ವರ, ಮುಂತಾದ ನಾಟಕಗಳಲ್ಲಿ ಅಭಿನಯಿಸಿದ ಅನುಭವ ಇವರದು. 'ಜಗಜ್ಯೋತಿ ಬಸವೇಶ್ವರ' ನಾಟಕದಲ್ಲಿ ಅಕ್ಕಮಹಾದೇವಿಯ ಪಾತ್ರದಲ್ಲಿ ಥೇಟ್ ಅಕ್ಕನ ಹಾಗೆ ಕಾಣುತ್ತಿದ್ದರಂತೆ. ಆ ಹಾವಭಾವ, ಸಂಭಾಷಣೆ, ಲಯಬದ್ದವಾಗಿ ಹೇಳಿಕೊಂಡುಹೋಗುವ ಒಂದೊಂದು ವಚನಗಳು ಪ್ರೇಕ್ಷರನ್ನು ಮಂತ್ರಮುಗ್ಧರನ್ನಾಗಿ ಮಾಡುವುದರ ಜೊತೆಗೆ ಹೆಚ್ಚಿನ ಪ್ರಮಾಣದಲ್ಲಿ ಕಲೆಕ್ಷನ್ ಕೂಡಾ ಆಗುತ್ತಿತ್ತು. ಆಗ ಕಂಪನಿ ಗುಲಬರ್ಗಾದಲ್ಲಿತ್ತು. ಅಕ್ಕನ ಸೀನ ನೋಡುವುದಕ್ಕಾಗಿನೇ ಜನ ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಿದ್ದರಂತೆ.

ವೆಂಕಟರಾವ ಸುರುಪುರಕರ ಅವರ ಹತ್ತಿರ ಕಥಕ್ಕಳಿ, ಭರತನಾಟ್ಯ ಅಭ್ಯಾಸ, ನಾಟಕ ಅಂದರೆ ಬರೀ ಮಾತು ಒಪ್ಪಿಸುವುದಷ್ಟೇ ಅಲ್ಲ. ಸಂಗೀತ, ನೃತ್ಯವೂ ಸಾಥಕೂಡಿದಾಗ ಅದರ ವೈಖರಿಯೇ ಬೇರೆ ಎಂಬುದು ಈ ನಟಿಗೆ ಗೊತ್ತಿತ್ತು. ಹೀಗಾಗಿ ಆ ನಿಟ್ಟಿನತ್ತ ಪ್ರಯತ್ನ ಮಾಡತೊಡಗಿದಳು.

ನಂತರ ಚಿದಂಬರ ಜೋಶಿ ಅವರ "ಕರ್ನಾಟಕ ಕಲಾಸೇವಾ ಸಂಘ" ಯಂಕಂಚಿ ಈ ಕಂಪನಿಗೆ ಬರುತ್ತಾಳೆ. 'ಸಂಪತ್ತಿಗೆ ಸವಾಲ್', 'ಮನೆ ಎರಡು ಮನ ಒಂದು', 'ನಂದಗೋಕುಲ' ಮುಂತಾದ ನಾಟಕದಲ್ಲಿ ನಟಿಸಿದ ದೇವಿಕಾರಾಣಿ ಸೂಡಿ ಕಂಪನಿಗೆ ಹೋಗುತ್ತಾಳೆ. ಅಲ್ಲಿ ಎರಡು ವರ್ಷ ಹಲವು ಪೌರಾಣಿಕ ನಾಟಕಗಳಲ್ಲಿ ಬಣ್ಣ ಹಚ್ಚುತ್ತಾಳೆ. ರಕ್ತರಾತ್ರಿ, ಹರಿಶ್ಚಂದ್ರ, ಹೇಮರೆಡ್ಡಿ ಮುಂತಾದವು.

ನಂತರ ಊರವರ ಸಹಾಯದಿಂದ "ಶಿವಕೃಪಾನಾಟ್ಯ ಸಂಘ ಶಿಗ್ಗಾಂವ" ಎಂಬ ಕಂಪನಿ ಪ್ರಾರಂಭಮಾಡುತ್ತಾಳೆ. ಅದರೆ ಒಂದೇ ಕ್ಯಾಂಪಗೆ ಕ್ಲೋಜ್ ಮಾಡುತ್ತಾಳೆ.

ಬದುಕುವದಕ್ಕೆ ಒಂದು ವೃತ್ತಿ ಬೇಕು. ಬಣ್ಣ ಹಚ್ಚಿ ನಕ್ಕು ನಗಿಸಿದ ಮನಸ್ಸು ಸುಮ್ಮನೆ ಕೂಡಲಿಲ್ಲ. ಬಿ. ಆರ್. ಅರಿಸಿನಗೂಡಿಯವರ "ಹುಚ್ಚೇಶ್ವರ ನಾಟ್ಯ ಸಂಘ ಕಮತಗಿ" ಇಲ್ಲಿ ಹತ್ತು ವರ್ಷ ಬಣ್ಣದ

ಬೆಳಕಿನಲ್ಲಿ ತೇಲಾಡುತ್ತಾಳೆ. ಸಮಾಜಕ್ಕೆ ಸವಾಲು, ಸಿಂಧೂರ ಲಕ್ಷ್ಮಣ, ಗರೀಬಿಹಟಾವೋ, ಹೆಣ್ಣು ಮಗಳು, ಈ ನಾಟಕಗಳಲ್ಲಿ ಹಾಸ್ಯ ಹಾಗೂ ನಾಯಕಿಯ ಪಾತ್ರದಲ್ಲಿ ಮಿಂಚಿದಳು.

ಸಂಗಮೇಶ್ವರ ನಾಟ್ಯಸಂಘ ಗುಡಗೇರಿ (ಎನ್. ಬಸವರಾಜ) ಕಂಪನಿಯಲ್ಲಿ ರೈತನ ಮಕ್ಕಳು ವಿಧಿಯ ಕೈವಾಡ, ವರನೋಡಿ ಹೆಣ್ಣುಕೊಡು, ನಾಟಕದಲ್ಲಿ ನಟಿಸಿ ಅಲ್ಲಿಂದ ಪಿ.ಬಿ. ದುತ್ತರಗಿ ಕಂಪನಿಯಲ್ಲಿ ಸಂಪತ್ತಿಗೆ ಸವಾಲ್ ನಾಟಕದಲ್ಲಿ ಮೂರುವರ್ಷ ಬಣ್ಣ ಹಚ್ಚಿದಳು. ಸಾಮಾಜಿಕ ನಾಟಕಗಳಿಗಿಂತ ಪೌರಾಣಿಕ ನಾಟಗಳಿಂದಲೇ ಇವಳು ಪ್ರೇಕ್ಷಕರ ಮನಗೆದ್ದಳು. ರಕ್ತರಾತ್ರಿಯ ಭಾನುಮತಿ ಪಾತ್ರಕ್ಕೆ ಮೇಲಿಂದ ಮೇಲೆ ಕ್ಲ್ಯಾಪ್ಸ ಬೀಳುತ್ತಿದ್ದವಂತೆ. ಎಲಿವಾಳ ಸಿದ್ಧಯ್ಯನವರ ಜೊತೆಗೆ ನಂದಗೋಕುಲದಲ್ಲಿ ಅಕ್ಕನ ಪಾತ್ರ ಮಾಡಿದ್ದುಂಟು.

ರಂಗಭೂಮಿನೆ ಇವರ ಪ್ರಪಂಚ ಹೊರಗಿನ ಜಗತ್ತೇ ಇವರಿಗೆ ಗೊತ್ತಿಲ್ಲ. ಇತ್ತಿತ್ತಲಾಗಿ ಮಹಿಳಾಟ್ರೂಪ್ ಹಾಗೂ ಅಮೆಚೂರಿನತ್ತ ಮುಖಮಾಡಿದ್ದಾಳೆ.

**ಲಕ್ಷ್ಮಿದೇವಿ ಶಿಗ್ಗಾಂವ :**

ದೇವಿಕಾರಾಣಿ ಶಿಗ್ಗಾಂವಳ ಸಹೋದರಿ ಈ ಲಕ್ಷ್ಮಿದೇವಿ ಶಿಗ್ಗಾಂವ. ಇವಳ ಬಣ್ಣದ ಬದುಕು ಶುರುವಾದದ್ದು ಇವಳ ಮಾವ ಸಿದ್ಧಯ್ಯ ದೊಡವಾಡ ಅವರ ಕಂಪನಿಯಿಂದಲೇ. 5 ವರ್ಷದವಳಿದ್ದಾಗ ಗಂಡನ ಮನೆ ನಾಟಕದಲ್ಲಿ ಕುರುಡಿ ಪಾತ್ರ (ನಂದಾ) ಮಾಡಿ ಪ್ರೇಕ್ಷಕರ ಮೆಚ್ಚುಗೆಗಳಿಸಿದಳು, ಜೊತೆಗೆ ಈ ಪುಟ್ಟಪೋರಿಯ ಅಭಿನಯಕ್ಕೆ ಅದೆಷ್ಟೋ ಶ್ರೀಮಂತರು ಹೊಸ ಹೊಸ ಬಟ್ಟೆಗಳನ್ನು ಕೊಡಿಸಿಕೊಡುತ್ತಿದ್ದರಂತೆ.

ಮೈಸೂರಿನ ಜಯಚಾಮರಾಜ ಒಡೆಯರು ಈ ಪಾತ್ರನೋಡಿ ಬಂಗಾರದ 'ಮೆಡಲ್' ಕೊಟ್ಟಿದ್ದರಂತೆ. 7 ವರ್ಷದ ಬಾಲಕಿಯಾದ್ದಗಲೇನೆ ಕುರುಡಿ ಪಾತ್ರವನ್ನು ಮಾಡಿ ಗಲ್ಲಾಪೆಟ್ಟಿಗೆಯನ್ನು ತುಂಬಿಸುವದಷ್ಟೆ ಅಲ್ಲ, ಆ ನಾಟಕಕ್ಕೆ ಈ ಬಾಲಕಿನೇ ನಾಯಕಿ. ಇವಳು ಇರದಿದ್ದರೆ ನಾಟಕವೇ ಬಂದ್.

ಒಂದು ಕಾಲಕ್ಕೆ ಬ್ಯಾಡಗಿ ಸಾವಿತ್ರಮ್ಮನ ನಟನೆ ನೋಡಿ ಜನ ಹುಬ್ಬೇರಿಸುತ್ತಿದ್ದರು. ಅಂಥ ಅದ್ಭುತ ಅಭಿನಯ ಅವಳದು. ಲಂಕಾದಹನ ನಾಟಕದಲ್ಲಿನ 'ಹನುಮಂತನ' ಪಾತ್ರಕ್ಕೆ ಎತ್ತಿದ ಕೈ ಅವಳದು. ಈ ಲಕ್ಷ್ಮಿದೇವಿಗೆ ಅದನ್ನು ನೋಡಿ ತಾನೂಯಾಕೆ ಆ ಹನುಮಂತನ ಪಾತ್ರ ಮಾಡಬಾರದು? ಎಂಬ ಆಲೋಚನೆ ಬಂದದ್ದೇ ತಡ, ಅದನ್ನು ಮಾಡುವುದರಲ್ಲಿ ಯಶಸ್ವಿಯೂ ಆದಳು. ನೋಡಿದ್ದನ್ನು ತಿಳಿದುಕೊಂಡು ಅದನ್ನು ಸಾಧಿಸಿ ತೋರಿಸುವ ಛಲಗಾರ್ತಿ ಲಕ್ಷ್ಮಿದೇವಿ.

ಮಾವನ ಕಂಪನಿಗೆ ದುಡ್ಡು, ಹೆಸರನ್ನು ತಂದುಕೊಟ್ಟ ಕಲಾವಿದೆ ಈಕೆ. ಹೀಗೆ ಇನ್ನುಳಿದ ಕಂಪನಿಗಳಲ್ಲಿ ಇವಳ ಬಣ್ಣದ ಬದುಕು ಅನಾವರಣಗೊಳ್ಳುತ್ತದೆ. ಓಬಳೇಶ್ವರ ಕಂಪನಿ, ಯಂಕಂಚಿ ಕಂಪನಿ, ಸೂಡಿಶೇಖರಯ್ಯನವರ ಕಂಪನಿ, ಅರಿಶಿನಗೋಡಿ ಕಂಪನಿ, ಗುಡಗೇರಿ ಕಂಪನಿ ಹೀಗೆ ಸಾಗುತ್ತದೆ ಇವಳ ಬಣ್ಣದ ತೇರು.

ಚಿತ್ತರಗಿ ಕಂಪನಿಯಲ್ಲಿ 15 ವರ್ಷ ಬಣ್ಣ ಹಚ್ಚುತ್ತಾಳೆ. ಇವಳ ಜೀವನದಲ್ಲಿ ಇದೊಂದು ಉತ್ತರ್ಸರ್ಪಿಣಿ ಕಾಲ. "ನನ್ನವರು ನನ್ನ ಹಡೆದವರು" ನಾಟಕದಲ್ಲಿ ನಂದಾನ (ತೊದಲು) ಪಾತ್ರ ಹೆಚ್ಚು ಪ್ರಸಿದ್ಧಿಯನ್ನು ತಂದುಕೊಟ್ಟಿತು. ಮುದ್ದೇಬಿಹಾಳ ಕ್ಯಾಂಪದಲ್ಲಿ ಧುತ್ತರಗಿಯವರ 'ಸಂಪತ್ತಿಗೆ ಸವಾಲ್" ನಾಟಕದ 25ನೇ ಪ್ರಯೋಗ ನಡೆದಾಗ ಲಕ್ಷ್ಮೀದೇವಿ ತಂದೆ ತೀರಿಕೊಂಡ ಬಗ್ಗೆ ಪತ್ರ ಬಂದರೂ ಕಂಪನಿ ಮಾಲೀಕರು ಮುಚ್ಚಿಟ್ಟು ಹದಿನೈದು ದಿನದ ನಂತರ ಕೊಟ್ಟಿದ್ದರಂತೆ. ಇದು ಕಂಪನಿ ಮಾಲೀಕರ ಸ್ವಾರ್ಥ. ಹೀಗೆ ಜೀವನದ ಏಳು ಬೀಳುಗಳನ್ನು ಅನುಭವಿಸುತ್ತ ಈಗ ಹುಬ್ಬಳ್ಳಿಯ ಬಿಡನಾಳದಲ್ಲಿ ಮಗಳು ಮಾಲಾಳ ಜೊತೆಯಲ್ಲಿ ವಾಸವಾಗಿದ್ದಾಳೆ. ಮಾಲಾ ಅವಳೂ ಕೂಡಾ ಒಬ್ಬ ಹವ್ಯಾಸಿ ಕಲಾವಿದೆ.

ಲಕ್ಷ್ಮೀದೇವಿಯೂ ಕೂಡಾ ಮಹಿಳಾ ಟ್ರೂಪ್‌ನಲ್ಲಿ, ಅಮೆಚೂರಿನಲ್ಲಿ ನಟಿಸುತ್ತಿದ್ದಾಳೆ. ನಾವು ಶಿಗ್ಗಾಂವ ಕಲಾವಿದೆಯರು ಹೌದು. ಆದರೆ ಹುಬ್ಬಳ್ಳಿ ಕಲಾವಿದರ ಸಂಘ ನಮ್ಮನ್ನು ದೂರವಿರಿಸಿದೆ ಎಂಬ ಬೇಸರ ಇವಳದು.

**ಶಾಂತಾಬಾಯಿ ಶಿಗ್ಗಾಂವ (ಉಜ್ಜೈನಿಮಠ) :**

ಶಿಗ್ಗಾಂವ ಸಹೋದರಿಯರೆಂದೇ ಹೆಸರಾದ ಮೂವರು ಸಹೋದರಿಯರಲ್ಲಿ ಇವಳೇ ಹಿರಿಯಳು. "ಸಮಾಜ ವಿಕಾಸ ನಾಟ್ಯ ಸಂಘ ದೊಡವಾಡ" ಈ ಕಂಪನಿಯ ಮಾಲೀಕರಾದ ಸಿದ್ಧಯ್ಯ ದೊಡವಾಡ ಅವರನ್ನು ಮದುವೆಯಾದಮೇಲೆ ಅನಿವಾರ್ಯವಾಗಿ ಈ ಶಾಂತಾಬಾಯಿ ಬಣ್ಣದ ಬದುಕಿಗೆ ಬರಬೇಕಾಯ್ತು.

ವಿಪರ್ಯಾಸವೆಂದರೆ ಬಹಳಷ್ಟು ಕಂಪನಿ ಮಾಲೀಕರು ನಟಿಯರನ್ನು ತಾರಪತ್ನಿಯರನ್ನಾಗಿ ಮಾಡಿಕೊಂಡದುಂಟು. ಆದರೆ ಕಟ್ಟಿಕೊಂಡ ಹೆಂಡತಿಗೆ ನಟಿಯನ್ನಾಗಿ ಮುಂದುವರೆಯಲು ಪ್ರೇರಣೆ ನೀಡಿದವರಲ್ಲಿ ದೊಡವಾಡ ಕಂಪನಿಯ ಮಾಲೀಕರೆ ಮೊದಲಿಗರಿರಬಹುದು.

ಆಗೆಲ್ಲಾ ಹುಡುಗಿಯರಿಗೆ ಹನ್ನೆರಡು ವರ್ಷವಾದರೆ ಮುಗಿತು. ಮದುವೆ ಮಾಡಿ ಹಿರಿಯರಾದವರು ತಮ್ಮ ಭಾರ ಕಡಿಮೆ ಮಾಡಿಕೊಳ್ಳುತ್ತಿದ್ದ ಕಾಲ. ಹೀಗಾಗಿ ಮದುವೆಯಾಗಿ ಒಂದೆರಡು ವರ್ಷಕ್ಕೆ ಅಂದರೆ ತನ್ನ 14ನೇ ವಯಸ್ಸಿಗೆ ತಮ್ಮದೇ ಕಂಪನಿಯಲ್ಲಿ ಬಣ್ಣಹಚ್ಚಲು ಪ್ರಾರಂಭಮಾಡಿದಳು.

ಇವರದೇ ಸ್ವಂತ ಕಂಪನಿ ಇದ್ದುದರಿಂದ ಮನೆಮಂದಿಯೆಲ್ಲಾ ಈ ವೃತ್ತಿಗೆ ಬರಬೇಕಾಯ್ತೋ? ಇಲ್ಲಾ ಕಂಪನಿ ಮಾಲೀಕನ ಜಾಣತನವೋ? ಯೋಚನೆ ಮಾಡಬೇಕಾದ ವಿಷಯವೆ.

ತಮ್ಮದೇ ಮಾಲೀಕತ್ವದ ಕಂಪನಿ ಇದ್ದಾಗಲೂ ಕೂಡಾ ಈ ನಟ ಕಲಾವೈಭವ, ಗುಡಗೇರಿ, ಯಂಕಂಚಿ ಕಂಪನಿ, ಭಾರತ ನಾಟ್ಯ ಸಂಘ ಸೂಡಿ, ಹೀಗೆ ಹತ್ತು ಹಲವು ಕಂಪನಿಗಳಲ್ಲಿ ಹಲವು ನಾಟಕಗಳಲ್ಲಿ ತನ್ನ ಕಲೆಯನ್ನು ಪ್ರದರ್ಶಿಸಿ 'ಕಲಾಶಾರದೆ' ಎಂಬ ಬಿರುದನ್ನು ಪಡೆದವಳು.

ಜಗಜ್ಯೋತಿ ಬಸವೇಶ್ವರ, ಕುರುಕ್ಷೇತ್ರ, ಧರ್ಮದೇವತೆ, ಹೇಮರೆಡ್ಡಿ ಮಲ್ಲಮ್ಮ, ಟಿಪ್ಪುಸುಲ್ತಾನ ಮುಂತಾದ ಐತಿಹಾಸಿಕ, ಪೌರಾಣಿಕ ನಾಟಕಗಳಲ್ಲಿ ನಟಿಸುವುದರ ಜೊತೆಗೆ ನಾಟಕದ ನಿರ್ದೇಶಕಿಯಾಗಿಯೂ ಕಾರ್ಯ ಗೈದಿದ್ದಾಳೆ. (ಖಾದಿಸೀರೆ, ಧರ್ಮದೇವತೆ), ಎರಡನೇಯ ಇಯತ್ತೆವರೆಗೆ ಕಲಿತ ಶಾಂತಾಬಾಯಿ ನಟಿಯಾಗಿ, ನಿರ್ದೇಶಕಿಯಾಗಿ ಮಿಂಚಿದ್ದು ಸಾಮಾನ್ಯವೇನಲ್ಲ. ಅದೂ ನಾಲ್ವತ್ತರ ದಶಕದಲ್ಲಿ "ಓದು ಒಕ್ಕಾಲು ಬುದ್ಧಿ ಮುಕ್ಕಾಲು" ಎಂಬ ಮಾತು ನಿಜಮಾಡಿದ್ದಾಳೆ.

**ಶಾರಮ್ಮ ಶಿಗ್ಗಾಂವ :**

ಶಾರದಾ ನಾಗೇಶ ಬೇವಿನಕಟ್ಟಿ ಮೂಲತಃ ಶಿಗ್ಗಾಂವದವಳು. ಈಗ ಹುಬ್ಬಳ್ಳಿಯಲ್ಲಿ ಬಂದು ನೆಲೆಸಿದ್ದಾಳೆ. ಪತಿ ನಾಗೇಶ ಅವರೂ ಒಬ್ಬ ಶ್ರೇಷ್ಠ ಕಲಾವಿದ. ಇವರಿಗೆ ಮೂವರು ಹೆಣ್ಣು ಮಕ್ಕಳು ರೂಪಾ, ರೀಟಾ, ರೇಖಾ ಅವರೂ ರಂಗಭೂಮಿ ಕಲಾವಿದರೇ. ಒಬ್ಬ ಮಗ ಸಂತೋಷಕುಮಾರ ಇವನು ಮಾತ್ರ ಈ ಫೀಲ್ಡಿಗೆ ಬರದೇ ಐ.ಎ.ಎಸ್. ಪರೀಕ್ಷೆಯ ತಯಾರಿ ನಡೆಸಿದ್ದಾನೆ.

ಶಾರಮ್ಮ ತನ್ನ ಒಂಬತ್ತು ಜನ ತಮ್ಮ ತಂಗಿಯರನ್ನು ಸಾಕಿ ಸಲಹುವುದಕ್ಕಾಗಿ ಈ ರಂಗಭೂಮಿಗೆ ಬರಬೇಕಾಯ್ತು. ತನ್ನ 18ನೇ ವಯಸ್ಸಿನಲ್ಲಿ ನಾಗರತ್ನಮ್ಮನವರ 'ಸ್ತ್ರೀ ನಾಟಕಮಂಡಳಿ'ಯಲ್ಲಿ ಬಣ್ಣದ ಬದುಕು ಪ್ರಾರಂಭವಾಯ್ತು. ಅಲ್ಲಿಂದ ಕಡಪಟ್ಟಿ ಕಂಪನಿಗೆ ಬಂದದ್ದು ಅಲ್ಲಿ ಬೆಂಗಳೂರು ಬಾಬು, ಮದನ ಮೋಹನ, ಭಲೆಮಗಳು ಈ ನಾಟಕಗಳಲ್ಲಿ ಹಾಸ್ಯ, ಖಳನಾಯಕಿ, ನಾಯಕಿಯ ಪಾತ್ರ ಮಾಡಿ ಸೈ ಎನಿಸಿಕೊಂಡಳು. ತದನಂತರ ಗಂಗಾಧರಶಾಸ್ತ್ರೀಯವರ ಚಿತ್ತರಗಿ ಕಂಪನಿಯಲ್ಲಿ ಸುಮಾರು 7 ವರ್ಷ ಬಣ್ಣಹಚ್ಚಿದಳು. ಬದುಕು ಬಂಗಾರವಾಯ್ತು, ಹೂವಿನ ಅಂಗಡಿ, ಭಾಗ್ಯ ಬಂತು ಬುದ್ಧಿ ಹೋಯ್ತು, ಬಸ್‌ಹಮಾಲ್, ಈ ನಾಟಕದಲ್ಲಿ ರಂಗೀ ಪಾತ್ರ ಹೆಚ್ಚು ಖುಷಿಕೊಟ್ಟ ಪಾತ್ರ ಎನ್ನುತ್ತಾಳೆ.

ಮೇಲಿನ ಎಲ್ಲ ನಾಟಕಗಳು ಸಾಳುಂಕೆ ವಿರಚಿತ ನಾಟಕಗಳು. ಚಿತ್ತರಗಿ ಕಂಪನಿ ಎದ್ದದ್ದೇ ಸಾಳುಂಕೆ ಅವರ ನಾಟಕಗಳಿಂದ. ಜೊತೆಗೆ ನುರಿತ ಕಲಾವಿದರಿಂದ 'ಸತಿ ಸಂಸಾರ ಗೆದ್ದಿತು' ಈ

ನಾಟಕದಲ್ಲಿನ ಕುರುಡಿ ಜಯಶ್ರೀ ಪಾತ್ರ ಪ್ರೇಕ್ಷಕರು ಇಷ್ಟಪಟ್ಟ ಪಾತ್ರ, ಒನ್ಸಮೋರ ಜೊತೆಗೆ ಗಡಚಿಕ್ಕುವ ಚಪ್ಪಾಳೆಗಳ ಸುರಿಮಳೆ. ಒಬ್ಬ ಒಳ್ಳೆಯ ನಟಗೆ ಇದಕ್ಕಿಂತ ಸಂತೋಷ ಯಾವದಿದೆ?

ರಂಗಭೂಮಿ ನಮಗೊಂದು ತುತ್ತು ಅನ್ನ ಕೊಟ್ಟಿದೆ. ಅದನ್ನು ನಾವು ಎಂದಿಗೂ ಮರೆಯುವದಿಲ್ಲ. ಆವತ್ತು ಕಲೆಯ ಬಗ್ಗೆ ತೃಪ್ತಿ ಶ್ರದ್ಧೆ ಇತ್ತು. ಇವತ್ತು ಕಲೆಗೆ ಬೆಲೆಯಿಲ್ಲ. ರಂಗಭೂಮಿ ಕಲಾವಿದೆ ಎಂದು ಹೇಳಿಕೊಳ್ಳಲು ಏನೊ ಅಳಕು ಎನ್ನುತ್ತಾಳೆ ಶಾರಮ್ಮ. "ಈಗ ಸಧ್ಯ ಕಂಪನಿಗಳಿಗೆ ಭರ್ಜರಿ ಕಲೆಕ್ಷನ್ ಇದೆ. ಆದರೆ ಕಲಾವಿದರು ಸಿಗುವುದಿಲ್ಲ" ಎಂಬ ನೋವು ತುಂಬಿದ ಧ್ವನಿ ಅಲ್ಲಿತ್ತು.

ಶಿಗ್ಗಾಂವದ ಇನ್ನೋರ್ವ ಕಲಾವಿದೆ ರೂಪಾ ಶಿಗ್ಗಾಂವ ಈ ಶಾರಮ್ಮನವರ ಮಗಳು ಅವಳನ್ನು ವಿಶೇಷ ಪಾತ್ರಕ್ಕೆ ಮೀಸಲಾದವರು ಅಲ್ಲಿ ಕಾಣಿಸಿದ್ದೇನೆ.[4]

---

[4] ದಿನಾಂಕ : 9–7–2010 ರಂದು ಈ ಶಿಗ್ಗಾಂವ ಕಲಾವಿದೆಯರನ್ನು ಬೀಡನಾಳ ಮತ್ತು ಹುಬ್ಬಳ್ಳಿಯಲ್ಲಿ ಭೇಟಿಯಾಗಿದ್ದೆ.

## 2. ಮುಸ್ಲಿಂ ಮಹಿಳೆಯರು

ಧರ್ಮದ ತೊಟ್ಟಿಲು ಭಾರತ, ಇಲ್ಲಿರುವಷ್ಟು ಜಾತಿ, ಇಲ್ಲಿರುವಷ್ಟು ದೇವರುಗಳು ಮತ್ತೆಲ್ಲಿಯೂ ಇರಲಿಕ್ಕಿಲ್ಲ. ದೇವರು ಒಬ್ಬನೆ ಎಂದು ಹೇಳುವ ನಮ್ಮ ದೇವರ ಮನೆಯ ಜಗಲಿಯ ಮೇಲೆ ಹಲವು ದೇವರುಗಳು ವಿಜೃಂಭಿಸಿರುತ್ತವೆ ಹಲವು ದೇವೋಪಾಸಕರು ನಾವುಗಳು.

ಸಮಾನತೆಯ ಹರಿಕಾರನಾದ ಅಣ್ಣ ಬಸವಣ್ಣ ಜಾತಿ ಎರಡೇ ಒಂದು ಗಂಡು ಇನ್ನೊಂದು ಹೆಣ್ಣು ಎಂದು, ಅವನ ಆ ತತ್ವವನ್ನು ನಾವು ಗಾಳಿಗೆ ತೂರಿಬಿಟ್ಟೆವಿ. ಯಾವುದೇ ಒಂದು ಅರ್ಜಿಯನ್ನು ತುಂಬಿಕೊಡಬೇಕಾದರೆ ಮೊದಲು ಕೇಳುವುದು ಜಾತಿಯನ್ನ, ಜಾತಿಯ ತಳಪಾಯದ ಮೇಲೆ ನಮ್ಮ ದೇಶ ನಿಂತಿದೆ. ಎಲ್ಲಿಯವರೆಗೆ ಜನರಲ್ಲಿ ವೈಚಾರಿಕ ಪ್ರಜ್ಞೆ ಮೂಡುವುದಿಲ್ಲವೋ? ಅಲ್ಲಿಯವರೆಗೆ ಇದು ಹೀಗೆ ಸಾಗುವುದು ನಿಶ್ಚಿತ.

ಅಫಘಾನಿಸ್ತಾನದ ಕಾಬೂಲಿನಲ್ಲಿ ಕಾಲೇಜಿಗೆ ಹೋಗುವ ವಿದ್ಯಾರ್ಥಿನಿಯರು, ಬುರ್ಖಾ ಧರಿಸದೆ ಹೋದ ಒಂದೇ ಕಾರಣಕ್ಕೆ ಅಲ್ಲಿನ ಪಾಖಂಡಿಗಳು (ಮೌಲ್ವಿಗಳು) ಅವರನ್ನು ಗುಂಡಿಟ್ಟು ಕೊಂದರು. ಇದು ಯಾವುದೇ ಓಬಿರಾಯನ ಕಾಲದ ಮಾತಲ್ಲ, ವೈಜ್ಞಾನಿಕ ಯುಗದಲ್ಲೂ ಇಂಥ ಅಮಾನವೀಯ ಕೃತ್ಯಗಳು ನಡೆಯುತ್ತಲಿವೆ.

ಇನ್ನು ಸ್ವಾತಂತ್ರ್ಯ ಪೂರ್ವದ ನಮ್ಮ ಮುಸ್ಲಿಂ ಮಹಿಳೆಯರ ಸ್ಥಿತಿ ಹೇಗಿರಬೇಕು? ಆ ಸಂಪ್ರದಾಯದ ಚೌಕಟ್ಟನ್ನು ದಾಟಿ ಕಲೆಯ ಮಡಿಲಿಗೆ ಜಾರಿದ ಆ ನೀರೆಯರ ಸಾಹಸ, ಧೈರ್ಯ ಮೆಚ್ಚಲೇಬೇಕು. ಕಲಾವಿದರಿಗೆ ಯಾವುದೇ ಜಾತಿ, ಧರ್ಮ ಇಲ್ಲ ಎಲ್ಲವನ್ನು ಮೀರಿ ಬೆಳೆದವರು. ಇವರದು ಜಾತ್ಯಾತೀತ ಕುಟುಂಬ, ಅದೆಷ್ಟೋ ಮುಸ್ಲಿಂ ಕಲಾವಿದರನ್ನು ಭೇಟಿಯಾದಾಗ "ಎಲ್ಲೈತ್ರಿ ಜಾತಿ? ಇವನ್ನೆಲ್ಲಾ ನಾವ ಮಾಡಿಕೊಂಡೇವಿ ನಮ್ಮ ಮನಸೊಂದು ಸುದ್ಧಿದ್ದರ ಸಾಕು ಇನ್ನೇನು ಬೇಕು. ಎಂಬ ಕೆಲ ಕಲಾವಿದೆಯರ ಮತು ಕೇಳಿ ದಂಗಾದೆ.

ಇವರು ಕೇವಲ ಹೊಟ್ಟೆಪಾಡಿಗಾಗಿ ಕಲೆಯನ್ನು ನೆಚ್ಚಿಕೊಂಡಿರಬಹುದು ಅದರ ಜೊತೆಜೊತೆಗೆ ಸಾಮಾಜಿಕ ಪರಿವರ್ತನೆಯ ಹರಿಕಾರರೆಂದರೆ ತಪ್ಪಿಲ್ಲವೇನೋ?

### ಜನ್ನತ್ ಬೇಗಂ ಬದಾಮಿ :

"ಧರ್ಮದವರು ಅಡ್ಡಿಪಡಿಸಿದರೂ ಬಣ್ಣಹಚ್ಚುದು ಬಿಟ್ಟಿಲ್ಲ : ದೈವದವರಿಗೆ 2000 ರೂಪಾಯಿ ದಂಡ ತೆತ್ತದ್ದು ಉಂಟು"

ಧಾರ್ಮಿಕ ಕಟ್ಟಳೆಗಳಿಗೆ ಹೆದರದೆ, ಸಾಮಾಜಿಕ ಎಡರು ತೊಡರುಗಳನ್ನು ಎದುರಿಸಿ, ರಂಗಭೂಮಿಗೆ ವಿಧೇಯಳಾಗಿ ನಿಂತ, ಜನ್ನತ್ ಬೇಗಂ ಬದಾಮಿ ಅವಳದು ಎಂಥ ವ್ಯಕ್ತಿತ್ವ? ಧರ್ಮ, ನಟನೆ ಎರಡನ್ನೂ ಸರಿದೂಗಿಸಿಕೊಂಡು ಹೊರಟವಳು.

1970 ರಿಂದ ಗದಗ "ವೀರೇಶ್ವರ ಕಂಪನಿಯಿಂದಲೇ" ತನ್ನ ನಟನೆಯನ್ನು ಪ್ರಾರಂಭಿಸಿದಳು. ಅವಳ ಸೋದರತ್ತೆ ಅಮೀನಮ್ಮಳಿಂದ ಅಭಿನಯ ಬಳುವಳಿಯಾಗಿ ಬಂದಿತು.

ಮಾಂಡ್ರೆ, ಧುತ್ತರಗಿ, ಕುಕನೂರ ಬಾಬಣ್ಣ, ಗುಡಗೇರಿ ಇವರ ಕಂಪನಿಯಲ್ಲಿ ಖಳನಾಯಕಿ, ಹಾಗೂ ನಾಯಕಿಯಾಗಿ ಮಿಂಚಿದ ಇವಳಿಗೆ ಹೆಚ್ಚು ಖುಷಿ ತಂದುಕೊಟ್ಟ ಪಾತ್ರ 'ರಕ್ತರಾತ್ರಿ' ಪೌರಾಣಿಕ ನಾಟಕದಲ್ಲಿನ ಭಾನುಮತಿ ಪಾತ್ರ.

ಆಗ ನಮ್ಮನ್ನು ಗೌರವದಿಂದ ನೋಡುತ್ತಿದ್ದರು. ಈಗ ಜನರಲ್ಲಿ ಆ ಭಾವನೆಯಿಲ್ಲ. ಇನ್ನೂ ಸರ್ವಿಸ್ ಕಂಪನಿಯಲ್ಲಿ ಮರ್ಯಾದೆ ಇದೆ, ಅಮೆಚೂರಿನಲ್ಲಿ ಇಲ್ಲ ಎಂಬ ಕೊರಗು ಇವಳದು.

"ರೇಣುಕಾ ನಾಟ್ಯ ಸಂಘ ಇಲಕಲ್" ಎಂಬ ಕಂಪನಿ ಕಟ್ಟಿ 3 ವರ್ಷದವರೆಗೆ ಕಂಪನಿಯ ಒಡತಿಯಾಗಿ ಕೈ ಸೋತು ನಿಂತ ಜನ್ನತ್, ಈಗಲೂ ಬಣ್ಣ ಹಚ್ಚುತ್ತಾರೆ "ಲಕ್ಷ್ಮೀ ನಾಟ್ಯ ಸಂಘ ಇಲಕಲ್" ಲೇಡಿಜ್ ಟ್ರೂಪನಲ್ಲಿ ಪುರುಷ ಪಾತ್ರವನ್ನು ಮಾಡುತ್ತಾರೆ.

ಒಮ್ಮೆಯೂ ಕೂಡಾ ಈ ವೃತ್ತಿ ಬೇಸರ ತರಿಸಿಲ್ಲ, ಸಾಯುವವರೆಗೆ ರಂಗಭೂಮಿಯಲ್ಲಿಯೇ ದುಡಿಯಬೇಕು ಎಂಬ ಬಯಕೆ ಇವರದು.

ಹಲವು ಪ್ರಶಸ್ತಿಗಳನ್ನು ಇವಳು ತನ್ನದಾಗಿಸಿಕೊಂಡಿದ್ದಾಳೆ 1986 ರಲ್ಲಿ ಇವರ ಕಲಾಸೇವೆಯನ್ನು ಗುರ್ತಿಸಿ ಮಾರುತೇಶ್ವರ ನಾಟ್ಯ ಸಂಘ ಕೊರಡಕೇರಿ ಅವರ ಪ್ರಶಸ್ತಿ, 2003 ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, 2005 ರಲ್ಲಿ ಪೌರಾಣಿಕ ನಾಟಕೋತ್ಸವ ಅಭಿನಂದನೆ ಮುಂತಾದವು.

ನಿರಂತರ ಕಲಾಸೇವೆಯಲ್ಲಿ ತೊಡಗಿಸಿಕೊಂಡ, ಅದಮ್ಯ ಬಯಕೆಯ ಜನ್ನತ್ ಬೇಗಂ ಇಲಕಲ್‌ನಲ್ಲಿಯೇ ನೆಲೆಯೂರಿ ಕಲೆಯನ್ನೇ ನಂಬಿ ಬದುಕಿನ ಬಂಡಿಯನ್ನು ಸಾಗಿಸುತ್ತಿದ್ದಾಳೆ, ಮಗ ಮತ್ತು ಸೊಸೆಯೊಂದಿಗೆ.

**ಅಜಮತ್ ಬೇಗಂ :**

ತಾಯಿ ಅಮೀನಬಿಯಿಂದ ರಕ್ತಗತವಾಗಿ ಬಂದ ಅಭಿನಯದಿಂದ, ಅಜಮತ್ ಬೇಗಂ 12 ವರ್ಷದವಳಿದ್ದಾಗಲೇ ಬಣ್ಣ ಹಚ್ಚಬೇಕಾಯಿತು. ಅದೂ ಅನಿವಾರ್ಯವೂ ಕೂಡಾ.

ಆಗಲೇ ತಾಯಿ ಅಮೀನಬಿ ಬಣ್ಣದ ಬದುಕಿಗೆ ಹೊಂದಿಕೊಂಡಾಗಿತ್ತು. ತಿರಸ್ಕಾರ ಪುರಸ್ಕಾರ ಏನಿದ್ದರೂ ಅವಳಿಗೆ. ಅದು ಯಾವುದೂ ಅಜಮತ್‌ಳಿಗೆ ಈಗ ನೆನಪಿಲ್ಲ. ನೆನಪಿದ್ದರೂ ಬಹುಶಃ ಹೇಳುವ

ಮನಸ್ಸಿಲ್ಲವೋ? ನಾನೂ ಒತ್ತಾಯ ಮಾಡಲಿಲ್ಲ. ಕಾರಣ ಅಜಮತ್ ಬೇಗಂಳ ಕೂಡಾ ಒಂದರ್ಧ ಗಂಟೆ ಮಾತನಾಡಲು ನನಗೆ ಅವಕಾಶ ಸಿಕ್ಕಿದ್ದೆ ನನ್ನ ಸುದೈವ.

ಅಜಮತ್ ಬೇಗಂಳ ಮಗಳು ಮುನ್ನಿ ಇಲಕಲ್‌ನಲ್ಲಿ ಅಂಜುಮನ್ ಹಾಯಸ್ಕೂಲಿನಲ್ಲಿ ಇಂಗ್ಲೀಷ ಟೀಚರ್ ಅಗಿ ಸೇವೆಗೈಯ್ಯುತ್ತಿದ್ದಾಳೆ. ವಯಸ್ಸು ಚಿಕ್ಕದು ಅನುಭವ ಕಡಿಮೆ ಆದರೂ ಒಬ್ಬ ಕಲಾವಿದೆಯ ಮಗಳು ಶಿಕ್ಷಕಿಯಾಗಿದ್ದಾಳೆ ಎಂಬುದೇ ಹೆಮ್ಮೆಯ ವಿಷಯ. ಸಾವಿರಾರು ಮಕ್ಕಳಿಗೆ ಪಾಠ ಹೇಳಿಕೊಡುವ ಈ ಮುನ್ನಿ ಮನೆಯಲ್ಲಿ ತಾಯಿಗೂ ಕೂಡಾ ಅವಳು ಶಿಕ್ಷಕಿ ಎಂಬುದು ಗೊತ್ತಾಯಿತು.

"ನಮ್ಮ ತಾಯಿ ಈಗ ನಟಿ ಅಲ್ಲ, ಅವಳು ಅದನ್ನೆಲ್ಲಾ ಬಿಟ್ಟು ಬಹಳಾs ವರ್ಷಾ ಆದವು. ನೀವು ಮತ್ತೆ ನಿಮ್ಮ ಪುಸ್ತಕದಲ್ಲಿ ಏನಾದರೂ ಬರದರ ನಮ್ಮ ಧರ್ಮದವರು ನಮ್ಮನ್ನ ಜಾತಿಯಿಂದ ಹೊರಗಿಡ್ತಾರೆ." ಎನ್ನುವ ಮುನ್ನಿಗೆ ಮಾನಸಿಕವಾಗಿ ಕಲಾವಿದರ ಮನೆತನ ನಮ್ಮದು ಎಂದು ಹೇಳಿಕೊಳ್ಳಲು ಹಿಂಜರಿಯಬೇಕಾದರೆ, ಸಮಾಜ ಮಹಿಳಾ ಕಲಾವಿದರನ್ನು ಯಾವ ರೀತಿ ನಡೆಸಿಕೊಳ್ಳುತ್ತದೆ ಎಂಬುದರ ಸಾಕ್ಷಾತ ದರ್ಶನ ನನಗಾಯಿತು.

ತಾಯಿ ಅಜಮತ್ ಬೇಗಂಳ ಅಸಹಾಯಕ ಸ್ಥಿತಿಯನ್ನು ನನ್ನಿಂದ ನೋಡಲು ಆಗಲಿಲ್ಲ. ರಂಗಭೂಮಿ ಅನ್ನ ಉಂಡು ಬೆಳೆದ ಮುನ್ನಿಗೆ ಒಂದಿಷ್ಟು ಕೃತಜ್ಞತಾ ಭಾವ ಇಲ್ಲ, ನಾನು ಒಬ್ಬ ಕಲಾವಿದೆಯ ಮಗಳು ಎಂಬ ಹೆಮ್ಮೆಯೂ ಅವಳಿಗಿಲ್ಲ. ಇದಕ್ಕೆ ಕಾರಣಗಳೂ ಇವೆ.

ಆದರೆ ಆ ಹಿರಿಯ ಕಲಾವಿದೆಗೆ ತನ್ನ ಬದುಕಿನ ಒಂದೊಂದೆ ಪುಟಗಳನ್ನು ತೆರೆದಿಡುವ ತವಕ ಆಕೆಯ ಕಣ್ಣಿನಲ್ಲಿತ್ತು, ಕೊನೆಗೆ ಅದು ಸಾಧ್ಯವಾಯ್ತು.

ಮೊದಲೇ ಹೇಳಿದಂತೆ ಇವಳು 12 ವರ್ಷದವಳಿದ್ದಾಗಲೇ ಡ್ಯಾನ್ಸರ್ ಆಗಿ ವಿಜಯ ಕಲಾನಾಟ್ಯ ಸಂಘ ಮೆದಿಕೇರಿ ಕಂಪನಿಯಲ್ಲಿ 3 ವರ್ಷ ನಟಿಸಿದಳು. ನಂತರ ವೀರೇಶ್ವರ ನಾಟ್ಯ ಸಂಘ ಗದಗ ಕಂಪನಿಯಲ್ಲಿ 8 ವರ್ಷದ ಅಭಿನಯ. ಇವಳೊಬ್ಬ ನೃತ್ಯಪಟು. ಇವಳ ಗರಡಿಯಲ್ಲಿ ಏನಿಲ್ಲವೆಂದರೂ 7–8 ಜನ ನೃತ್ಯ ಕಲಿತಿದ್ದಾರೆ.

ಈಗ ರಂಗಭೂಮಿಯಿಂದ ದೂರಾಗಿ ಸುಮಾರು 15 ವರ್ಷಗಳೇ ಗತಿಸಿದವು.

ಆಗಿನ ಕಾಲಕ್ಕೆ ರಂಗಭೂಮಿಗೆ ಗೌರವವಿತ್ತು. ಹೆಣ್ಮಕ್ಕಳು ಕಲೆಯನ್ನು ನಟನೆಯನ್ನು ನಂಬಿ ಬದುಕುತ್ತಿದ್ದರು. ಈಗ ಕಾಲ ಬಹಾsಳ ಬದಲಾಗೇತಿ ಎಂಬ ನೋವು ಅವರಲ್ಲಿತ್ತು. ನಾನೂ ಹೆಚ್ಚು ಕೆದುಕಲು ಹೋಗಲಿಲ್ಲ. ಮುನ್ನಿಯಿಂದ ಮತ್ತೆ ಆ ತಾಯಿಗೆ ಏನಾದರೂ ಗಂಡಾಂತರವಾದೀತೆಂದು.

ಇವರಿಗೆ ಹಲವು ಪ್ರಶಸ್ತಿಗಳೂ ಸಂದಿವೆ 1995 ರಲ್ಲಿ ಕಂದಗಲ್ ಹನುಮಂತರಾಯರ ರಾಜ್ಯ ಮಟ್ಟದ ಪ್ರಶಸ್ತಿ, 1980 ರಲ್ಲಿ ರಾಯಚೂರ ಜಿಲ್ಲಾ ಸಮ್ಮೇಲನ ಪ್ರಶಸ್ತಿ, 1990 ರಲ್ಲಿ ಮಾರುತಿ ನಾಟ್ಯ ಸಂಘ ಬಳ್ಳಾರಿ ಪ್ರಶಸ್ತಿ 1990 ಅಖಿಲ ಕರ್ನಾಟಕ ವೃತ್ತಿರಂಗಭೂಮಿ ದಾವಣಗೇರಿ 2005 ರಲ್ಲಿ ಕನ್ನಡ ಸಂಸ್ಕೃತಿ ಇಲಾಖೆ ಪ್ರಮಾಣ ಪತ್ರ, ಮಗಳ ಕಣ್ಣಂಜಿಕೆಯಲ್ಲಿ ಧರ್ಮದ ಕಟ್ಟಳೆಗೆ ಜೋತು ಬಿದ್ದು ಪರಿಸ್ಥಿತಿಯ ಕೂಸಾಗಿ ಬದುಕುತ್ತಿದ್ದಾಳೆ ಈ ನಾಟ್ಯ ಮಯೂರಿ.[5]

**ಮಮತಾ ಗುಡೂರು:**

ಗುಡೂರದ ಈ ಕಲಾವಿದೆ ಸೋದರಿಯರ ಮನೆಯನ್ನು ಅರಸಿಕೊಂಡು ಹೋದಾಗ ಕಟ್ಟೆಯ ಮೇಲೆ ಕುಳಿತ ಪ್ರಮಿಳಮ್ಮ ಗುಡೂರ ಅವರು ನಗುನಗುತ್ತಾ ನಮ್ಮನ್ನು ಬರಮಾಡಿಕೊಂಡರು, ಅವರ ಬೆನ್ನ ಹಿಂದೆನೆ ಮಮತಾ ಗುಡೂರ ಅವರು ಬಂದು ನಮ್ಮೊಂದಿಗೆ ಮಾತಿಗಿಳಿದರು. ಪ್ರಮೀಳಾ ಗುಡೂರ ಅವರ ತಂಗಿ ಈ ಮಮತಾ ಗುಡೂರ.

ತಂದೆ ಪಕ್ರುಸಾಬ, ತಾಯಿ ಇಮಾಮುಬೂ (ಇಟಗಿ) ನೇಕಾರಿಕೆ ಮನೆತನದಲ್ಲಿ ಜನಿಸಿದ ಮಮತಾಳಿಗೆ ಅವರ ಅಜ್ಜ ಶೇಖಮ್ಮಾ ಇಟಗಿ ಅವರಿಂದ ಕಲೆ ಬಳುವಳಿಯಾಗಿ ಬಂದಿದೆ. ಇವಳ ಸೋದರತ್ತೆಯರಾದ ತಾರಾಬಾಯಿ, ಸುಶೀಲಾಬಾಯಿ ಅವರೂ ಕಲಾವಿದರು ಹೀಗಾಗಿ ಮಮತಾ ಐದು ವರ್ಷದವಳಿದ್ದಾಗಲೇ ಆಕಸ್ಮಿಕವಾಗಿ ರಂಗಭೂಮಿಯ ಪ್ರವೇಶ, ಮ್ಯಾಗೇರಿ ಮಾಸ್ತರ ಹತ್ತಿರ ನೃತ್ಯ ಅಭ್ಯಾಸ.

ಒಂದೊಂದೆ ಮೆಟ್ಟಿಲನ್ನು ಏರುತ್ತ ನಡೆದ ಮಮತಾ ಹಿಂದಿರುಗಿ ನೋಡಲೇ ಇಲ್ಲ. ಬಿ.ಆರ್. ಅರಿಶಿನಗೂಡಿ ಇವರ ಕಂಪನಿಯಲ್ಲಿ ಮೊದಲ ನಟನೆ ಪ್ರಾರಂಭ, ತದನಂತರ ಗುಡಗೇರಿ ಕಂಪನಿ, ಕೆ.ಬಿ.ಅರ್. ಡ್ರಾಮಾ, ಮೆದಿಕೇರಿ ಯಮನಪ್ಪನವರ ಕಂಪನಿ, ಮೈಂದಿರಗಿ ಕಂಪನಿ, ಸೂಡಿ ಶೇಖರಪ್ಪನವರ ಕಂಪನಿ ಹೀಗೆ ಒಟ್ಟು 45 ವರ್ಷದಿಂದ ರಂಗಭೂಮಿಯ ನಂಟು. ಈಗ 20 ವರ್ಷದಿಂದ ಅಭಿನಯದಿಂದ ದೂರ ಸರಿದಿದ್ದಾರೆ.

"ರಂಗಭೂಮಿ ತಾಯಿ ನಮಗೆ ಕಲೆಯನ್ನು ದೇಣಿಗೆಯಾಗಿ ನೀಡಿದ್ದಾಳೆ. ಅವಳಿಗೆ ನಾವು ನಿಷ್ಠೆಯಿಂದ ನಡಕೋಬೇಕು. ಅಂದು ಕಲೆಗೆ ಪ್ರಾಧಾನ್ಯತೆ ಇತ್ತು ಇಂದು ಸೌಂದರ್ಯಕ್ಕೆ ಹೆಚ್ಚು ಬೆಲೆ ಐತಿ" ಎನ್ನುವ ಮಮತಾ, ಅವಳ ನೆರಳು, ಮನೆಗೆ ಬಂದ ಮಹಾಲಕ್ಷ್ಮೀ, ಮೈಸೂರು ಜಾಣ, ಮುಂತಾದ ಕೆಲವೊಂದು ಚಿತ್ರಗಳಲ್ಲಿ ತಾಯಿಯಾಗಿ ನಟಿಸಿದ್ದಾಳೆ. ಸೂಡಿಶೇಖರ ಕಂಪನಿ ಬಿಟ್ಟು ಬಂದ ಮೇಲೆ

---

[5] 18–5–2009 ರಂದು ಇಲಕಲ್‌ನಲ್ಲಿ ಸಂದರ್ಶನ ಮಾಡಿದ್ದು.

ಕಂಪನಿ ಲಾಸ್ ಆಯ್ತು ಎಂದು ಹೇಳುತ್ತಾರೆ. ಆ ಕಂಪನಿಗೆ ಇವಳ ಅವಶ್ಯಕತೆ ಎಷ್ಟಿತ್ತು ಎಂಬುದು ಗೊತ್ತಾಗುತ್ತದೆ.

ಯಾವ ಪ್ರಶಸ್ತಿಯ ಬೆನ್ನು ಹತ್ತದ, ಕಲೆಯನ್ನು ಗುರ್ತಿಸಿ ಅವರು ಪ್ರಶಸ್ತಿ ಕೊಡಲಿ ಎಂಬ ಸ್ವಾಭಿಮಾನದ ಹೆಣ್ಣು ಮಮತಾ ಗುಡೂರ. ಆದರೆ ಅಷ್ಟೊಂದು ಬುದ್ಧಿವಂತ ಸರಕಾರ ನಮ್ಮದಲ್ಲವಲ್ಲ.

ಯಾವುದೇ ಜಾತಿ ಧರ್ಮದ ಬಗ್ಗೆ ತಲೆಕೆಡಿಸಿಕೊಳ್ಳದೆ ಮಕ್ಕಳು, ಸೊಸೆಯಂದಿರೊಂದಿಗೆ ತೃಪ್ತಿಕರ ಜೀವನ ಸಾಗಿಸುತ್ತಿದ್ದಾಳೆ.

**ಪ್ರಮಿಳಮ್ಮ ಗುಡೂರು :**

ಕಲಾವಂತರ ಕುಟುಂಬದಲ್ಲಿ ಬೆಳೆದು ಬಂದ ಪ್ರಮಿಳಮ್ಮಳಿಗೆ ಕಲೆ ರಕ್ತಗತವಾಗಿತ್ತು.

ಬಾಲ್ಯದಿಂದಲೇ ಸಂಗೀತದ ಹುಚ್ಚು ಇವಳಿಗೆ. ಸಂಗೀತ ಕಲಿಯುವದಕ್ಕಾಗಿಯೇ ವಸಂತ ಕಲಾ ನಾಟ್ಯ ಸಂಘ ಗದಗ ಕಂಪನಿಯನ್ನು ಸೇರಿದಳು. ಹನ್ನೊಂದು ವರ್ಷದವಳಿದ್ದಾಗ ರಂಗಭೂಮಿ ಪ್ರವೇಶ. ಆಕಸ್ಮಿಕವಾಗಿಯೋ ಅನೀರೀಕ್ಷಿತವಾಗಿಯೋ ಗೊತ್ತಿಲ್ಲ ನನ್ನಲ್ಲಿ ಒಬ್ಬ ಕಲಾದೇವತೆ ಇದ್ದಳು ಅವಳೇ ನನ್ನನ್ನು ಈ ರಂಗಭೂಮಿಗೆ ಕರೆತಂದಳು ಎನ್ನುವ ಈ ಅಜ್ಜಿಗೆ ಒಂದಿನಿತು ಅಹಂಮಿಕೆ ಇಲ್ಲ. ಮನೆತನದ ಪರಿಸ್ಥಿತಿಯೂ ಬಹಳ ನಾಜೂಕಾಗಿತ್ತು. ಏನಕೇನ ಕಾರಣ ಈ ವೃತ್ತಿ ನನ್ನ ಕೈ ಮಾಡಿ ಕರೆಯಿತು. ಇವರ ಮೊದಲ ರಂಗಭೂಮಿಯ ಜೀವನ ಪ್ರಾರಂಭವಾದದ್ದು ಎಚ್. ಎನ್. ಹೂಗಾರರ 'ಕಮಲಾಕ್ಷಿ' ನಾಟಕದಿಂದ. ತದನಂತರ ಅರ್ಜುನಸಾ ನಾಕೋಡ ಅವರ ಕಂಪನಿಯಲ್ಲಿ ಸಾಳುಂಕೆ ಅವರ 'ತಂಗಿಮನಿ' ನಾಟಕದಲ್ಲಿ ತಂಗಿಯ ಪಾತ್ರ, ಮೈಂದಿರಗಿ ಕಂಪನಿ, ಅರಿಶಿನಗೋಡಿ ಕಂಪನಿ, ಗುಡಗೇರಿ ಕಂಪನಿಗಳಲ್ಲಿ ಅವಿರತ ದುಡಿಮೆ ಇವರದು. ಅರಿಶಿನಗೋಡಿ ಕಂಪನಿಯಲ್ಲಿಯೇ ಸುಮಾರು 20 ವರ್ಷದಷ್ಟು ದೀರ್ಘ ಸೇವೆಗೈದು ಆ ಕಂಪನಿಗೆ ಒಳ್ಳೆಯ ಹೆಸರನ್ನು ತಂದವರಲ್ಲಿ ಇವರೂ ಒಬ್ಬರು.

ತಂದೆ ತಾಯಿ ಇಟ್ಟಂತಹ ಪಾತಿಮಾ ಹೆಸರು ಅರಿಶಿನಗೋಡಿಯವರ ಕಂಪನಿಗೆ ಸೇರಿದ ಮೇಲೆ ಪ್ರಮೀಳಾ ಎಂದು ಮಾರ್ಪಾಡಾಯ್ತು. ಕಲೆಗೆ ಎಲ್ಲಿದೆ ಧರ್ಮ ಜಾತಿ. ನಾಟಕಗಳು ಇವರಿಗೆ ಒಳ್ಳೆಯ ಹೆಸರನ್ನು ಹೆಚ್ಚು ಖುಷಿಯನ್ನು ತಂದುಕೊಟ್ಟಿವೆ.

ಕಂಚಿನ ಕಂಠದ ಪ್ರಮಿಳಮ್ಮ ಯಾವ ಪಾತ್ರ ಕೊಟ್ಟರೂ (ಹಾಸ್ಯ ಪಾತ್ರ ಬಿಟ್ಟು) ಬೇಷ್ ಎನಿಸಿಕೊಳ್ಳುತ್ತಿದ್ದರು. ರಕ್ತರಾತ್ರಿ ನಾಟಕದಲ್ಲಿ ದುರ್ಯೋಧನ ಪಾತ್ರಕ್ಕೆ ಕ್ಲ್ಯಾಪ್ಸ ಬೀಳುತ್ತಿದ್ದವಂತೆ. 80ರ ಅಂಚಿನಲ್ಲಿರುವ ಪ್ರಮಿಳಮ್ಮ ಹೇಳುವುದನ್ನು ಕೇಳಿದರೇನೇ ಏನೋ ಒಂದು ಥರ ಮೈಯಲ್ಲಿ ಮಿಂಚು ಸಂಚರಿಸಿದ ಅನುಭವ. ಇನ್ನು ಪಾತ್ರ ನೋಡಿದರೆ ಹೇಗಿರುತ್ತೆ ನೀವೆ ಊಹಿಸಿ. 'ಜಹಾಗೀರದಾರ ಜಗಳ' ಈ ನಾಟಕದ ಕಾತ್ಯಾಯಿನಿ ಪಾತ್ರ ಅದೆಷ್ಟು ಪ್ರಸಿದ್ಧಿಯಾಗಿತ್ತೆಂದರೆ. ಒಮ್ಮೆ ಈ ನಾಟಕವನ್ನು

ನೋಡುವುದಕ್ಕಾಗಿನೇ ಚಿತ್ರರಂಗದ ಜನಪ್ರೀಯತಾರೆ ಕಲ್ಪನಾ ಬಂದಿದ್ದರಂತೆ. ಸ್ವಾಭಿಮಾನಿ ಹಾಗೂ ದುರಹಂಕಾರಿಯ ಪಾತ್ರ ಅದು. ಆ ಪಾತ್ರವನ್ನು ಮಾಡುವ ಆಶೆ ಕಲ್ಪನಾ ಅವರಿಗಿತ್ತಂತೆ. ಆದರೆ ಪ್ರಮಿಳಾ ಅವರು ಆ ಪಾತ್ರವನ್ನು ಮಾಡಿದ್ದನ್ನು ನೋಡಿದ ಮೇಲೆ, ಪ್ರಮಿಳಾ ಮಾತ್ರ ಆ ಪಾತ್ರಕ್ಕೆ ಜೀವ ತುಂಬಬಲ್ಲರು ಎಂದು ತಾವು ಆ ಪಾತ್ರದಿಂದ ದೂರ ಸರಿದರಂತೆ. ಅಂಥ ಅದ್ಭುತ ಅಭಿನಯ ಪ್ರಮಿಳಮ್ಮಳದು.

ಹಲವಾರು ಪ್ರಶಸ್ತಿಗಳು ಇವರನ್ನು ಹುಡುಕಿಕೊಂಡು ಬಂದಿವೆ. ಪಾತ್ರಕ್ಕೆ ಜೀವತುಂಬಿ ನಟಿಸುವ ಪ್ರಮಿಳಮ್ಮಳಿಗೆ 'ಭಾವ ಭಾಗ್ಯಶ್ರೀ' ಹಾಗೂ 1967 ರಲ್ಲಿ ಶಾಂತರಸ ಅವರು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ 'ನಾಟ್ಯ ಸರಸ್ವತಿ' ಎಂಬ ಬಿರುದು ಕೊಟ್ಟರು. 1994 ರಲ್ಲಿ ಚಿಂದೋಡಿಲೀಲಾ ಅವರು ನಾಟಕ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಅಕಾಡೆಮಿ ಪ್ರಶಸ್ತಿ ಸಂದಿದೆ.

ತಂದೆ ಜನ್ಮಕೊಟ್ಟ, ಬದುಕಾಕ ಜೀವ ತುಂಬಿದವರು ಮಹಾಂತೇಶ ಶಾಸ್ತ್ರಿಗಳು, ಇಳಿಹೊತ್ತಿನಲ್ಲಿಯೂ ಅವರನ್ನು ಸ್ಮರಿಸಿಕೊಳ್ಳುವ ಪ್ರಮಿಳಮ್ಮನಲ್ಲಿ ಎಂಥ ಕೃತಜ್ಞತಾಭಾವ .

ರಂಗಭೂಮಿ ನನಗೆ ಸಂತಸವನ್ನು ಕೊಟ್ಟಿದೆ, ಆದರೆ ಯಾಕೋ ಏನೋ ಎರಡುಮೂರು ವರ್ಷದ ಹಿಂದೆ ಒಂದಿಷ್ಟು ಜೀವನದ ಬಗ್ಗೆ ಬೇಸರ ಮೂಡಿದ್ದುಂಟು.

ಜೇವರಗಿ ರಾಜಣ್ಣನವರ 'ತಾಯಿಯ ಕರುಳು' ನಾಟಕದಲ್ಲಿ ತಾಯಿಯ ಪಾತ್ರಕ್ಕೆ ಕರೆ ಬಂದಾಗ, ಹೋದ ಜೀವ ಬಂದಂಗಾತು. 'ಮುತ್ತಿನ ತೋರಣ' ಧಾರವಾಹಿ, ಗುಲಾಬಿ ಟಾಕೀಜ್ ಸಿನೆಮಾ ಪ್ರಮಿಳಮ್ಮನಿಗೆ ಮತ್ತೆ ಮರಳಿ ಚೈತನ್ಯ ತಂದು ಕೊಟ್ಟವು. ಧರ್ಮಾತೀತ ಬದುಕು ಇವಳದು.

ರಂಗಭೂಮಿಯಲ್ಲಿನ ತೃಪ್ತಿ ಈ ಟೀವಿ ಸೀರಿಯಲ್ಲಿನಲ್ಲಿ ಇಲ್ಲವೆಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ ಅಜ್ಜಿಯದು ಮಗುವಿನಂಥ ಮನಸು.[6]

---

[6] 17–5–2009 ರಂದು ಗುಡೂರಿನಲ್ಲಿ ಸಂದರ್ಶನ ಮಾಡಿದ್ದು.

**ಜುಬೇದಾಬಾಯಿ ಸವಣೂರ:**

ಕಟ್ಟಾ ಸಂಪ್ರದಾಯಸ್ಥ ಕುಟುಂಬದಲ್ಲಿ 1931 ರಲ್ಲಿ ಹಜರೇಸಾ ಹಾಗೂ ಜೈನಬಿ ದಂಪತಿಗಳಲ್ಲಿ ಮಹಾಸಂತರಾದ ಹಜರೇಶಾ ಖಾದ್ರಿಯವರ ವರಪ್ರಸಾದದಿಂದ ಜನಿಸಿದ ಮಗುವಿಗೆ ಹಜರತ್‌ಬಿಯೆಂದೇ ಹೆಸರಿಟ್ಟರು. ಆದರೆ ಸಂತರ ಹೆಸರಿನಿಂದ ಕರೆಯುವುದು ಸರಿಯಲ್ಲವೆಂದು ಜುಬೇದಾಬಾನು ಎಂದು ಕರೆಯತೊಡಗಿದರು.

ಸುಖಕ್ಕೆ ಯಾವ ಕೊರತೆಯಿಲ್ಲದಂತೆ ಖವಾ, ಗೋಡಂಭಿ ತಿಂದು ಬೆಳೆದ ಜುಬೇದಾಳಿಗೆ ಈ ಸುಖ ಮರೀಚಿಕೆಯಾಗುವದೆಂದು ಅವಳಿಗಾದರೂ ಹೇಗೆ ತಾನೆ ತಿಳಿದೀತು? ಹೆತ್ತವರನ್ನು ಕಳೆದುಕೊಂಡ ಮೇಲೆ ಅನಾಥ ಪ್ರಜ್ಞೆ ಕಾಡ ತೊಡಗಿತು.

ಮುಂದೆ ಅಜ್ಜ ಅಜ್ಜಿಯ ಆಶ್ರಯದಲ್ಲಿ ಬೆಳೆದ ಜುಬೇಧಾಳಿಗೆ ತನ್ನ ಎಂಟನೇಯ ವಯಸ್ಸಿನಲ್ಲಿಯೇ ಬದುಕಿನ ನೊಗಕ್ಕೆ ಹೆಗಲುಕೊಡಬೇಕಾಯ್ತು. ಅದೇ ಸಂದರ್ಭದಲ್ಲಿ ಕಾಕತಾಳೀಯ ವೆಂಬಂತೆ ಹುಲಿಮನಿ ಸೀತಾರಾಮ ಶಾಸ್ತ್ರಿ ಯವರು ಹಾವೇರಿಯಲ್ಲಿ ನಾಟಕದ ಕ್ಯಾಂಪ್ ಹಾಕಿದ್ದರು. ಮೊದಲೇ ಸಂಗೀತದ ಗೀಳು ಅಂಟಿಸಿಕೊಂಡ ಜುಬೇದಾ ಹಿರಿಯರ ಕಣ್ತಪ್ಪಿಸಿ ನಾಟಕ ನೋಡಲು ಹೋಗತೊಡಗಿದಳು, ಹೊಡೆತ ತಿಂದರೂ ಬಣ್ಣದ ಬದುಕು ಅವಳನ್ನು ಕೈಬೀಸಿ ಕರೆಯಿತು.

ಆ ಕಾಲದ ಮಹಿಳೆಯರ ಸ್ಥಿತಿಗತಿ ಹೇಗಿತ್ತು ಎಂಬುದನ್ನು ಊಹಿಸಿಕೊಳ್ಳಲೂ ಭಯ, ಅಡುಗೆ ಮನೆನೆ ಅವರ ಜಗತ್ತು, ಇನ್ನು ಕಟ್ಟಾ ಸಂಪ್ರದಾಯಸ್ಥ ಇಸ್ಲಾಂಧರ್ಮದಲ್ಲಿ ಬೆಳೆದ ಜುಬೇದಾಬಾನುವಿನ ಸ್ಥಿತಿ ಹೇಗಿರಬೇಡ? ಪುರುಷರೆ ಸ್ತ್ರೀ ಪಾತ್ರಗಳನ್ನು ಮಾಡುತ್ತಿದ್ದುದರಿಂದ, ಸ್ತ್ರೀಯರಿಗೆ ಆ ಕ್ಷೇತ್ರ ನಿಷಿದ್ಧವಾಗಿತ್ತು ಇನ್ನು ಜುಬೇದಾಳ ಧರ್ಮ ಸುಮ್ಮನೆ ಬಿಟ್ಟೀತೆ?

ಜುಬೇದಾ ಬಾನುವನ್ನು ಧರ್ಮದ ಶೃಂಖಲೆ ಯಾವ ರೀತಿ ಕಟ್ಟಿಹಾಕಿರಬಹುದು? ಆದರೂ ಅವಳಲ್ಲಿರುವ ಆ ಸಂಗೀತ ಅವಳನ್ನು ಸುಮ್ಮನೆ ಕೂಡಲು ಬಿಡಲಿಲ್ಲ, ನಟನೆಯ ಬಗ್ಗೆ ಗೊತ್ತಿರದಿದ್ದರೂ ರಾಗಗಳ ಬಗ್ಗೆ ಸ್ವಲ್ಪ ಜ್ಞಾನವಿತ್ತು. ನಾಟಕದವರ ಬೆನ್ನು ಹತ್ತಿ ಮಗಳು ಮನೆತನದ ಗೌರವವನ್ನು ಬೀದಿ ಪಾಲು ಮಾಡುವಳಲ್ಲ ಎಂಬ ಕೊರಗು ಮನೆಯವರನ್ನು ಕಾಡಿತು.

ಕೊನೆಗೂ ಜುಬೇದಾ ಎಲ್ಲ ಶೃಂಖಲೆಗಳನ್ನು ಕಿತ್ತೊಗೆದು ನರೇಗಲ್ಲ ಚನ್ನಬಸವಯ್ಯನವರ ಕಂಪನಿಯನ್ನು ಪ್ರವೇಶಿಸಿದಳು.

ಅವಳ ಮೊದಲ ನಾಟಕ ಚಂದ್ರಹಾಸ. ಅಲ್ಲಿ ಲೋಹಿತಾಶ್ವನ ಪಾತ್ರ ಮಾಡಿದಳು. ಕೊನೆಗೂ ಬಾಲಕಲಾವಿದೆಯಾಗಿ ಜುಬೇದಾ ಮೊದಲಸಲ ಜೀವನದ ಪಂದ್ಯದಲ್ಲಿ ಗೆದ್ದಿದ್ದಳು. ಅಷ್ಟೊತ್ತಿಗಾಗಲೇ ಬಸವಲಿಂಗಶಾಸ್ತ್ರಿ ಬಾಳೀಮಠರ ನಾಟಕವೊಂದಕ್ಕೆ ನಟಿಯ ಅವಶ್ಯಕತೆಯಿತ್ತು. ಇವಳೇನೂ ಅಂಥ

ಸ್ಫುರದ್ರೂಪಿ ಯುವತಿ ಅಲ್ಲ.ಆದರೆ ಒಳ್ಳೆಯ ಕಂಠ ಸಿರಿ ಇತ್ತು. ತನ್ನ ಕಂಚಿನ ಕಂಠದಿಂದ ರಂಗಗೀತೆಗಳಿಗೆ ಮೆರಗನ್ನು ತಂದಳು. ಕಾಡುಗಲ್ಲನ್ನು ಕಟೆದು ಒಂದು ಮೂರ್ತಿಯನ್ನಾಗಿ ಮಾಡಿದವರು ಬಸವಲಿಂಗಶಾಸ್ತ್ರಿಗಳು.

ಕಲೆಯ ಹಸಿವು ಇಬ್ಬರನ್ನು ಒಂದು ಮಾಡಿತ್ತು. ಜನರಲ್ಲಿ ಗುಸುಗುಸು, ಪಿಸುಪಿಸು ಶುರುವಾಯ್ತು. ಕ್ಯಾರೆ ಎನ್ನದ ಜುಬೇದಾ ಅವನ್ನೆಲ್ಲ ದಿಟ್ಟತನದಿಂದ ಎದುರಿಸಿದಳು. ಅವಳ ಸ್ಥೂಲ ಶರೀರ ನಟನೆಗೆ ಅಡ್ಡಿಯಾದರೆ ಅವಳ ಕೋಗಿಲೆಯ ಕಂಠ ಅವಳನ್ನು ಸಪ್ತಸ್ವರದ ಆಲಾಪದಲ್ಲಿ ತೇಲಾಡಿಸಿದ್ದು ಸತ್ಯ

ಬಾಲ್ಯದಿಂದಲೂ ಅವಳಿಗೆ ಸಂಗೀತದ ಹುಚ್ಚು. ಪಂಚಾಕ್ಷರಿ ಗವಾಯಿಗಳಿಂದ ಸಂಗೀತವನ್ನು ಕಲಿಯಬೇಕೆಂಬ ಅದಮ್ಯ ಆಶೆ ಆಸೆಯಾಗಿಯೇ ಉಳಿಯಿತು. ಧೈರ್ಯಗೆಡದೆ ಜುಬೇದಮ್ಮ ಗವಾಯಿಗಳ ಶಿಷ್ಯ ದಿರೇಂದ್ರಾಚಾರ್ ಅವರಿಂದ ಸಂಗೀತಾಭ್ಯಾಸವನ್ನು ಮಾಡಿದಳು. ಒಬ್ಬ ಪ್ರಯತ್ನವಾದಿ ಕಲಾವಿದೆ ಜುಬೇದಮ್ಮ.

ಸಂಗೀತ ಪ್ರಧಾನವಾದಂತ ಸಂಗೀತದಿಂದಲೇ ತಮ್ಮನ್ನು ತಾವು ಗುರುತಿಸಿಕೊಳ್ಳುವಂತಹ ನಾಟಕ ಕಂಪನಿಗಳು ಅಂದು ಚಾಲ್ತಿಯಲ್ಲಿದ್ದವು. ವಾಮನರಾವ ಮಾಸ್ತರರ ಮಂಡಳಿ, ಗೋಕಾಕದ ಶಾರದಾ ಸಂಗೀತ ನಾಟಕ ಮಂಡಳಿ, ಗರುಡ ಸದಾಶಿವರಾಯರ ದತ್ತಾತ್ರೇಯ ಸಂಗೀತ ನಾಟಕ ಮಂಡಳಿಯಲ್ಲಿ. ರಾಗ ಅಲಾಪದಲ್ಲಿನೇ ಸಂಭಾಷಣೆಗಳು ಇರುತ್ತಿದ್ದವು. ಜನರಿಗೂ ಹಿಡಿಸುತ್ತಿದ್ದವು. ರಂಗಭೂಮಿಯ ಸಾಮ್ರಾಜ್ಞಿಯಾಗಿ ರಂಗ ಭೂಮಿಯ ಕೋಗಿಲೆಯಾಗಿ ಮರೆದಳು.

ಅಜ್ಜ ಕಮಲ್ ದಿವಾನ್ ಒಳ್ಳೆಯ ನಟ ಹಾಗೂ ಕವ್ವಾಲಿ ಗಾಯಕರಾಗಿದ್ದರಂತೆ.

ಕಂಪನಿ ನಷ್ಟದಲ್ಲಿದ್ದಾಗ, ಶಾಸ್ತ್ರಿಗಳ ಕುಟುಂಬ ಕಷ್ಟದಲ್ಲಿದ್ದಾಗ, ಜುಬೇದಾಬಾಯಿ ಎಷ್ಟೋ ಸಲ ಅವರ ಕಷ್ಟದಲ್ಲಿ ಪಾಲುದಾರಳಾಗಿ ಉದಾತ್ತತೆಯನ್ನು ಮೆರೆದಿದ್ದಾಳೆ.

ಕುರುಕ್ಷೇತ್ರದ ದ್ರೌಪದಿ, ರೇಣುಕಾ ಮಹಾತ್ಮೆಯ ರೇಣುಕಾ, ಹೇಮರೆಡ್ಡಿ ಮಲ್ಲಮ್ಮನ ಮಲ್ಲಮ್ಮನ ಪಾತ್ರ ಜುಬೇದಾಳಿಗೆ ಹೆಸರನ್ನು ಕೀರ್ತಿಯನ್ನು ತಂದುಕೊಟ್ಟವು. ಬೆಂಗಳೂರಿನ ಕ್ಯಾಂಪನಲ್ಲಿ "ರಂಗಭೂಮಿಯ ರತ್ನ" ಎಂಬ ಬಿರುದು ಕೊಟ್ಟವರು ಅಲ್ಲಿನ ಜನರು.

ಸ್ವಾಭಿಮಾನಿಯಾದ ಅನ್ಯಾಯಕ್ಕೆ ಸಿಡಿದೇಳುವ ಇನ್ನೊಬ್ಬರ ಕಷ್ಟ ಸುಖದಲ್ಲಿ ಒಂದಾಗುವ ಜುಬೇದಾ ರಂಗಭೂಮಿಗಾಗಿ ಸಮಾಜವನ್ನೆ ದಿಕ್ಕರಿಸಿದ ದಿಟ್ಟ ಮಹಿಳೆ. 1993ರಲ್ಲಿ ಧಾರವಾಡದ ಜರ್ಮನ್ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದಳು.

**ಅಮೀರಬಾಯಿ ಕರ್ನಾಟಕಿ :**

ಬಹುಮುಖ ಪ್ರತಿಭೆಯ ಬಹುಮುಖ ವ್ಯಕ್ತಿತ್ವದ ಈ ಅಮೀರಜಾನ ಕರ್ನಾಟಕಿ ಹುಟ್ಟಿದ್ದು ಬೀಳಗಿಯಲ್ಲಿ. ಆಗ ಅದೊಂದು ಪುಟ್ಟ ಗ್ರಾಮ. ಆದರೆ ಅವಳಿಗೆ ಬದುಕು ಕೊಟ್ಟಿದ್ದು ಮುಂಬಯಿ ಶಹರ. ನಟಿಯಾಗಿ ಗಾಯಕಿಯಾಗಿ ಮಿಂಚಿದ ಅಮೀರಜಾನ್ ಸ್ಫುರದ್ರೂಪಿ ಮಹಿಳೆ.

ನನ್ನ ತಾಯಿಯ ತವರು ಬಿಜಾಪುರ ಜಿಲ್ಲೆಯ ಖಾಜಾ ಅಮೀನ ದರ್ಗಾ ಸೂಫಿ ಪಂಥಕ್ಕೆ ಸೇರಿದ ಖಾಜಾಮೋಯಿದ್ದೀನ್ ಅವರ ಉರುಸಿಗೆ ಪ್ರತಿ ವರ್ಷ ತಪ್ಪದೇ ಈ ಕಲಾವಿದೆ ಮುಂಬಯಿಂದ ಬಂದು ಸಂಗೀತದ ರಸದೌತಣವನ್ನು ಉಣಬಡಿಸುತ್ತಿದ್ದಳಂತೆ. ಅವಳ ರೂಪಕ್ಕೆ ಮರುಳಾಗಿ, ಹಾಡಿಗೆ ಬೆರಗಾಗಿ, ಅಭಿಮಾನಿಗಳ ಮಹಾಪೂರವೇ ಹರಿದು ಬರುತ್ತಿತ್ತೆಂದು ನಮ್ಮ ತಾಯಿಯ ಕಾಕಾ ಹೇಳುತ್ತಿದ್ದರು.

ಬೀಳಿಗಿಯಿಂದ ಬಿಜಾಪೂರಕ್ಕೆ ಬಂದು ನೆಲೆಸಿದ ಅಮೀರಜಾನ ಇವರ ಬಣ್ಣದ ಬದುಕು ಆರಂಭವಾದದ್ದೆ ರಂಗಭೂಮಿಯಿಂದ. ಇವಳ ಆಸ್ತಿ ಒಳ್ಳೆಯ ಕಂಠಸಿರಿ, ಸುಂದರ ಮೈಮಾಟ. ರಂಗಭೂಮಿಗೆ ಬೇಕಾದದ್ದು ಅದು ಅವಳಲ್ಲಿತ್ತು. ಬೀಳಗಿಯಿಂದ ಬಿಜಾಪೂರಕ್ಕೆ ಬಂದ ಅಮೀರಬಾಯಿ ಹೆಚ್ಚು ಕಾಲ ಅಲ್ಲಿ ಉಳಿಯಲಿಲ್ಲ. ಪ್ರತಿಭೆ ಇದ್ದರೆ ಅವಕಾಶಗಳಿಗೆಲ್ಲಿ ಕೊರತೆ? ಮುಂಬೈ ಶಹರ ಇವಳನ್ನು ಕೈಮಾಡಿ ಕರೆಯಿತು.

40ರ ದಶಕದಲ್ಲಿ 'ಆವಾರಾ', 'ಕಿಸ್ಮತ್' ಪಿಕ್ಚರಗಳು ಪಡ್ಡೆ ಹುಡುಗರಿಗೆ ಹುಚ್ಚು ಹಿಡಿಸಿದ್ದವು. ಅಲ್ಲಿರುವ ಸಂಭಾಷಣೆಗಾಗಿ, ಅಥವಾ ಹೀರೋ ಹಿರೋಯಿನ್‌ಗಾಗಿ ಇಂದಿರಾ? ಇದ್ಯಾವುದೂ ಅಲ್ಲ. ಆ ಸಿನಿಮಾದಲ್ಲಿಯ ಹಾಡುಗಳಿಗಾಗಿ ಯುವಜನಾಂಗ ತೆಲೆಕೆಡಿಸಿಕೊಂಡಿತ್ತು. ಆ ಹಾಡಿನ ಗುಂಗಿನಲ್ಲಿಯೇ ದಿನ ರಾತ್ರಿ ಕಳೆದವರೂ ಉಂಟು. ಆ ಹಾಡುಗಳನ್ನು ಹಾಡಿದವರು ಬೇರೆಯಾರೂ ಅಲ್ಲ; ಅದ್ಭುತ ಕಂಠಸಿರಿಯ ಅಮೀರಜಾನ ಕರ್ನಾಟಕಿ.

ಒಬ್ಬ ಮುಸ್ಲಿಂ ಮಹಿಳೆಯಾಗಿ ಮಡಿವಂತಿಕೆಯ ಸಮಾಜಕ್ಕೆ ಸೊಪ್ಪು ಹಾಕದೆ ದಿಟ್ಟ ಹೆಜ್ಜೆಯನ್ನಿಟ್ಟು ಸಾಧನೆಯ ಶಿಖರಕ್ಕೇರುವುದೆಂದರೆ ಸಣ್ಣ ಮಾತಲ್ಲ. ಬಿಜಾಪೂರದಲ್ಲಿ ಅವಳೇ ಕಟ್ಟಿಸಿದ ಅವಳ ಹೆಸರಿನ ಒಂದು ಸಿನೇಮಾ ಟಾಕೀಜ ಕೂಡ ಇವತ್ತಿಗೂ ಚಾಲ್ತಿಯಲ್ಲಿದೆ (ಅಮೀರ ಟಾಕೀಜ).

ಸಂಪ್ರದಾಯದ ಬೇಲಿಯನ್ನು ದಾಟುವ ಶಕ್ತಿ ರಂಗಭೂಮಿಗೆ ಇದೆ. ಎಂಬುದು ಹಲವಾರು ಹಿರಿಯ ನಟಿಯರನ್ನು ಸಂದರ್ಶಿಸಿದಾಗ ಮನವರಿಕೆಯಾಯ್ತು.

ಅಮೀರಬಾಯಿ ಕರ್ನಾಟಕಿ ಇಷ್ಟು ಎತ್ತರಕ್ಕೆ ಏರಲು ರಂಗಭೂಮಿಯೇ ಬುನಾದಿ. ತನ್ನ 17ನೇ ವಯಸ್ಸಿನಲ್ಲಿ. ಅಂದರೆ 1928ರಲ್ಲಿ ಶ್ರೀ ವಾಣಿ ವಿಲಾಸ ಸಂಗೀತ ನಾಟಕ ಮಂಡಳಿ ಗದಗ ಈ ಮಂಡಳಿಯ ನಟನೆಯೇ ಇವಳ ಮುಂದಿನ ಭವಿಷ್ಯಕ್ಕೆ ಭದ್ರ ಬುನಾದಿಯಾಯ್ತು.

ಖ್ಯಾತ ಸಂಶೋಧಕರೂ, ಸಾಹಿತಿಗಳೂ ಆದ ಡಾ. ರಹಮತ ತರೀಕೇರಿ ಅವರು 2009ರ ಯುಗಾದಿ ವಿಶೇಷಾಂಕ ಸುಧಾದಲ್ಲಿ "ಮರವಿಗೆ ಸಂದ ಕಲಾವಿದೆ ಅಮೀರಬಾಯಿ ಕರ್ನಾಟಕಿ" ಎಂಬ ಲೇಖನದಲ್ಲಿ ಅಮೀರಬಾಯಿಯವರ ವೃತ್ತಿಜೀವನ ಪ್ರಾರಂಭವಾದದ್ದೆ ಗದುಗಿನ ರಂಗಭೂಮಿಯಿಂದ. ಆದರೆ ಅವರು ಯಾವ ಕಂಪನಿಯಲ್ಲಿದ್ದರೂ ಎಂಬುದು ಗೊತ್ತಾಗುವದಿಲ್ಲ ಎನ್ನುತ್ತಾರೆ. ಡಾ. ರಾಮಕೃಷ್ಣ ಮರಾಠೆಯವರು ಉತ್ತರ ಕರ್ನಾಟಕ ವೃತ್ತಿರಂಗ ಭೂಮಿ" ಎಂಬ ಸಂಶೋಧನಾ ಗ್ರಂಥದಲ್ಲಿ "ಶ್ರೀ ವಾಣಿವಿಲಾಸ ಸಂಗೀತ ನಾಟಕ ಮಂಡಳಿ ಗದಗ" ಈ ಕಂಪನಿಯಲ್ಲಿ ನಟಿಸಿದ ನಟಿಯರು ಎಂಬಲ್ಲಿ ಗೋಹರಜಾನ್ ಕರ್ನಾಟಕಿ, ಅಮೀರಜಾನ್ ಕರ್ನಾಟಕಿ, ಈ ನಟಿಯರ ಹೆಸರುಗಳನ್ನು ಉಲ್ಲೇಖಮಾಡಿದ್ದಾರೆ. ಇದನ್ನು ನೋಡಿದಾಗ "ಶ್ರೀ ವಾಣಿವಿಲಾಸ ಸಂಗೀತ ನಾಟಕ ಮಂಡಳಿ ಗದಗ" ಈ ಕಂಪನಿಯಲ್ಲಿಯೇ ಅಮೀರಜಾನ್ ಕರ್ನಾಟಕಿಯ ಬಣ್ಣದ ಬದುಕು ಪ್ರಾರಂಭವಾಯ್ತೆಂದು ಹೇಳಬಹುದು.

'ಕಿತ್ತೂರು ರುದ್ರಮ್ಮ' ನಾಟಕದಲ್ಲಿ ರುದ್ರಮ್ಮಳ ಪಾತ್ರ ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿತ್ತು. ಸಂಗೀತಗಾರ, ನಾಟಕಕಾರ ಬಾಲಗಂಧರ್ವರು (ನಾರಾಯಣರಾವ ರಾಜಹಂಸ) ಇವಳ ಕಂಠಮಾಧುರ್ಯಕ್ಕೆ ಮನಸೋತು ತಮ್ಮ ನಾಟಕದಲ್ಲಿ ಪಾತ್ರ ಮಾಡಲು ಅವಕಾಶ ಕೊಡುತ್ತಾರೆ.

ಕಲೆಗೆ ಎಲ್ಲಾ ಸಂಪ್ರದಾಯಗಳ ಕೊಂಡಿಯನ್ನು ಕಿತ್ತೊಗೆದು ಬದುಕುವ ಹಕ್ಕಿದೆ ಎಂಬುದನ್ನು ಈ ಮುಸ್ಲಿಂ ಮಹಿಳೆಯರು ತಮ್ಮ ಅದ್ಭುತ ನಟನೆಯಿಂದ ಮೋಹಕ ಕಂಠಶ್ರೀಯಿಂದ ಸಾಧಿಸಿ ತೋರಿಸಿದ್ದಾರೆ.

**ಆಶಾರಾಣಿ ಬಿಜಾಪೂರ :**

ಕಲೆ ಯಾವದೇ ಜಾತಿ, ವಯಸ್ಸು, ಲಿಂಗ ತಾರತಮ್ಯದ ಶೃಂಖಲೆಗೆ ಒಳಗಾಗಿಲ್ಲ. ಎಲ್ಲವನ್ನು ಮೆಟ್ಟಿ ನಿಲ್ಲುವ ಶಕ್ತಿ ಈ ಕಲೆಗೆ ಒಲಿದಿದೆ. ಹಾಗಾಗಿ ಮಕ್ಕಳು ಮುದುಕರು, ಹೆಣ್ಣು, ಗಂಡು ಎಲ್ಲರಿಗೂ ತನ್ನ ಮಡಿಲಲ್ಲಿ ಆಸರೆ ಕೊಟ್ಟಿದೆ.

ಬಾಬಣ್ಣ ಹಾವೇರಿ ಹಾಗೂ ಬಿಸಮಿಲ್ಲಾ ದಂಪತಿಗಳ ಐದು ಜನ ಹೆಣ್ಣು ಮಕ್ಕಳಲ್ಲಿ ಈ ಆಶಾರಾಣಿ ಹಿರಿಯವಳು, ಒಬ್ಬ ಸಹೋದರ, ತಂದೆ ಬಾಬಣ್ಣ ಹಾವೇರಿ ಕಂಪನಿಯ ಒಡೆಯರಾಗಿದ್ದರೂ ಸಹ ತಮ್ಮ ಮಕ್ಕಳು ಯಾರೂ ಈ ರಂಗಭೂಮಿಗೆ ಬರಬಾರದೆನ್ನುವ ಬಯಕೆ ಅವರದಾಗಿತ್ತು.

ಹತ್ತಾರು ಜನರನ್ನು ಸಾಕಿ ಸಲಹುವ ಒಬ್ಬ ಕಂಪನಿಯ ಮಾಲೀಕನು ಅವರ ಬದುಕನ್ನು ಹತ್ತಿರದಿಂದ ಬಲ್ಲವನಾಗಿರುತ್ತಾನೆ. ಯಾವ ತಂದೆತಾನೆ "ರಾತ್ರಿ ಕಂಡ ಬಾವಿಯಲ್ಲಿ ಹಗಲು ನೂಕಲು" ಮನಸ್ಸು ಮಾಡುತ್ತಾನೆ. ತನ್ನ ಎಲ್ಲ ಮಕ್ಕಳ ಬದುಕು ಹಸನಾಗಬೇಕು, ಉಳಿದವರಂತೆ ಆಗಬಾರದು ಎಂಬ ಹಿರಿದಾಸೆ ಬಾಬಣ್ಣ ಹಾವೇರಿ ಅವರದಾಗಿತ್ತು.

5ನೇ ಇಯತ್ತೆವರೆಗೆ ಕಲಿತ ಆಶಾರಾಣಿ ತಂದೆಯಿಂದಲೇ ಅಭಿನಯ, ಸಂಗೀತ, ಮೈಗೂಡಿಸಿಕೊಂಡಿದ್ದಳು. ಆಶಾರಾಣಿ ಅನಿವಾರ್ಯವಾಗಿ ಅಲ್ಲ ಆಸಕ್ತಿಯಿಂದಲೇ ಈ ಬಣ್ಣದ ಬದುಕಿಗೆ ಸಜ್ಜಾಗಿ ನಿಂತಳು.

ತನ್ನ 14ನೇ ವಯಸ್ಸಿಗೆ ರಂಗಭೂಮಿ ಪ್ರವೇಶಿಸಿದ ಆಶಾರಾಣಿ ಓಬಳೇಶ್ವರ ಕಂಪನಿಯಲ್ಲಿ ರೇಣುಕಾ ಎಲ್ಲಮ್ಮ ನಾಟಕದಲ್ಲಿ ಬಾಲ ಪರಶುರಾಮನ ಪಾತ್ರವನ್ನು ಬಾಬಣ್ಣನವರಿಗೆ ಗೊತ್ತಿಲ್ಲದಂತೆ ಮಾಡಿದ್ದಳಂತೆ. ತಂದೆಯ ಪ್ರೋತ್ಸಾಹ ಸಿಗದಿದ್ದರೂ ಮನೆಯಲ್ಲಿ ಸೋದರತ್ತೆ, ಚಿಕ್ಕಮ್ಮನವರ ಪ್ರೋತ್ಸಾಹ ಆಶಾರಾಣಿಗೆ ಆಸರೆಯಾಯಿತು. ಮುಂದೆ ಎನ್. ಬಸವರಾಜ ಅವರ ಗುಡಗೇರಿ ಕಂಪನಿಗೆ ಬಂದದ್ದು, 'ಗೌಡ್ರಗಂಗಿ' ನಾಟಕದಲ್ಲಿ ಬಾಲಕಲಾವಿದೆ ಲಕ್ಷ್ಮಿಯ ಪಾತ್ರ, ಕಲಾವಿದರ ಬದುಕು ಅಲೆಮಾರಿ ಬದುಕು. ಓತಿಕಾಟದಂತೆ ಬೇಲಿಯಿಂದ ಬೇಲಿಗೆ ಜಿಗಿಯುವುದು, ಹಾಗೇನೆ ಒಂದು ಕಂಪನಿಯಿಂದ ಇನ್ನೊಂದು ಕಂಪನಿಗೆ ಹೋಗುವುದು ಅನಿವಾರ್ಯ. ಪಿ.ಬಿ. ರೈ. ಕಂಪನಿ (ಚಿಕ್ಕಮಂಗಳೂರು) ತದ ನಂತರ ಅಪ್ಪುರಾಯರ 'ಸಂಗಮೇಶ್ವರ ನಾಟ್ಯ ಸಂಘ' ದೊಡ್ಡವಾಡ ಹೀಗೆ ಇವಳು ನಟಿಸಿದ ಮಂಡಳಿಗಳ ಪಟ್ಟಿ ಬೆಳೆಯುತ್ತಾ ಹೋಯಿತು.

'ಶ್ರೀ ಗುರು ಕುಮಾರೇಶ್ವರ ನಾಟ್ಯಸಂಘ ಹಾನಗಲ್' ಶೇಖ ಮಾಸ್ತರ ಕಂಪನಿ. ಇದೊಂದು ನಮಗೆ ಮನೆ ಕಂಪನಿ ಇದ್ದಹಾಗೆ ಎನ್ನುತ್ತಾರೆ ಆಶಾರಾಣಿ. ನನ್ನ ಗಂಡನ ಹೆಂಡತಿ, ಎಚ್ಚರ ತಂಗಿ ಎಚ್ಚರ, ವಿಧಿಯ ಕೈವಾಡ, ರೈತನ ಮಕ್ಕಳು ಹಲವಾರು ನಾಟಕಗಳಲ್ಲಿ ವಿಲನ್ ಹಿರೋಯಿನ್, ಕಾಮಿಡಿ ಎಲ್ಲಾ ಪಾತ್ರಗಳಲ್ಲೂ ಸೈ ಎನಿಸಿಕೊಂಡ ಈ ಕಲಾವಿದೆ ಯಾವದೇ ಒಂದು ಪಾತ್ರಕ್ಕೆ ಬ್ರ್ಯಾಂಡ್ ಆಗಿಲ್ಲ. ಎಚ್ಚರ ತಂಗಿ ಎಚ್ಚರ ನಾಟಕದ ಗೋಧಾವರಿ ಪಾತ್ರ ಹೆಚ್ಚು ಹೆಸರು ಗಳಿಸಿತು.

ಕೆ. ಬಿ. ಆರ್. ಡ್ರಾಮಾ ಕಂಪನಿಯಲ್ಲಿ 4 ವರ್ಷ ನಟಿಸಿದ ಆಶಾರಾಣಿ "ಉಕ್ಕಡಗಾತಿ ಕರಿಬಸವೇಶ್ವರ ಮಹಾತ್ಮೆ" 'ಹೆಣ್ಣಿಗೆ ಹಟ ಗಂಡಿಗೆ ಚಟ', 'ಗೋಮುಖ ವ್ಯಾಘ್ರ', 'ಎಂದಿಲ್ಲದ ಗಂಡ

ಇಂದ್ಯಾಕ ಬಂದ' ಹೀಗೆ ಹಲವು ನಾಟಕಗಳ್ಲಿ ನಟಿಸಿ ಎಲ್ಲರ ಮನಗೆದ್ದ ಹುಡುಗಿ "ವಿಶ್ವಾರಾಧ್ಯ ನಾಟ್ಯ ಸಂಘ ಜೇವರಗಿ" ಕಂಪನಿಯಲ್ಲಿ "ಗತ್ತರಗಿ ಭಾಗ್ಯವಂತಿ", "ಬಾಗಮ್ಮದೇವಿ ಮಹಾತ್ಮೆ" ನಾಟಕದಲ್ಲಿ ಕಿವುಡಿ ಹಾಗೂ ಹಾಸ್ಯಪಾತ್ರ ಇವಳಿಗೆ ಹೆಚ್ಚು ಖುಷಿ ತಂದು ಕೊಟ್ಟವೆ.

ಇತ್ತಿತ್ತಲಾಗಿ ಹೆಚ್ಚು 'ಎಚ್ಚರ ತಂಗಿ ಎಚ್ಚರ' ನಾಟಕದ ಗೋದಾವರಿ ಪಾತ್ರಕ್ಕೆ ಬ್ರ್ಯಾಂಡ ಆಗಿದ್ದಾರೆ. ಖಾಸ್ಗತೇಶ್ವರ ನಾಟ್ಯ ಸಂಘ ತಾಳೀಕೋಟಿ ಕಂಪನಿಯಲ್ಲಿ ಕಲಿಯುಗದ ಕುಡುಕ, ಮಾನವಂತರ ಮನೆತನ, ನೀನು ಸಾಹುಕಾರನಾಗು, ಬಸ್ ಹಮಾಲ ನಾಟಕಗಳಲ್ಲಿ ಪ್ರಬುದ್ಧ ಅಭಿನಯ ನೀಡಿದ ಈ ಆಶಾ ಸದ್ಯಕ್ಕೆ ಅಮೇಚೂರಿನಲ್ಲಿ ಬಹಳ ಬೇಡಿಕೆಯಲ್ಲಿರುವ ಕಲಾವಿದೆ.

34ರ ಹರೆಯದ ಈ ಆಶಾ ರಂಗಭೂಮಿಯಿಂದ ಸಿನೇಮಾ ಜಗತ್ತಿಗೂ ಕಾಲಿಟ್ಟಿದ್ದಾರೆ. "ಗುಡ್ಡಾಪೂರ ದಾನಮ್ಮ" ದಲ್ಲಿ ಲಕ್ಷ್ಮೀಯ ಪಾತ್ರ ಅಂದರೆ ಪ್ರಮೀಳಾ ಜೋಷಾಯ ಅವರ ತಂಗಿಯ ಪಾತ್ರ ಇವರ ನಟನೆಗೆ ಮತ್ತೊಂದು ಗರಿ ಮೂಡಿಸಿದೆ.

ಕಿರಿಯ ವಯಸ್ಸಿನಲ್ಲಿಯೇ ಹಿರಿಯ ಸಾಧನೆ ಇವಳದು. 'ಮೊಂಡ ಮೌಲಾ' ಹಾಗೂ ಇನ್ನುಳಿದ ವಿಡಯೋ ಕ್ಯಾಸೆಟ್‌ಗಳು ಇವಳಿಗೆ ಒಳ್ಳೆಯ ಹೆಸರನ್ನು, ದುಡ್ಡನ್ನು ತಂದುಕೊಟ್ಟವೆ. ಇವರ ದುಡಿಮೆಯಿಂದಲೇ 4 ಜನ ತಂಗಿಯರ ಮದುವೆ ಮಾಡಿಸಿದರು. ಅವರು ಸುಖದಿಂದ ಇದ್ದಾರೆ. ಅವರ್‍ಯಾರೂ ಈ ವೃತ್ತಿಗೆ ಬರಲಿಲ್ಲ.

ಆಶಾರಾಣಿಗೆ ಇಬ್ಬರು ಗಂಡುಮಕ್ಕಳು, ಒಬ್ಬಳು ಮಗಳು, ಮಗಳಿಗೆ ಮದುವೆಮಾಡಿಕೊಟ್ಟಿದ್ದಾರೆ. ಗಂಡು ಮಕ್ಕಳು ಒಬ್ಬ ಡಿಪ್ಲೋಮಾ, ಇನ್ನೊಬ್ಬ 9ನೇ ತರಗತಿಯಲ್ಲಿ ಕಲಿಯುತ್ತಿದ್ದಾನೆ. "ಇನ್ನೇನು ಬೇಕು ರಂಗಭೂಮಿ ನನಗೆ ತುಂಬಾ ತೃಪ್ತಿಯನ್ನು ಕೊಟ್ಟಿದೆ. ನನಗೆ ನನ್ನ ಮಕ್ಕಳಿಗೆ ನನ್ನ ತಂಗಿಯರಿಗೆ ಇದು ಒಳ್ಳೆಯದನ್ನೇ ಮಾಡಿದೆ," ಎನ್ನುತ್ತಾರೆ.

ನನ್ನ ಅಳಿಯ, ನನ್ನ ಮಕ್ಕಳು, ನನ್ನ ಪತಿ ಬಸವರಾಜ (ರಂಗಭೂಮಿ ನಟ) ಎಲ್ಲರ ಪ್ರೋತ್ಸಾಹ ನನಗೆ ಸಿಕ್ಕಿದೆ ಎಂದು ಸಂತೋಷದಿಂದ ಹೇಳುವ ಆಶಾರಾಣಿ ಆಶಾವಾದಿಯಾಗಿದ್ದಾರೆ.

ಮೂಲತಃ ಸುಧೀರ ಅವರ "ಕರ್ನಾಟಕ ಕಲಾ ವೈಭವ ಸಂಘ ಬೆಂಗಳೂರು" ಈ ಕಂಪನಿಯಲ್ಲಿ ಭೂಮಿ ತೂಕದ ಹೆಣ್ಣು, ಚನ್ನಪ್ಪ ಚನ್ನಗೌಡ, ಮಗಳಾಗಿ ಬಂದಳು ಸೊಸೆಯಾಗಿ ನಿಂತಳು, ಕೈಲಾಗದ ಗಂಡ ಕೈಲಾಸ ಕಂಡ ನಾಟಕಗಳಲ್ಲಿ ನಟಿಸಿದ ಆಶಾ "ಘನಮಠೇಶ್ವರ ನಾಟ್ಯಸಂಘ ಕುಂಟೋಜಿ" ಕಂಪನಿಯಲ್ಲಿ ಕಳ್ಳಗುರು ಸುಳ್ಳ ಶಿಷ್ಯ, ರತ್ನ ಮಾಂಗಲ್ಯ, ಕಿವುಡ ಮಾಡಿದ ಕಿತಾಪತಿ, ಮೀ॥ ಗಂಡುರಾವ, ಬಸ್ ಹಮಾಲ, ಹಸಿರು ಬಳೆ, ಗೌಡ್ರಗದ್ಲ, ಹೀಗೆ ಹಲವಾರು ನಾಟಕಗಳಲ್ಲಿ ನಟಿಸಿ ತಮ್ಮ ನಟನೆಯ ಮೂಲಕ ಜನರ ಮನದಲ್ಲಿ ಹಸಿರಾಗಿ ಉಳಿದಿದ್ದಾರೆ. "ಸಮಾಜ ನನಗೆ ಗೌರವ, ಪ್ರೋತ್ಸಾಹ

ಎರಡನ್ನೂ ಕೊಟ್ಟಿದೆ. ಸಮಾಜ ನಮ್ಮನ್ನು ಕೀಳರಿಮೆಯಿಂದ ನೋಡುವುದೇನೋ ನಿಜ. ಆದರೆ ನಾವು ನಡೆದುಕೊಳ್ಳುವ ರೀತಿನೂ ಅದಕ್ಕೆ ಕಾರಣವಾಗುತ್ತದೆ" ಎನ್ನುವ ಪ್ರಬುದ್ಧ ವಿಚಾರದ ಈ ಕಲಾವಿದೆ ಸಮಾಜದ ತಿರಸ್ಕಾರವನ್ನು ಸಂತೋಷದಿಂದಲೇ ಸ್ವೀಕರಿಸಿದವಳು.[7]

**ಜನ್ನತಬಿ ಮುಲ್ಲಾ (ಬಿಜಾಪೂರ) :**

ಇವರ ಹೆಸರೇ ಇವಳೊಬ್ಬ ಇಸ್ಲಾಂ ಧರ್ಮಕ್ಕೆ ಸೇರಿದ ಹೆಣ್ಣುಮಗಳು ಎಂಬುದು ಗೊತ್ತಾಗುತ್ತದೆ. ಮೂಲತಃ ಬಾಗಲಕೋಟಿ ಜಿಲ್ಲೆಯವರಾದ ಜನ್ನತಬಿಗೆ ನಟನೆಯ ಗೀಳು ಅಂಟಿಕೊಂಡಿತ್ತು. ಇವರ ಮನೆಯಲ್ಲಿ ಯಾರೂ ಕಲಾವಿದರಲ್ಲ. ಬಾಗಲಕೋಟೆ ಹೋಳಿ ಹುಣ್ಣಿಮೆಗೆ ಪ್ರಸಿದ್ಧಿಯನ್ನು ಪಡೆದಿದೆ. ಅಲ್ಲಿನ ಕಾಮದಹನ, ರಂಗ ಪಂಚಮಿ, ಐದುದಿನಗಳವರೆಗೆ ಸೋಗುಹಾಕುವುದು, ಇವೆಲ್ಲವುಗಳಿಂದ ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಪಡೆದುಕೊಂಡಿರುವ ಬಾಗಲಕೋಟಿ, ಇಂದಿನ ಈ ವೈಜ್ಞಾನಿಕ ಯುಗದಲ್ಲಿಯೂ ಕೂಡ ತನ್ನ ಸಂಪ್ರದಾಯವನ್ನು ಉಳಿಸಿಕೊಂಡಿದೆ. ಮೊದಲೇ ನಟನೆಯ ಗೀಳನ್ನು ಅಂಟಿಸಿಕೊಂಡಿರುವ ಜನ್ನತಬಿಗೆ. ಹೋಳಿಹುಣ್ಣಿಮೆಯಲ್ಲಿ ಮೊದಲಬಾರಿಗೆ ಅದೂ ಒಬ್ಬ ಮುಸ್ಲಿಂ ಹುಡುಗಿಯಾಗಿ ಸೋಗು ಹಾಕಿಯೇ ಬಿಟ್ಟಳು. ಆ ನಂತರ ಬಾಗಲಕೋಟಿಗೆ ಬಿ. ಆರ್. ಅರಿಶಿನಗೋಡಿಯವರ ಕಂಪನಿ ಬಂದಿತ್ತು. ಅಲ್ಲಿರುವ ಕಲಾವಿದರ ಪರಿಚಯದಿಂದ ಒಂದು ಮೂರ್ತ ರೂಪ ಪಡೆಯಿತು. ಆಕೆಯಲ್ಲಿಯ ಕಲೆ, "ಹುಚ್ಚು ಖೋಡಿ ಮನಸ್ಸು ಅದು ಹದಿನಾರರ ವಯಸ್ಸು" ಎಂಬುದು ಸುಳ್ಳಲ್ಲ. ಮನೆಯಲ್ಲಿ ಹೇಳದೆ ಕೇಳದೆ ಬಿಜಾಪೂರಕ್ಕೆ ಬಂದು, ದುಗಲಗುಂಡಿ ನಾಗಪ್ಪ ಹಾಗೂ ಡಂಬಳ ಸಂಕಣ್ಣನವರ ಕಂಪನಿಗೆ ಬರುತ್ತಾಳೆ. ನಟನೆಯ ಬಗೆಗೆ ವಿಶೇಷ ಆಸಕ್ತಿಯನ್ನು ಹೊಂದಿದ 16ರ ಹರೆಯದ ಜೆನ್ನತಬಿಯ ಆಸೆಗೆ ಡಂಬಳ ಸಂಕಣ್ಣನವರು ನೀರೆರೆಯದಿದ್ದರೆ, ಇವಳು ಇನ್ನೇನಾಗುತ್ತಿದ್ದಳೋ ಯಾರಿಗೆ ಗೊತ್ತು? ಅಂತೂ ಒಂದು ನಾಟಕದಲ್ಲಿ ಅವಳಿಗೆ ಪಾತ್ರ ಸಿಕ್ಕಿತು. ರಂಗತಾಲೀಮು ಬಿಜಾಪೂರದಲ್ಲಿ ಮಾಡಿ ತಾಳೀಕೋಟಿಯಲ್ಲಿ ಆ ನಾಟಕವನ್ನು ಮಾಡಿದರು.

ಮನೆಯವರು ಹುಡುಕುತ್ತ ಬಂದರು. ಅಣ್ಣ ಕೆನ್ನೆಗೆ ಬಾರಿಸಿದ, ಆಯಿ ಜೈರಾಬಿ ಮಗನಿಗೆ ಸಮಾದಾನ ಹೇಳಿದಳು. ಹೋಗಲಿ ಬಿಡು ಕಲೆ ಎಲ್ಲರಿಗೂ ಒಲಿಯುವುದಿಲ್ಲವೆಂದರು. ಅದೇ ಕಂಪನಿಯಲ್ಲಿ ವೆಂಕಟೇಶ ಹೆಗ್ಡೆ ಅವರನ್ನು ಮದುವೆಯಾದರು. ಡಂಬಳ ಸಂಕಣ್ಣನವರೇ ನನ್ನ ಗುರು ನನ್ನ ತಂದೆ ಎಂದು ಮುಕ್ತ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾರೆ ಜನ್ನತಬಿ. ಕಲೆ ಎಲ್ಲರನ್ನು ಕೈಬೀಸಿ ಕರೆಯುತ್ತದೆ. ಆದರೆ ಕೆಲವರನ್ನು ಆರಿಸಿಕೊಳ್ಳುತ್ತದೆ.

---

[7] 12-7-2009 ರಂದು ಬಿಜಾಪೂರದ ಯೋಗಾಪೂರದಲ್ಲಿ ಭೇಟಿಯಾದದ್ದು.

ಏಣಗಿ ಬಾಳಪ್ಪನವರ 'ಕಲಾ ವೈಭವ ನಾಟ್ಯ ಸಂಘ'ದಲ್ಲಿ ದೇವರ ಮಗು, ನಂದಗೋಕುಲ, ಜಯಪದ್ಮಾವತಿ, ಚಿಕ್ಕ ಸೊಸೆ, ಮಾವ ಬಂದ್ನಪ್ಪೊ ಮಾವ, ಕಿತ್ತೂರ ಚನ್ನಮ್ಮ, ಜಗಜ್ಯೋತಿ ಬಸವೇಶ್ವರ ಹೀಗೆ ಹಲವಾರು ನಾಟಕಗಳಲ್ಲಿ ಹಾಸ್ಯ, ವಿಲನ್ ಪಾತ್ರಗಳಲ್ಲಿ ನಟಿಸಿ 8 ವರ್ಷದ ಅನುಭವದ ನಂತರ ಕಡಪಟ್ಟಿ ಪ್ರಕಾಶ ಅವರ ಕಂಪನಿಯಲ್ಲಿ ಮುತ್ತೈದೆಗೆ ಕುತ್ತಾರು, ಭೂಮಿತೂಕದ ಹೆಣ್ಣು, ಭಲೆಮಗಳು (ಗಂಗಿಪಾತ್ರ) ಚಿನ್ನದ ಗೊಂಬೆ (ಶಿವಲೀಲಾನ ಪಾತ್ರ) ಬದುಕು ಬಂಗಾರವಾಯ್ತು. (ಮಾದೇವಿ ಪಾತ್ರ)ದಲ್ಲಿ ಒಂದೇ ಸೀನಿನಲ್ಲಿ 50 ಡೈಲಾಗನ್ನು ಹೇಳುವ ವೈಖರಿಯನ್ನು ನೋಡಿ ಮುಂದೆ ಕುಳಿತವರು ತಲೆ ಅಲ್ಲಾಡಿಸಲೇ ಬೇಕು. 5 ವರ್ಷದ ವರೆಗೆ ಈ ಕಂಪನಿಯಲ್ಲಿದ್ದರು. ಇದೇ ಕಂಪನಿಯಲ್ಲಿ 'ಚನ್ನಪ್ಪ ಚನ್ನಗೌಡ' ನಾಟಕದಲ್ಲಿ 'ಎಲ್ಲಿ' ಪಾತ್ರ 690 ಪ್ರಯೋಗಗಳಾದವು. ಮೊದಲನೇಯ ಅರ್ಧನಾಟಕ ಪ್ರಕಾಶ ಕಡಪಟ್ಟಿಯವರ ಮೇಲೆ ನಿಂತರೆ ಉಳಿದರ್ಧ ನಾಟಕ ಜನ್ನತಬಿ ಅವರಿಂದ ನಡಿತಾ ಇತ್ತು.

ಶ್ರೀ ಸಂಗಮೇಶ್ವರ ನಾಟ್ಯ ಸಂಘ ಆಶಾಪೂರ ಕಂಪನಿಯಲ್ಲಿ ಐದು ವರ್ಷ ಬಣ್ಣ ಹಚ್ಚಿದ ಜನ್ನತಬಿ 'ಎಚ್ಚರ ತಂಗಿ ಎಚ್ಚರ' ನಾಟಕದಲ್ಲಿ 'ಚಂಚಲಳ' ಪಾತ್ರ ಒಳ್ಳೆಯ ಹೆಸರನ್ನು ತಂದುಕೊಟ್ಟಿತು. ಅಷ್ಟೇ ಅಲ್ಲ ಬಿಜಾಪೂರದಲ್ಲಿ ಒಂದು ವರ್ಷ ಇದೇ ನಾಟಕ ಅದ್ದುರಿಯಾಗಿ ಮುಂದುವರೆಯಿತು. ಚಂಚಲಳ ಹಾಸ್ಯ ಪಾತ್ರ ಪ್ರೇಕ್ಷಕರ ಹೃದಯಕ್ಕೆ ಲಗ್ಗೆ ಹಾಕಿತ್ತು.

ಚಂದೋಡಿ ಶ್ರೀ ಕಂಠೇಶರ ಕೆ. ಬಿ. ಆರ್. ಕಂಪನಿಯಲ್ಲಿ 4 ವರ್ಷ ನಟಿಸಿದ ಜನ್ನತಬಿ ಉಕ್ಕಡಗಾತಿ ಕರಿಬಸವೇಶ್ವರ ಮಹಾತ್ಮೆ 'ಹೆಣ್ಣಿಗೆ ಹಟ ಗಂಡಿಗೆ ಚಟ' ಹಲವಾರು ನಾಟಕಗಳಲ್ಲಿ ನಟಿಸಿ ತನ್ನ ನಟನೆಯ ಮೂಲಕ ಪ್ರೇಕ್ಷಕರ ಹೃನ್ಮನಗಳಲ್ಲಿ ಹಸಿರಾಗಿ ಉಳಿದರು.

ಮೈಂದಿರಗಿ ಕಂಪನಿ ಮುಚ್ಚುವ ಹಂತದಲ್ಲಿ ಬಂದಾಗ ತಮ್ಮ ಪಾತ್ರ ಪ್ರಭಾವದಿಂದ ಮತ್ತೆ ಎದ್ದು ನಿಲ್ಲುವಹಾಗೆ ಮಾಡಿದರು. ನವರಸಗಳಲ್ಲಿ ಹಾಸ್ಯಕ್ಕೆ ಇರುವ ಪ್ರಾಧಾನ್ಯತೆ ಇನ್ಯಾವುದಕ್ಕೆ ಇದೆ, ಜನ್ನತಬಿ ತಮ್ಮ ಹಾಸ್ಯಪಾತ್ರದ ಮೂಲಕ ಯಾವ ಕಂಪನಿಗೆ ಹೋದರೂ ಇವರು ಆ ಕಂಪನಿಗೆ ಆಸ್ತಿನೆ.

ಇವರಲ್ಲಿರುವ ಹಾಸ್ಯ ಪ್ರವೃತ್ತಿನೆ ಇವರನ್ನು ಇನ್ನೂ ಚಿರಯೌವ್ವನೆಯನ್ನಾಗಿ ಮಾಡಿರಬಹುದು. ಇವರನ್ನು ನೋಡಿದರೆ 60ರ ಅಂಚಿನಲ್ಲಿರುವಂತೆ ತೋರುವುದಿಲ್ಲ. ಹಾಸ್ಯ ನಿಜವಾಗಿಯೂ ಒಂದು ಟಾನಿಕ್ ಎಂಬುದು ಅವರನ್ನು ನೋಡಿದಾಗ ಅನ್ನಿಸದೇ ಇರದು.

ಒಬ್ಬ ಹಿರಿಯ ಕಲಾವಿದೆಯಾಗಿ ಕಿಂಚಿತ್ತು ಆಕೆಯಲ್ಲಿ ಗರ್ವವಿಲ್ಲ. ಸರಳ ಸ್ವಭಾವದ ಜನ್ನತಬಿಗೆ ರಂಗಭೂಮಿಯ ಬಗ್ಗೆ ಕಳಕಳಿ ಇದೆ ಎಂಬುದು ಗೊತ್ತಾಯಿತು. ಯಾಕೆ ಇವತ್ತು ರಂಗಭೂಮಿ

ಅವಸಾನದ ಹಾದಿ ಹಿಡಿದಿದೆ ಎನ್ನುವುದಕ್ಕೆ ಅವರು ಪ್ರತಿಕ್ರಿಯಿಸಿದ್ದು ಹೀಗೆ. ಈಗ ಮಾಲೀಕರಿಗೂ ಕಲಾವಿದರ ಬಗ್ಗೆ ಗೌರವವಿಲ್ಲ, ಕಲಾವಿದರಿಗೂ ಮಾಲೀಕರ ಬಗ್ಗೆ ಗೌರವವಿಲ್ಲ ಎನ್ನುತ್ತಾರೆ ಜನ್ನತಬಿ.[8]

**ಹಫೀಜಾ ಬೇಗಂ ಮುರ್ತುಸಾಬ :**

ಮೂಲತಃ ಇಲಕಲ್ಲಿನ ಕಲಾವಿದ ಖಾಜಾಸಾಬ ಜಂಬಗಿಯವರ ಕೈ ಹಿಡಿದ ಹಫೀಜಾ ಕಲಿತದ್ದು 9ನೇ ತರಗತಿಯವರೆಗೆ ಎಲ್ಲರೂ ವೃತ್ತಿರಂಗಭೂಮಿಯಿಂದ ಹವ್ಯಾಸಿರಂಗಭೂಮಿಗೆ ಮುಖಮಾಡಿದರೆ ಇವಳದು ಮಾತ್ರ ತದ್ವಿರುದ್ಧ ಹವ್ಯಾಸಿ ರಂಗಭೂಮಿಯಿಂದ ವೃತ್ತಿರಂಗದತ್ತ ಒಲವು ಬೆಳೆಯಿಸಿಕೊಂಡಳು. ಇದಕ್ಕೆ ಕಾರಣ ಕಲಾವಿದ ಖಾಜಾಸಾಬರೂ ಆಗಿರಬಹುದು.

ನಾವು ಈಗಾಗಲೇ ಅದೆಷ್ಟೋ ಮುಸ್ಲಿಂ ನಟಿಯರ ಪರಿಚಯ ಮಾಡಿಕೊಂಡಿದ್ದೇವೆ. ಅಲ್ಲೆಲ್ಲಾ ಹಿಂದೂ–ಮುಸ್ಲಿಂ ಸಂಯೋಗದ ಹೆಸರುಗಳೇ ಕಂಡುಬರುತ್ತವೆ. ಆದರೆ ಇವಳ ಹಸರಿನಲ್ಲಿ ಮಾತ್ರ ಅಪ್ಪಟ ಇಸ್ಲಾಂದರ್ಮದ ವಾಸನೆ ಕಂಡುಬರುತ್ತದೆ.

ಚತ್ತರಗಿಯ ಶ್ರೀ ಪಂಚಾಕ್ಷರಿ ವಿಜಯ ನಾಟ್ಯ ಸಂಘ ಹಾನಗಲ್ಲಿನ ಕುಮಾರೇಶ್ವರ ನಾಟ್ಯಸಂಘ, ಸಂಗಮೇಶ್ವರ ನಾಟ್ಯಸಂಘ, ಕೆ.ಬಿ.ಆರ್. ಡ್ರಾಮಾ ಹೀಗೆ ಹತ್ತು ಹಲವು ಕಂಪನಿಗಳಲ್ಲಿ ತಾಳಿಯ ತಕರಾರು, ಕೈಲಾಗದ ಗಂಡ ಕೈಲಾಸ ಕಂಡ, ಹೇಮರೆಡ್ಡಿ ಮಲ್ಲಮ್ಮ, ಜಗಜ್ಯೋತಿ ಬಸವೇಶ್ವರ ಹೀಗೆ ಹಲವು ನಾಟಕಗಳಲ್ಲಿ ತನ್ನ ಶ್ರೇಷ್ಠ ಅಭಿನಯದಿಂದ ಜನರ ಮೆಚ್ಚುಗೆಯನ್ನು ಗಳಿಸಿದ ಹಫೀಜಾ ಸದ್ಯ ಹವ್ಯಾಸಿ ರಂಗಭೂಮಿಯತ್ತ ಮುಖಮಾಡಿದ್ದಾಳೆ.[9]

---

[8] 12–7–2009 ರಂದು ಬಿಜಾಪೂರದಲ್ಲಿ ಸಂದರ್ಶನ ಮಾಡಿದ್ದು.

[9] ದಿನಾಂಕ : 18–5–2009 ರಂದು ಇಳಕಲ್ಲಿನಲ್ಲಿ ಸಂದರ್ಶಿಸಿದ್ದು.

## 3. ಕಂಪನಿಯ ಒಡತಿಯರಾಗಿ

ಪುರುಷ ಪ್ರಧಾನವಾದ ಸಮಾಜದಲ್ಲಿ ಹೆಣ್ಣು ಎಷ್ಟೇ ಬುದ್ಧಿವಂತಳಾಗಿದ್ದರೂ ಜಾಣೆಯಾಗಿದ್ದರೂ, "ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ" ಎಂಬ ಸೊಲ್ಲು ಇನ್ನೂ ಅಡಗಿಲ್ಲ. ಇಂದಿನ ಹೈಟೆಕ್ ಯುಗದಲ್ಲಿಯೂ ಕೂಡ ಅಡುಗೆಮನೆಯಿಂದ ಆಗಸದವರೆಗೂ, ಮಹಿಳೆಯರಿಲ್ಲದ ಕ್ಷೇತ್ರಗಳೇ ಇಲ್ಲ. ಎಲ್ಲದರಲ್ಲಿಯೂ ಆಕೆ ಒಂದು ಹೆಜ್ಜೆ ಮುಂದಿದ್ದಾಳೆ.

ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ಎಲ್ಲಾ ಕ್ಷೇತ್ರದಲ್ಲಿ ಮಿಂಚಿದ ಮಹಿಳೆ ಸಾಂಸ್ಕೃತಿಕ ಚಟುವಟಿಕೆಯಲ್ಲಿಯೂ ಕೂಡಾ ಅವಳೇನು ಹಿಂದೆ ಬಿದ್ದಿಲ್ಲ. ಒಬ್ಬ ಗೃಹಿಣಿಯಾಗಿ ಮನೆಯ ಜವಾಬ್ದಾರಿಯನ್ನು ನೀಗಿಸಿಕೊಂಡು ಹೋಗುವುದು ದೊಡ್ಡಮಾತಲ್ಲ. ಅಥವಾ ಯಾವುದೇ ಒಂದು ಕಂಪನಿಯ, ಕಛೇರಿಯ ಬಾಸ್ ಆಗಿ ದಕ್ಷ ಅಧಿಕಾರಿಎನಿಸಿಕೊಂಡರೆ ಅತಿಶಯೋಕ್ತಿಯೆನಿಸಲಿಕ್ಕಿಲ್ಲ.

ಆದರೆ ಒಬ್ಬ ಮಹಿಳೆ ರಂಗಭೂಮಿಯ ನಟಿಯಾಗಿದ್ದುಕೊಂಡು, ಜೊತೆಗೆ ಒಂದು ಕಂಪನಿಯ ಮಾಲೀಕತ್ವದ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು ಎಂದರೆ ಉತ್ಪ್ರೇಕ್ಷೆ ಎನಿಸದೆ ಇರದು. ಯಾಕೆಂದರೆ, ಯಾವುದೇ ಒಂದು ಆಫೀಸಿನಲ್ಲಿ, ಕಛೇರಿಯಲ್ಲಿ ಅಥವಾ ಪ್ರೈವೇಟ್ ಕಂಪನಿಯಲ್ಲಿ ಒಬ್ಬ ನೌಕರ ಬರದೇ ಹೋದರೆ ಮತ್ತೊಬ್ಬ ನೌಕರನನ್ನು ಹುಡುಕಿಕೊಂಡು ಬರುವ ಅವಶ್ಯಕತೆಯೂ ಇರುವುದಿಲ್ಲ. ಕಂಪನಿ ಮುಚ್ಚುವ ಅನಿವಾರ್ಯತೆಯೂ ಅವರಿಗೆ ಒದಗುವದಿಲ್ಲ. ಬಹಳಾದರೆ, ಆವತ್ತಿನ ಆ ಟೇಬಲ್ಲಿನ ಫೈಲ್ ಮೂವ್ ಆಗುವುದಿಲ್ಲ ಅಷ್ಟೆ.

ಆದರೆ ವೃತ್ತಿರಂಗಭೂಮಿಯಲ್ಲಿ ಒಂದು ಕಂಪನಿ ನಡೆಯಿಸಿಕೊಂಡು ಹೋಗುವುದು ಅಷ್ಟು ಸರಳವಾದ ಕೆಲಸವಲ್ಲ. ಯಾವನಾದರೊಬ್ಬ ನಟ, ನಟಿ ಕೈ ಕೊಟ್ಟರೆ, ಮತ್ತೊಬ್ಬರನ್ನು ಹುಡುಕಿಕೊಂಡು ಬರಬೇಕು. ಇಲ್ಲಾಂದ್ರೆ ಆವತ್ತಿನ ನಾಟಕವೇ ಬಂದ್. ನಾಟಕ ಇಲ್ಲಾಂದ್ರೆ ಕಲೆಕ್ಷನ್ ಇಲ್ಲ. ಆ ನಷ್ಟವನ್ನು ತುಂಬುವವರು ಯಾರು? ಅಷ್ಟೇ ಅಲ್ಲ ಮಳೆ ಗಾಳಿ ದಿನದಲ್ಲಿಯೂ ಈ ಹಣಗಲ ಕಂಪನಿ ಮಾಲೀಕರಿಗೆ ತಪ್ಪಿದ್ದಲ್ಲ. ನಾಟಕ ನಡೆಯಲಿ ನಡೆಯದೇ ಇರಲಿ, ಕಲೆಕ್ಷನ್ ಚನ್ನಾಗಿ ಆಗಲಿ, ಆಗದೇ ಇರಲಿ ಅಲ್ಲಿ ದುಡಿಯುವ ಎಲ್ಲರಿಗೂ (ಗೇಟ್ ಕೀಪರ್ ಹಿಡಿದುಕೊಂಡು) ಆವತ್ತಿನ ಸಂಬಳ ಕೊಟ್ಟು ಊಟದ ವ್ಯವಸ್ಥೆ ಮಾಡಲೇ ಬೇಕು. ಅಲ್ಲಿಯೋ ಇಲ್ಲಿಯೋ ಸಾಲ ಸೂಲ ಮಾಡಿ ಹೇಗೋ ಸಾಯುವ ಕಂಪನಿಗೆ ಒಂದಿಷ್ಟು ಜೀವಕೊಡುತ್ತಾರೆ. ಅಂಥದ್ದರಲ್ಲಿ ಸಾಲಗಾರರ ಕಾಟ ತಪ್ಪಿದ್ದಲ್ಲ. ಕಂಪನಿ ಮಾಲೀಕರ ಈ ದಯನೀಯ ಸ್ಥಿತಿಯನ್ನು ಊಹಿಸುವುದೂ ಅಸಾಧ್ಯ

ಈ ಎಲ್ಲಾ ಏರುಪೇರುಗಳ ನಡುವೆಯೂ ಉತ್ತರ ಕರ್ನಾಟಕದ ಅದೆಷ್ಟೋ ಕಲಾವಿದೆಯರು ಕಂಪನಿಯ ಒಡತಿಯರಾಗಿ ಮೆರೆದಿದ್ದಾರೆ. ಇಂದು ಹಲವು ಕಂಪನಿಗಳಲ್ಲಿ ಕೆಲವೇ ಕಂಪನಿಗಳು

ಉಳಿದಿದ್ದರೂ ಆ ಕಂಪನಿಯ ಮಾಲಿಕತ್ವವನ್ನು ಮಹಿಳೆಯರೂ ಮುತುವರ್ಜಿ ವಹಿಸಿ ಮುಂದುವರೆಸಿಕೊಂಡು ಹೋಗುತ್ತಿರುವುದು ಹೆಮ್ಮೆಯ ವಿಷಯ. ಹಾಗಾದರೆ ನಟಿಯಾಗಿ ಒಂದು ಕಂಪನಿಯನ್ನು ಕಟ್ಟಿ ನಮ್ಮ ಸಾಂಸ್ಕೃತಿಕ ಕ್ಷೇತ್ರಕ್ಕೆ ಮರುಜೀವ ತಂದುಕೊಟ್ಟ ಆ ಕಲಾವಿದೆಯರನ್ನು ನಾವು ನೋಡಲೇ ಬೇಕು.

1. ಪಾಪಾಸಾನಿ
2. ಬಚ್ಚಾಸಾನಿ
3. ಗಂಗೂಬಾಯಿ ಗುಳೇದಗುಡ್ಡ
4. ಸೂನುಬಾಯಿ ದೊಡ್ಡಮನಿ
5. ಕುಕನೂರ ರಹೆಮಾನವ್ವ
6. ಸುಮಿತ್ರಮ್ಮ ಕುಂದಾಪೂರ
7. ಚಿಂದೋಡಿ ಲೀಲಾ
8. ನ್ಯಾಮತಿ ಕಮಲವ್ವ
9. ಪ್ರೇಮಾ ಗುಳೇದಗುಡ್ಡ
10. ಮಾಲತಿ ಸುಧೀರ
11. ಸುಮತಿಶ್ರೀ ನವಲಿ ಹಿರೇಮಠ
12. ರೇಣುಕಾ ಅಕ್ಕಲಕೋಟಿ

**1. ಪಾಪಾಸಾನಿ :**

ಹಲವಾರು ವಿದ್ವಾಂಸರ ಅಭಿಪ್ರಾಯದಂತೆ ಹಾಗೂ ಅನೇಕ ಗ್ರಂಥಗಳ ಆಧಾರದ ಮೇಲಿಂದ ಉತ್ತರ ಕನಾಟಕದ ವೃತ್ತಿ ರಂಗಭೂಮಿಯ ಮೊದಲ ನಟಿ ಎಲ್ಲೂಬಾಯಿ ಗುಳೇದಗುಡ್ಡ ಮೊದಲಿಗಳಾದರೆ ಇನ್ನು 1908ರಲ್ಲಿ "ಸ್ತ್ರೀ ಸಂಗೀತ ನಾಟಕ ಮಂಡಳಿ" ಎಂಬ ತಂಡವನ್ನು ಕಟ್ಟಿದವಳು ಲಕ್ಷ್ಮೇಶ್ವರದ ಬಚ್ಚಾಸಾನಿ ಎಂಬುದು ಸರ್ವವಿಧಿತ.

ನಾನೊಂದು ಕನಸಕಂಡೆ (ಮಹಿಳೆ ಮತ್ತು ರಂಗಭೂಮಿ) ಈ ಮಹಿಳಾ ವಿಶೇಷಾಂಕದಲ್ಲಿ ಮರಿಯಮ್ಮನ ಹಳ್ಳಿನಾಗರತ್ನಮ್ಮನವರು "ಅವಳ ಹೆಜ್ಜೆಗುರುತುಗಳು" ಎಂಬ ಲೇಖನದಲ್ಲಿ ಪುಟ 16ರಲ್ಲಿ ಹೀಗೆ ಹೇಳುತ್ತಾರೆ. 1898ರಲ್ಲಿ ಪಾಪಾಸಾನಿ ಎಂಬಾಕೆ ಸ್ತ್ರೀನಾಟಕ ಮಂಡಳಿಯನ್ನು ಸ್ಥಾಪಿಸಿದ್ದಳೆಂದು, ಹಾಗಾಗಿ ಇದೇ ಮೊದಲ ಮಹಿಳಾ ನಾಟಕ ತಂಡ ಎಂದು ಹೇಳುತ್ತ ಹರಿಶ್ಚಂದ್ರ, ಪ್ರಭಾವತಿ ದರ್ಬಾರು.

ಮುಂತಾದ ನಾಟಕಗಳನ್ನು ಈ ತಂಡ ಪ್ರದರ್ಶಿಸಿದ ಬಗ್ಗೆ ಮಾಹಿತಿ ಇದೆ. ಪಾಪಾಸಾನಿಯೇ ಎಲ್ಲದರಲ್ಲೂ ನಾಯಕಿಯ ಪಾತ್ರ ವಹಿಸುತ್ತಿದ್ದಳು. ಆದರೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ ಎಂದು ಲೇಖಕರೇ ಹೇಳುತ್ತಾರೆ.

ಅದೇ ರೀತಿ ವೆಂಕಟಗಿರಿ ದಳವಾಯಿ ಎನ್ನುವವರು ತಮ್ಮ "ರಂಗಭೂಮಿ ಮತ್ತು ಮಹಿಳೆ" ಎಂಬ ಸಂಶೋಧನ ಗ್ರಂಥದಲ್ಲಿ 1898ರಲ್ಲಿ ಸ್ತ್ರೀ ನಾಟಕ ಮಂಡಳಿಯನ್ನು ಸ್ಥಾಪಿಸಿದ ಪಾಪಾಸಾನಿಯನ್ನು ರಂಗಭೂಮಿಯ ಮೊದಲ ನಟಿ ಎನ್ನಬೇಕಾಗುತ್ತದೆ. (ಪುಟ 129) ಎಂದು ಬರೆಯುತ್ತಾರೆ.

ನಾನು ನನ್ನ ಸಂಶೋಧನೆಗೆ ಸಂಬಂಧಪಟ್ಟಂತೆ ದಿನಾಂಕ : 12-2-2010 ರಂದು ಹಿರಿಯ ರಂಗಕರ್ಮಿ ಏಣಗಿಬಾಳಪ್ಪನವರನ್ನು ಭೇಟಿಯಾದಾಗ 1930ರಲ್ಲಿ ನಾನು ಬಚ್ಚಾಸಾನಿಯ ಕಂಪನಿಯಲ್ಲಿದ್ದೆ. ಈ ಕಂಪನಿಗೆ ನನ್ನನ್ನು ಶಿವಲಿಂಗಸ್ವಾಮಿಗಳು ಕಳಿಸಿಕೊಟ್ಟಿದ್ದರು. ಮೊಟ್ಟಮೊದಲು ನಾಟಕ ಕಂಪನಿಯನ್ನು ಕಟ್ಟಿದವಳು ಸು. 1908ರಲ್ಲಿ ಬಚ್ಚಾಸಾನಿಯೇ ಹೊರತು ಪಾಪಾಸಾನಿ ಅಲ್ಲವೆಂಬುದನ್ನು ನೇರವಾಗಿ ಅಲ್ಲಗಳೆದರು. ಹಿರಿಯ ನಟ ಹಲವು ಕಂಪನಿಯ ಮಾಲೀಕರೇ ಜೀವಂತ ಸಾಕ್ಷಿಯಾಗಿರುವಾಗ ಇವರ ಮಾತನ್ನು ಅಲ್ಲಗಳೆಯಲು ಹೇಗೆ ಸಾಧ್ಯ? ಅಲ್ಲದೆ ಎನ್ಕೆ ಅವರೂ ಕೂಡಾ ರಂಗತೋರಣದಲ್ಲಿ ಬಚ್ಚಾಸಾನಿಯ ಕುರಿತು ಹೇಳುತ್ತಾರೆ ವಿನಹಃ ಪಾಪಾಸಾನಿಯ ಪ್ರಸ್ತಾಪ ಬರುವುದೇ ಇಲ್ಲ. ಆಧಾರಗಳಿಲ್ಲದೇ ನಂಬುವುದು ಕಷ್ಟ.

## 2. ಬಚ್ಚಾಸಾನಿ :

1908ರಲ್ಲಿಯೇ "ಸ್ತ್ರೀ ಸಂಗೀತ ನಾಟಕ ಮಂಡಳಿ" ಎಂಬ ಸಂಘವನ್ನು ಕಟ್ಟಿದ ಹೆಗ್ಗಳಿಕೆ ಇವಳದು. ಪ್ರಪ್ರಥಮವಾಗಿ ಸಪ್ತಸ್ವರದಂತೆ ಇರುವ ತನ್ನ 7 ಜನ ಸಹೋದರಿಯರನ್ನು ಕರೆದುಕೊಂಡು ಕುಟುಂಬ ಸಮೇತ "ಸ್ತ್ರೀ ಸಂಗೀತ ನಾಟಕ ಮಂಡಳಿ"ಯನ್ನು ಹುಟ್ಟು ಹಾಕಿದ್ದಳು. ತಿರುಳ್ಗನ್ನಡದ ನಾಡಾದ ಲಕ್ಷ್ಮೇಶ್ವರದಲ್ಲಿ ಬಚ್ಚಾಸಾನಿಯಿಂದಲೇ ಸಂಗೀತ ಬೆಳೆಯಿತು.

ರಂಗಭೂಮಿಯ ಸಾಮ್ರಾಜ್ಞಿಯಾಗಿ ಮೆರೆದ ಬಚ್ಚಾಸಾನಿ, ಪುರುಷನ ಒಡೆತನದಲ್ಲಿದ್ದ ರಂಗಭೂಮಿಯನ್ನು ತನ್ನದನ್ನಾಗಿ ಮಾಡಿಕೊಂಡು, ಪುರುಷರ ಅವಶ್ಯಕತೆಯೇ ಇಲ್ಲದಂತೆ ಗೇಟ್ ಕೀಪರ್ ಹಿಡಿದುಕೊಂಡು ನಟವರ್ಗದವರೆಗೂ ತಾವೇ ಅಕ್ಕತಂಗಿಯರು ಆ ಪಾತ್ರವನ್ನು ನಿಭಾಯಿಸುತ್ತಿದ್ದರು. ಬಚ್ಚಾಸಾನಿ ಹೆಚ್ಚಾಗಿ ಪುರುಷ ಪಾತ್ರಗಳನ್ನು ಮಾಡುತ್ತಿದ್ದಳು. ಸಂಪ್ರದಾಯ ಕಟ್ಟಳೆಗಳ ಬೇಲಿಯನ್ನು ದಾಟಿ, ಪುರುಷರ ನೆರಳಿಲ್ಲದೇ ಒಂದು ಸಂಘವನ್ನು ಕಟ್ಟಿ ಬೆಳೆಸಿದ್ದು ಸ್ತುತ್ಯಾರ್ಹ. ಭಕ್ತ ಮಾರ್ಕಂಡೇಶ್ವರ ನಾಟಕದಲ್ಲಿನ ಮಾರ್ಕಂಡೇಶ್ವರನ ಪಾತ್ರ ಮರೆಯಲು ಸಾಧ್ಯವಿಲ್ಲ. (ಶೈಲಜಾ ಹಿರೇಮಠ

ಪಾತ್ರದವರು ಪುಟ 98-99ರಲ್ಲಿ) ಕಾರಣ ಆ ಪಾತ್ರವನ್ನು ಬಚ್ಚಾಸಾನಿಯೇ ಮಾಡುತ್ತಿದ್ದಳಂತೆ. ಒಬ್ಬ ಮಹಿಳೆಯಾಗಿ ಸುಮಾರು ಹದಿನೇಳು ವರ್ಷದ ವರೆಗೆ ಒಂದು ಕಂಪನಿಯ ಸಾರಥ್ಯವನ್ನು ವಹಿಸಿಕೊಂಡು ಬರುವುದು ಗಂಡೆದೆಯವರಿಗೆ ಮಾತ್ರಸಾಧ್ಯ. ಅನಾರೋಗ್ಯದಿಂದ ಆರ್ಥಿಕ ಮುಗ್ಗಟ್ಟನಿಂದ ಕಂಪನಿ ನಿಂತುಹೋದರೂ ಸಹ ಬಚ್ಚಾಸಾನಿಯ ಹೆಸರು ರಂಗಪ್ರೇಮಿಗಳ ಹೃದಯದಲ್ಲಿ ಹಸಿರಾಗಿ ಉಳಿಯಿತು.

### 3. ಗಂಗೂಬಾಯಿ ಗುಳೇದಗುಡ್ಡ :

ವಾಮನರಾವ ಮಾಸ್ತರರ ವಿಶ್ವಗುಣಾದರ್ಶ ನಾಟಕ ಮಂಡಳಿಯಲ್ಲಿ ನಟಿಯಾಗಿ ನಟಿಸಿದ ಗಂಗೂಬಾಯಿ, ಎಲ್ಲೂಬಾಯಿ ಗುಳೇದಗುಡ್ಡಳ ಸಾಕುಮಗಳು ಯಾರಿಗೆ ಗೊತ್ತು? ಮುಂದೆ ಇವಳೊಬ್ಬ ಕಂಪನಿಯ ಮಾಲೀಕಳಾಗುತ್ತಾಳೆಂದು? ಓದು ಬರಹ ಬಾರದ ಒಂದು ಹುಡುಗಿ 1925ರಲ್ಲಿ "ಶ್ರೀಕೃಷ್ಣ ನಾಟಕ ಮಂಡಳಿ ಗುಳೇದಗುಡ್ಡ" ಎಂಬ ಹೆಸರಿನಿಂದ ಕಂಪನಿ ಪ್ರಾರಂಭಿಸುತ್ತಾಳೆ.

ತಂದೆ ತಾಯಿಯ ಪ್ರೋತ್ಸಾಹ, ಉಡುಪಿಯ ಶ್ರೀಕೃಷ್ಣನಲ್ಲಿಟ್ಟ ಭಕ್ತಿ, ಕೊನೆಗೂ ಕೈಬಿಡಲಿಲ್ಲ. ಗುರುಲಿಂಗಪ್ಪ ಗೋಂಬಿ, ತಾಯಿ ಯಲ್ಲೂಬಾಯಿ, ಪೋಷಕ ಪಾತ್ರಗಳನ್ನು ಮಾಡಿ ಮಗಳ ಕಂಪನಿಗೆ ಜೀವ ತುಂಬಿದರು.

ಕಂಪನಿ ಚೆನ್ನಾಗಿಯೇ ನಡೆದಿತ್ತು. ಇದ್ದಕ್ಕಿದ್ದಂತೆ ನಾಯಕ ನಟ ಗುರುರಾವ ದೇಶಪಾಂಡೆಯವರು ಕಂಪನಿಯನ್ನು ತೊರೆದರು. ಗಂಗೂಬಾಯಿಗೆ ಇದೊಂದು ಹೊಸತರದ ಶಾಖ್, ನಾಯಕನ ಪಾತ್ರಕ್ಕೆ ಅನ್ವೇಷಣೆ ಪ್ರಾರಂಭ. ಇದೇ ಸಂದರ್ಭದಲ್ಲಿ ವಾಮನರಾವ ಮಾಸ್ತರ ಕಂಪನಿಯಲ್ಲಿದ್ದ ಬಸವರಾಜ ಮನಸೂರವರನ್ನು ಕೇಳಿದಾಗ (ನಾಯಕನಟನಾಗುವುದು ಯಾರಿಗೆ ತಾನೆ ಆಶೆ ಇರುವುದಿಲ್ಲ?). ತಕ್ಷಣ ಒಪ್ಪಿಕೊಂಡ ಬಸವರಾಜ ಮನಸೂರರಿಂದ ಮತ್ತೆ ಕಂಪನಿಗೆ ಮರುಜೀವಬಂತು. ಬಸವರಾಜ ಹಾಗೂ ಗಂಗೂಬಾಯಿಯ ಸಂಗೀತಾಭಿನಯಗಳಿಂದ ಹೊಸ ಮೆರಗು ಬಂದಿತ್ತು ಆ ಕಂಪನಿಗೆ. ಗಂಗೂಬಾಯಿಯ ನಟನೆಯ ಜೊತೆಗೆ ಅವಳ ಕಂಠಸಿರಿಯೂ ಅವಳಿಗೆ ಸಾಥ ಕೊಟ್ಟಿತ್ತು.

ಮರಾಠಿಯ ಪ್ರಸಿದ್ಧ ನಾಟಕ 'ಮಾನಾಪಮಾನ' ನಾಟಕವನ್ನು ಮಧ್ವರಾಜ ದೇಶಪಾಂಡೆಯವರು ಕನ್ನಡಕ್ಕೆ ಅನುವಾದಿಸಿ ಆಡಿಸಿದರು. ಗಂಗೂಬಾಯಿ ಹಾಗೂ ಬಸವರಾಜರ ಅಭಿನಯದಿಂದ ನಾಟಕ ಒಳ್ಳೆಯ ಪ್ರದರ್ಶನಗಳನ್ನು ಕಂಡಿತು. ಗಾನಕೋಗಿಲೆ ಗಂಗೂಬಾಯಿ ಹಾಡು. ಪ್ರೇಕ್ಷಕರ ಒನ್ಸಮೋರ. ಗಡಚಿಕ್ಕುವ ಚಪ್ಪಾಳೆ. ಇನ್ನೇನು ಬೇಕು.[10]

---

[10] ರಾಮಕೃಷ್ಣ ಮರಾಠೆ, ಉತ್ತರ ಕರ್ನಾಟಕ ರಂಗಭೂಮಿ ಪುಟ 104

ಸಹಜ ಅಭಿನಯದಿಂದ, ತನ್ನ ಕಂಚಿನ ಕಂಠಸಿರಿಯಿಂದ, ಉತ್ತರ ಕರ್ನಾಟಕವಲ್ಲದೆ ಬೆಂಗಳೂರಿನಿಂದ ಹಳೇ ಮೈಸೂರಿನ ವರೆಗೂ ಕಂಪನಿ ಕ್ಯಾಂಪಮಾಡಿ ಪ್ರಸಿದ್ಧಿಯನ್ನು ಪಡೆಯಿತು. ಶ್ರೀನಿವಾಸರಾವ ಕೌಜಲಗಿಯವರ ಹಿರಿತನದಲ್ಲಿ ಗಂಗೂಬಾಯಿಗೆ ಬಿಜಾಪೂರದಲ್ಲಿ 'ಗಾನರತ್ನ' ಎಂಬ ಬಿರುದು ನೀಡಿ ಸನ್ಮಾನಿಸಿದರು. ಈ ಬಿರುದು ಅವಳಲ್ಲಿಯ ಪ್ರತಿಭೆಗೆ ಗರಿಮೂಡಿಸಿತು. ರಂಗಭೂಮಿಯ ಬಗ್ಗೆ ಅಭಿಮಾನವಿದ್ದ ಕಂದಗಲ್ ಹನುಮಂತರಾಯರನ್ನು ಕರೆಯಿಸಿ (ಬಾಗಲಕೋಟೆಯಲ್ಲಿ ಬ್ಯಾಂಕಿನಲ್ಲಿ ಗುಮಾಸ್ತರಾಗಿದ್ದರು) ಸಂಧ್ಯಾರಾಗ ನಾಟಕದ ತಾಲೀಮು ಪ್ರಾರಂಭಿಸಿದರು. ಮುಂದೆ ಅವರನ್ನೇ ಕಂಪನಿಯ ವ್ಯವಸ್ಥಾಪಕರನ್ನಾಗಿ (ಮ್ಯಾನೇಜರ್) ಮಾಡಿಕೊಂಡ ಗಂಗೂಬಾಯಿಯಲ್ಲಿ ವ್ಯವಹಾರಜ್ಞಾನ ಎಷ್ಟಿತ್ತೆಂಬುದು ಗೊತ್ತಾಗುತ್ತದೆ. ಉತ್ತರೋತ್ತರವಾಗಿ ಕಂಪನಿ ಬೆಳೆಯುತ್ತಲೇ ಹೋಯಿತು. ಹಂದಿಗನೂರ ಸಿದ್ರಾಮಪ್ಪನವರು ಇದೇ ಕಂಪನಿಯಲ್ಲಿ ಬಣ್ಣ ಹಚ್ಚಿ, ರಂಗಭೂಮಿಯ ಒಬ್ಬ ಅದ್ಭುತ ಕಲಾವಿದರಾಗಿ ಮೆರೆದರು. ಮಹಾರಾಷ್ಟ್ರದಲ್ಲಿಯೂ ಕಂಪನಿ ಜಯಭೇರಿ ಬಾರಿಸಿತು. ಯಾವದೇ ಒಂದು ಕ್ರಿಯೆಗೆ ಆದಿ ಅಂತ್ಯ ಇರುವಂತೆ, ಉಚ್ಛ್ರಾಯ ಹಂತದಲ್ಲಿರುವ ಈ ನಾಟಕ ಮಂಡಳಿ, ಸಾಕು ತಂದೆ ಗುರುಲಿಂಗಪ್ಪನವರ ಅನಾರೋಗ್ಯದಿಂದ, ಹಾಗೂ ಗಂಗೂಬಾಯಿ ಚಿಂತೆಯಿಂದ, ಮೇಲಿಂದ ಮೇಲೆ ಹಾಸಿಗೆ ಹಿಡಿಯುತ್ತಿರುವುದರಿಂದ, ಕೆಲ ಕಲಾವಿದರ ದುರ್ಬುದ್ಧಿಯಿಂದ ಅನಿವಾರ್ಯವಾಗಿ ಉಡುಪಿಯಲ್ಲಿ ಶ್ರೀಕೃಷ್ಣನ ಸನ್ನಿದಾನದಲ್ಲಿಯೇ ಕಂಪನಿಗೆ ವಿದಾಯ ಹೇಳಬೇಕಾಯಿತು.

ಒಬ್ಬ ನಟಿಯಾಗಿ, ಹಾಡುಗಾರ್ತಿಯಾಗಿ, ಕಂಪನಿಮಾಲೀಕಳಾಗಿ ಮಿಂಚಿದ ಗಂಗೂಬಾಯಿಯ ಬಹುಮುಖವ್ಯಕ್ತಿತ್ವಕ್ಕೆ ಮಾರುಹೋಗದವರೆ ಇಲ್ಲ. ವಾಮನರಾವ ಮಾಸ್ತರರ ವಿಶ್ವಗುಣಾದರ್ಶ ಮಂಡಳಿ" ಇವಳು ಬಿಟ್ಟುಬಂದ ಮೇಲೆ ನಿಂತುಹೋಯಿತು. ಒಬ್ಬ ಮಹಿಳೆಯಾಗಿ ಅವಳ ಸಾಧನೆ ಎಂತಹದು ಎಂಬುದು ಗೊತ್ತಾಗದೆ ಇರದು.

### 4. ಸೋನುಬಾಯಿ ದೊಡ್ಡಮನಿ :

ಲಕ್ಷ್ಮೇಶ್ವರದ ಪ್ರಸಿದ್ಧ ದೇವದಾಸಿ ಮನೆತನ ಬಚ್ಚಾಸಾನಿಯದು. ಅವಳದು ದೊಡ್ಡ ಪರಿವಾರ ಹಾಗಾಗಿಯೇ ಅವರಿಗೆ 'ದೊಡ್ಡಮನಿ' ಎಂಬ ಅನ್ವರ್ಥಕನಾಮ ಬಂದಿರಬಹುದು. ಇವರು ಏಳು ಜನ ಅಕ್ಕತಂಗಿಯರು. ಸಣ್ಣರಾಜವ್ವ, ದೊಡ್ಡಸಾಬವ್ವ, ಸಣ್ಣ ಸಾಬವ್ವ, ದೊಡ್ಡದಾದವ್ವ, ಸಣ್ಣದಾದವ್ವ, ಮುಂಜವ್ವ, ಪೀರವ್ವ, ಈ ದೊಡ್ಡಮನಿ ಕುಟುಂಬದ ಕುಡಿಯೇ ಈ ಸೋನುಬಾಯಿ. ಬಚ್ಚಾಸಾನಿಯ ತಂಗಿ ಪೀರವ್ವನ ಮಗಳು. ಅಲ್ಲದೆ ಸೋನುಬಾಯಿಯ ದೊಡ್ಡವ್ವ ಈ ಬಚ್ಚಾಸಾನಿ. ಬಿಡಿಸಲಾರದ ಕರುಳಬಳ್ಳಿಯ ತೊಡಕು ಕಲಾವಿದರ ಕುಟುಂಬದಲ್ಲಿ ಹುಟ್ಟಿದ ಸೋನುಬಾಯಿಗೆ ಸಹಜವಾಗಿಯೇ ಕಲೆ ರಕ್ತಗತವಾಗಿ ಹರಿದು

ಬಂದಿತ್ತು. ನಾಲ್ಕು ಜನ ಅಕ್ಕಂದಿರು. ತಾರವ್ವ, ಮಲಕವ್ವ, ಪ್ಯಾರವ್ವ, ಅಮೀನವ್ವ ಇವರೆಲ್ಲರೂ; ಸಂಸಾರಸ್ಥರಾಗಿದ್ದರು. ಇವಳೇ ಚಿಕ್ಕವಳು, ಆ ಮನೆಯ ಮುದ್ದಿನ ಮಗಳಾಗಿ ಬೆಳೆದಳು. ತಾಯಿ ಪೀರವ್ವಳಿಗೆ ತನ್ನ ಅಕ್ಕ ಬಚ್ಚಾಸಾನಿಯಂತೆ ಮಗಳು ಒಳ್ಳೇಯ ಸಂಗೀತಗಾರಳಾಗಬೇಕೆಂಬ ಬಯಕೆ. ಅದರಂತೆ ಬಚ್ಚಾಸಾನಿಯ ಗರಡಿಯಲ್ಲಿ ಸಂಗೀತಾಭ್ಯಾಸ ಪ್ರಾರಂಭವಾಯ್ತು.

ಸಂಗೀತ ಕಲಿಯುತ್ತಲಿರುವಾಗ ಚೂಟಿಯಾದ, ಚುರುಕಾದ ಹುಡುಗಿಯನ್ನು ಕಂಡು ಅಬ್ಬಿಗೇರಿ ಕಂಪನಿಯ ಒಡೆಯರಾದ ಬಸನಗೌಡರು, ಸ್ವತಃ ಅವಳ ರೂಪ ಮತ್ತು ಕಂಠಸಿರಿಯನ್ನು ಕಂಡು ತಮ್ಮ ಕಂಪನಿಯಲ್ಲಿ ಅವಳನ್ನು ಸೇರಿಸಿಕೊಂಡರು. ಪಾದುಕಾಪಟ್ಟಾಭಿಷೇಕ, ಲಂಕಾದಹನ ನಾಟಕಗಳಲ್ಲಿ ಚಿಕ್ಕ ಪಾತ್ರಗಳನ್ನು ಮಾಡಲು ಅವಳಿಗೆ ಅವಕಾಶ ಕಲ್ಪಿಸಿಕೊಟ್ಟರು. ವಯಸ್ಸು ಸಣ್ಣದು ಎಂಬುದನ್ನು ಬಿಟ್ಟರೆ ಮತ್ತಾವುದರಲ್ಲಿಯೂ ಸೋನುಬಾಯಿಯನ್ನು ತೆಗೆಯುವಂತಿರಲಿಲ್ಲ.

ಅಬ್ಬಿಗೇರಿ ಕಂಪನಿ ಲೈಸನ್ಸ ಕಳೆದುಕೊಂಡು, ಅದನ್ನು ಮರಳಿ ಪಡೆಯಲು ಹರಸಾಹಸಮಾಡಿದರೂ ಸಾಕಷ್ಟು ತೊಂದರೆಯನ್ನು ಅನುಭವಿಸಿದರು ಗೌಡರು. ಕಂಪನಿ ಅಕಾಲಿಕವಾಗಿ ಮುಚ್ಚುವಸ್ಥಿತಿಗೆ ಬಂದಾಗ ಅನಿವಾರ್ಯವಾಗಿ ಪೀರವ್ವ ಮಗಳೊಡನೆ ಮತ್ತೆ ಹಾವೇರಿಗೆ ಮರಳಿದಳು. ನಂತರ 'ಅಂಬಾಪ್ರಸಾದಿಕಾ' ಕಂಪನಿಯಲ್ಲಿ ಕೆಲವು ದಿನ ಬಾಲನಟಿಯಾಗಿ ನಟಿಸಿದ ಸೋನುಬಾಯಿ, 14ನೆ ವಯಸ್ಸಿಗೆ ಕಾಲಿಡುತ್ತಿರುವುದನ್ನು ಗಮನಿಸಿದ ರಂಗನಾಥ ಭಟ್ಟರು ಅವಳಿಗೆ ನಾಯಕಿಯ ಪಾತ್ರವನ್ನು ಕೊಟ್ಟು, ಅದರಿಂದ ತಮ್ಮ ಕಂಪನಿಗೆ ಆದಾಯವನ್ನು ವೈಭವವನ್ನು ತಂದುಕೊಡುವ ಕನಸು ಕಾಣುತ್ತಿದ್ದರು.[11]

ಮುಂದೆ ವೆಂಕಟರಾವ ಅವರು ಸಂಗೀತದ ಜೊತೆಗೆ ತಾವೇ ಎಲ್ಲರೂ ಸೇರಿ ಒಂದು ನಾಟಕ. ಕೂಡಿಸುವ ಅಲೋಚನೆ ಮಾಡಿದರು. 'ಸಂದೇಹ ಸಾಮ್ರಾಜ್ಯ' ಮೂಲಮರಾಠಿ ನಾಟಕವನ್ನು (ಕನ್ನಡಕ್ಕೆ ಅನುವಾದಿತವಾದದ್ದು) ಈ ನಾಟಕಕ್ಕೆ ಸೋನುಬಾಯಿಯನ್ನು ನಾಯಕಿ ಶತತಾರಾ ಪಾತ್ರಕ್ಕೆ ಒಪ್ಪಿಸಿದರು. ನಾಲ್ಕು ತಿಂಗಳು ರಂಗತಾಲೀಮು ಭರ್ಜರಿಯಾಗಿ ನಡೆಯಿತು. ನಾಟಕ ಪ್ರದರ್ಶನಗೊಂಡ ಮೇಲೆ ನಾಯಕಿ ಶತತಾರಾನ ಪಾತ್ರ ಎಲ್ಲರ ಮನಸ್ಸಿನಲ್ಲಿ ಚಿರಸ್ಥಾಯಿಯಾಯ್ತು. ಮೊದಲಬಾರಿಗೆ ನಾಯಕಿಯಾಗಿ ಅವರಿಗೆ ಹಿಡಿಸಲಾರದಷ್ಟು ಖುಷಿಯಾಗಿತ್ತು. ಅಷ್ಟೇ ಅಲ್ಲ ಅವಳೊಬ್ಬ ಭರವಸೆಯ ನಟಿಯಾಗಿ ಉಳಿದುಬಿಟ್ಟಳು. ಅವಳ ನಟನೆಯೇ ನಾಟಕ ಕಂಪನಿ ಮಾಡಲು ನಾಂದಿಯಾಯ್ತು.

ಸೋನುಬಾಯಿ ಹಾಗೂ ವೆಂಕಟರಾವ್ ಅವರ ಪಾಲು ದಾರಿಕೆಯಲ್ಲಿ 1936ರಲ್ಲಿ "ನೂತನ ಸಂಗೀತ ನಾಟಕ ಮಂಡಳಿ" ಹುಟ್ಟಿಕೊಂಡಿತು. ಶ್ರೀನಿವಾಸ ಕಲಕೋಟಿಯವರೇ ಕಂಪನಿಯ

---

[11] ಡಾ. ಎಸ್. ಎಸ್. ಕೋತಿನ ರಗಕಲಾವಿದೆ ಸೋನುಬಾಯಿ ದೊಡ್ಡಮನಿ. ಪುಟ-7

ಮ್ಯಾನೇಜರರಾದರು. ಸ್ವಂತ ಕಂಪನಿಯೆಂದ ಮೇಲೆ ಬಾಡಿಗೆ ಪರಿಕರಗಳು ನಡೆಯುವುದಿಲ್ಲ. ಪರಿಕರದ ವ್ಯವಸ್ಥೆ, ಬೋರ್ಡಿಂಗ್ ವ್ಯವಸ್ಥೆ ಎಲ್ಲವೂ ಉತ್ತಮವಾಗಿರಬೇಕೆಂಬ ಹಂಬಲ ಅವರದಾಗಿತ್ತು. ಕ್ಯಾಂಪ ಹಾವೇರಿಗೆ ಹೋದಾಗ ಭಕ್ತಿರಸಪ್ರಧಾನವಾದ ಗದುಗಿನ ಅಚ್ಯುತರಾವ ಕೃಷ್ಣರಾವ ಹುಯಿಲಗೋಳರು ಬರೆದ "ಶಿವಶರಣೆ ಅಕ್ಕಮಹಾದೇವಿ" ನಾಟಕವನ್ನು ಪ್ರಯೋಗಕ್ಕೆ ತೆಗೆದುಕೊಂಡರು. ಮುಟ್ಟಾದ ಹೆಣ್ಣು ಮಗಳು ಆ ಪಾತ್ರವನ್ನು ಮಾಡಬಾರದೆಂಬ ಕರಾರಿನ ಮೇಲೆ ನಾಟಕವನ್ನು ಆಡಲು ಕೊಟ್ಟರು. (ಇಲ್ಲಿ ಹೆಣ್ಣಿನ ಬಗೆಗೆ ಇರುವ ಕೀಳರಿಮೆ ಎದ್ದು ಕಾಣುತ್ತದೆ). ಯಾವ ಅಲಂಕಾರವೂ ಇಲ್ಲದ ಒಂದು ಸಾದಾಸೀದಾ ಶರಣೆಯ ಪಾತ್ರ, ನಾಟಕದ ಮುಖ್ಯ ಆಕರ್ಷಣೆಯಾಯ್ತು.

ಹಾವೇರಿ ಕ್ಯಾಂಪಿನಲ್ಲಿದ್ದಾಗ ನಡೆದ ಘಟನೆ, ಮ್ಯಾನೇಜರು ಊರಲ್ಲಿರಲಿಲ್ಲ. ಕಂಪನಿಯ ಒಡತಿ ಸೋನುಬಾಯಿ ಅದೇ ಊರಿನವಳಾಗಿದ್ದರಿಂದ ಮನೆಗೆ ಹೋಗಿದ್ದಳು. ಇನ್ನೇನು ಕೇಳುವುದು ಅಲ್ಲಿರುವ ನಟವರ್ಗದವರಿಗೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಷ್ಟೇ ಖುಷಿಯಾಗಿತ್ತು. ಮೊದಲೇ ಕುಡುಕರ ಸಾಮ್ರಾಜ್ಯ. ಆ ಚಟವನ್ನು ತೀರಿಸಿಕೊಳ್ಳುವುದಕ್ಕಾಗಿ ತಾವೇ ಸ್ವತಃ ಒಂದು ಪಾರ್ಮುಲಾ ಕಂಡುಹಿಡಿದರು. ಕಸಕಸಿ, ಜಾಜೀಕಾಯಿ, ಇನ್ನೇನೋ ಪದಾರ್ಥಗಳನ್ನು ಹಾಕಿ ಮತ್ತು ಬರಿಸುವ (ಬಾಂಗ್) ಎಂಬ ರಸವನ್ನು ತಯಾರಿಸಿ ಕಂಠಮಟ ಕುಡಿದು ಗಲಾಟೆ ಮಾಡಿದ್ದಲ್ಲದೆ, ಮರುದಿನ ಹನ್ನೆರಡು ಗಂಟೆಗೆ ಚಹಾದ ಅಂಗಡಿಗೆ ಚಹಾ ಕುಡಿಯಲು ಹೋದಾಗ ಬೆಳಕಿಂಡಿಯಿಂದ ಬರುವ ಬೆಳಕನ್ನು ನೋಡಿ, ಒಬ್ಬ ನಟ ಇಷ್ಟೊತ್ತಿನ್ಯಾಗ ಯಾಕ ಗ್ಯಾಸ ಹಚ್ಚಕೊಂಡ ಕುಂತಿರಲೇ ಎಂದು ಕೇಳಿದನಂತೆ. ರಾತ್ರಿಯ ಅಮಲು ಇನ್ನೂ ಇಳಿದಿರಲಿಲ್ಲ. ಸೋನುಬಾಯಿಯವರಿಗೆ ಗೊತ್ತಾಗಿ ಎಲ್ಲರನ್ನು ತರಾಟೆಗೆ ತೆಗೆದುಕೊಂಡರಂತೆ. ಮಾಡಿದ ತಪ್ಪನ್ನು ಒಪ್ಪಿಕೊಂಡು, ಮುಂದೆ ಎಂದೂ ಅಂಥಾ ಘಟನೆಗಳು ನಡೆಯದಂತೆ ಎಚ್ಚರಿಕೆ ವಹಿಸಿದರಂತೆ ನಟರು. ಇವರಿಂದ ಆವತ್ತು ಕಂಪನಿ ಮಾಲೀಕರೆಂದರೆ ಎಷ್ಟೊಂದು ಗೌರವವಿತ್ತು ಎಂಬುದು ಗೊತ್ತಾಗುತ್ತದೆ.

ಹಾವೇರಿಯಿಂದ ಬ್ಯಾಡಗಿಗೆ ಕ್ಯಾಂಪ ಹಾಕಿದರು. ದಿನದಿಂದ ದಿನಕ್ಕೆ ಕಂಪನಿ ಉತ್ತುಂಗಕ್ಕೇರಿತು. ಅದಕ್ಕೆ ಕಾರಣ ಮನೋಜ್ಞವಾಗಿ ಅಭಿನಯಿಸುವ ನಟ ನಟಿಯರ, ಹಾಗೂ ಕಂಪನಿ ಮಾಲೀಕರ ವ್ಯವಹಾರ ಕೌಶಲವೇ ಮೂಲ ಬಂಡವಾಳವಾಗಿತ್ತು. ಕಾಲೇಜು ಗರ್ಲ್, ಹೇಮರಡ್ಡಿ ಮಲ್ಲಮ್ಮನಂಥ ನಾಟಕಗಳನ್ನು ಪ್ರಯೋಗಿಸಿ ಜನಮನ್ನಣೆಗೆ ಪಾತ್ರಳಾದ ಸೋನುಬಾಯಿ ಮಹತ್ವಾಕಾಂಕ್ಷಿಯಾಗಿದ್ದಳು. ಕಂಪನಿಯನ್ನು ಇನ್ನಷ್ಟು ಎತ್ತರಕ್ಕೆ ಒಯ್ಯಬೇಕೆಂಬ ಬಲವಾದ ಹಂಬಲ ಅವಳದಾಗಿತ್ತು. ಅದಕ್ಕಾಗಿ ವೆಂಕಟರಾವ ಅವರೂ ಒಂದಿಷ್ಟು ಆರ್ಥಿಕ ಸಹಾಯಮಾಡುವುದಾಗಿ ಹೇಳಿ ಹಣ ತರಲು ಊರಿಗೆ ಹೋದವರು. ಮರಳಿ ಕಂಪನಿಗೆ ಬರಲೇ ಇಲ್ಲ. ಸೋನುಬಾಯಿಗೆ ದಿಕ್ಕೇ ತೋಚದಾಯ್ತು. ಶ್ರೀನಿವಾಸ

ಕಲಕೋಟಿಯವರ ಸಹಾಯದಿಂದ ಕಂಪನಿ ಮರುಜೀವ ಪಡೆಯಿತು. ವೆಂಕಟರಾವ ಮಾಸ್ತರು ಹೋದಮೇಲೆ ಕಂಪನಿಗೆ "ವಿಶ್ವೇಶ್ವರ ಸಂಗೀತ ನಾಟಕ ಮಂಡಳಿ" ಎಂದು ಮರುನಾಮಕರಣ ಮಾಡಿದರು. ಮತ್ತೆ ಕಾಲೇಜ ಗರ್ಲ್, "ಶಿವಶರಣೆ ಅಕ್ಕಮಹಾದೇವಿ" ನಾಟಕಗಳನ್ನು ಆಡತೊಡಗಿದರು. ಕಲೆಕ್ಷನ್ ಚೆನ್ನಾಗಿ ಆಗ್ತಾ ಇತ್ತು. ಸೋನುಬಾಯಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ಆದರೆ "ತಾನೊಂದು ಬಗೆದರೆ ದೈವ ಬೇರೊಂದು ಬಗೆಯಿತು" ಎಂಬಂತೆ ಅದೇ ಊರಿಗೆ ಹಕ್ಕಂಡಿ ಈರಪ್ಪನವರ "ವಿಶ್ವರಂಜನ ಸಂಗೀತ ನಾಟಕ ಮಂಡಳಿ" ಕ್ಯಾಂಪ ಹಾಕಿತ್ತು. ಅತಿರಥ ಮಹಾರಥರಾದ ಬಸವರಾಜ ಮನ್ಸೂರ, ಹಂದಿಗನೂರ ಸಿದ್ರಾಮಪ್ಪರಂತಹ ನಟರನ್ನು ಹೊಂದಿದ ಅದ್ದೂರಿ ವೈಭವಯುತವಾದ ಸೆಟ್ಸ್‌ನಿಂದ ಕೂಡಿದ ಈ ಕಂಪನಿಯ ಮುಂದೆ ಸೋನುಬಾಯಿಯ ಕಂಪನಿ ಕಾಲು ಸೋತು ನಿಲ್ಲುವ ಹಂತಕ್ಕೆ ಬಂದಿತು. ಆರ್ಥಿಕ ಬಲ ಕುಗ್ಗಿತು. ಹಾಗೂ ಹೀಗೂ ದಿನಗಳನ್ನು ನೂಕ ತೊಡಗಿದರು. ಒಬ್ಬರಾದರೆ ಹೇಗೋ ಜೀವನ ನಡೆಸಬಹುದು. 40–50 ಜನರನ್ನು ಕಲೆಕ್ಷನ್ ಇಲ್ಲದೆ ಸಾಕುವುದೆಂದರೆ ಎಂಥ ಗಂಡೆದೆಯವರಿಗೂ ಆಗದ ಮಾತು. ದಾವಣಗೇರಿಯಿಂದ ಸವಣೂರಿಗೆ ಸೇರಿತು ಕ್ಯಾಂಪ. ಅಲ್ಲಿಯೂ ಭವಿಷ್ಯ ನಿಚ್ಚಳವಾಗಿರಲಿಲ್ಲ. ಕೆಲವು ದಿನಗಳಲ್ಲಿ ಸೋನುಬಾಯಿಯವರ ಆರೋಗ್ಯವು ಹದಗೆಟ್ಟಿತು. ಆರೋಗ್ಯ ಸುಧಾರಿಸುತ್ತಿದ್ದಂತೆ ಮತ್ತೆ ಮುಖಕ್ಕೆ ಬಣ್ಣ ಹಚ್ಚುವುದು ಅನಿವಾರ್ಯವಾಗಿತ್ತು.

ಸಂಗೀತ ಕಲಿಯಬೇಕೆಂಬ ಅದಮ್ಯ ಆಶೆಯಿಂದ ರಂಗಭೂಮಿಯನ್ನು ಪ್ರವೇಶಿಸಿದ ಸೋನುಬಾಯಿ ಒಬ್ಬ ನಟಿಯಾಗಿ, ಕಂಪನಿ ಒಡತಿಯಾಗಿ ಬೆಳೆಯುತ್ತಾಳೆ. ವೃತ್ತಿರಂಗಭೂಮಿಗೆ ರಂಗಗೀತೆಗಳಿಂದ ಶಾಸ್ತ್ರೀಯ ಸಂಗೀತದ ಮೂಲಕ ಒಂದು ಹೊಸ ಆಯಾಮವನ್ನು ತಂದುಕೊಟ್ಟಳು ಸೋನುಬಾಯಿ.

ಸಂಗೀತಭಾಗ್ಯವನ್ನು ಕೊಟ್ಟ ಭಗವಂತನಿಗೆ ಆರೋಗ್ಯ ಭಾಗ್ಯವನ್ನು ಕೊಡುವುದಾಗಲಿಲ್ಲವೇನೋ? ತನ್ನ ಸುಮಧುರ ಕಂಠದಿಂದ ಸಂಗೀತದ ರಸದೌತಣವನ್ನು ಉಣಬಡಿಸಿದ ಸೋನುಬಾಯಿಗೆ ಕೊನೆಗಳಿಗೆಯಲ್ಲಿ ಸಿಕ್ಕಿದ್ದು ಕಲಾಸಂತೃಪ್ತಿಯೊಂದೆ.

ಇವಳ ಧಾರಾಳತನದಿಂದ ಹಾಗೂ ಪಾಲುಗಾರರು ಕೈಕೊಟ್ಟಿದ್ದರಿಂದ ಸೋನುಬಾಯಿ 1947ರಲ್ಲಿ ಕಂಪನಿ ಕ್ಲೋಜ್ ಮಾಡಬೇಕಾಯ್ತು.

**5) ರಹೆಮಾನವ್ವ ಕುಕನೂರ**

1950ರಲ್ಲಿ ರಹೆಮಾನವ್ವ ಕುಕನೂರ ಇವಳು ತನ್ನದೇ ಮಾಲಿಕತ್ವದಲ್ಲಿ "ಶ್ರೀ ಲಲಿತ ಕಲಾ ನಾಟ್ಯ ಸಂಘ" ಕುಕನೂರ ಎಂಬ ನೂತನ ಕಂಪನಿಯನ್ನು ಕಟ್ಟಿದಳು.

ರಹಮಾನವ್ವಳ ಆಕರ್ಷಕ ವ್ಯಕ್ತಿತ್ವ ಹಾಗೂ ಅದ್ಭುತ ನಟನೆ ಸಂಘದ ಆಸ್ತಿಯಾಗಿತ್ತು. ಪಿ.ಬಿ.ದುತ್ತರಗಿ ಅವರ 'ತಾಯಿ ಕರಳು' ನಾಟಕ ಇವಳಿಂದಲೇ ಪ್ರಸಿದ್ಧಿಗೆ ಬಂದಿತು. ಹರಿಶ್ಚಂದ್ರ ನಾಟಕದಲ್ಲಿ ತಾರಾಮತಿಯ ಪಾತ್ರ ಮಾಡುತ್ತಲಿರುವಾಗಲೇ ಮಗುವಿಗೆ ಜನ್ಮಕೊಟ್ಟ ಮಹಾತಾಯಿ. ರಹೆಮಾನವ್ವ ಆ ಪಾತ್ರವೇ ತಾನಾಗಿ ಬಿಡುತ್ತಿದ್ದಳು. ಆ ಶ್ರದ್ಧೆ ಆಸಕ್ತಿ ಭಕ್ತಿಯಿದ್ದುದರಿಂದಲೇ 1965ರಲ್ಲಿ ಸಂಘ ವೈಭವದ ದಿನಗಳನ್ನು ಕಂಡಿತು. ಬೆಳೆದ ಮಕ್ಕಳು ತಾಯಿಯಕೂಡ ರಂಗಭೂಮಿಗೆ ಟೊಂಕಕಟ್ಟಿ ನಿಂತರು. ಅದರ ಫಲವಾಗಿ 'ತಾಯಿ ಕರುಳು', ಚಿತ್ರಾಂಗದಾ, ರಾಜಾ ಹರಿಶ್ಚದ್ರ, ಕುರುಕ್ಷೇತ್ರ, ಹೇಮೆರಡ್ಡಿ ಮಲ್ಲಮ್ಮ, ಹಲವಾರು ನಾಟಕಗಳು ಕೊಪ್ಪಳ, ಸಿಂಧನೂರ, ರಾಯಚೂರ, ಗಂಗಾವತಿಯಲ್ಲಿ ಕ್ಯಾಂಪ ಮಾಡಿ ಜನಮನ್ನಣೆಗಳಿಸಿತು ಸಂಘ. ಡಿ ದುರ್ಗಾದಾಸ ಅವರ ನಿರ್ಮಲಾ ನಾಟಕದಲ್ಲಿನ ಹುಚ್ಚಿಯ ಪಾತ್ರ ಒಳ್ಳೇಯ ಹೆಸರನ್ನು ತಂದುಕೊಟ್ಟಿತು.

ಕಾಲ ಹೀಗೆ ಇರುವದಿಲ್ಲ, ಕಂಪನಿ ಒಳ್ಳೇಯ ಹಂತದಲ್ಲಿರುವಾಗ ಕಲೆಕ್ಷನ ಚನ್ನಾಗಿ ನಡೆದಿರುವಾಗ, 1966ರಲ್ಲಿ ಅಧೋನಿ ಸಮೀಪದ ಬದನ್ಯಾಳದಲ್ಲಿ ಶಾಖ ಸರ್ಕ್ಯೂಟನಿಂದ ಸಂಘ ಬೆಂಕಿಯ ಅಘಾತಕ್ಕೆ ಒಳಗಾಯಿತು. ಆದರೂ ರಹೆಮಾನವ್ವ ಎದೆಗುಂದದೆ ಮತ್ತೆ ಕಂಪನಿಗೆ ಮರುಜೀವಕೊಡಲು ಕಂಕಣಬದ್ಧಳಾದಳು. ಅಂದಿನ ಕಾಲದಲ್ಲಿ ರಹೆಮಾನವ್ವ ಎರಡು ಕಾರಿನ ಒಡತಿಯಾಗಿದ್ದಳು. ಆ ಎರಡು ಕಾರನ್ನು ಮೈಮೇಲಿನ ಒಡವೆಗಳನ್ನು ಮಾರಿ ಮತ್ತೆ ಕಂಪನಿ ಪ್ರಾರಂಭ ಮಾಡಿದಳು. ಆದರೂ ಮೊದಲಿನ ವೈಭವ ಮತ್ತೆ ಮರಳಿ ಬರಲಿಲ್ಲವೇನೋ. ಆಗಲೋ ಈಗಲೋ ನಿಂತು ಹೋಗುವ ಕಂಪನಿಗೆ ಧೈರ್ಯವೆಂಬ ಸಲಾಯಿನ ಮೂಲಕ ಉಳಿಸಿಕೊಳ್ಳುವ ವ್ಯರ್ಥ ಪ್ರಯತ್ನ ನಡೆಯಿತು. ಒಪ್ಪೊತ್ತಿನ ಊಟಕ್ಕೂ ಗತಿಯಿಲ್ಲದೆ ಪರದಾಡುವಂತ ಅವಸ್ಥೆ, ಸಾಯುವವನ ಮೇಲೆ ಆಕಾಶವೇ ಕಳಚಿ ಬಿದ್ದಂತೆ, ಇನ್ನೊಂದು ಭಯಾನಕ ಸುದ್ದಿ ಆಕೆಯ ಕಿವಿಗೆ ಬಂದು ಅಪ್ಪಳಿಸಿತು. ಇಬ್ಬರು ಹೆಣ್ಣುಮಕ್ಕಳು ಒಬ್ಬ ಸಾಕು ಮಗನ ಸಾವಿನ ಸುದ್ದಿ ಬರಸಿಡಿಲೆರಗಿದಂತೆ ಎರಗಿತು. ಕೊನೆಯ ಘಳಿಗೆಯಲ್ಲಿ ಮಕ್ಕಳ ಮುಖವನ್ನು ನೋಡಲು ಹೋಗಬೇಕೆಂದರೆ ಕೈಯಲ್ಲಿ ಕಾಸಿಲ್ಲ. ಮನೆಯಲ್ಲಿಯ ಪಾತ್ರೆ ಪಗಡೆಗಳನ್ನು ಮಾರಿ ಊರ ದಾರಿ ಹಿಡಿದಳು. ಇಂಥ ಅವಸ್ಥೆಯಲ್ಲಿ ಸಂಘವನ್ನು ಉಳಿಸಿಕೊಂಡು ಹೋಗುವುದು ಹೇಗೆ ತಾನೇ ಸಾಧ್ಯ? ಕೊನೆಗೆ ಕಂಪನಿಯನ್ನು ಉಳಿಸಿಕೊಳ್ಳಲು ಮಾಡಿದ ಪ್ರಯತ್ನಗಳು ವ್ಯರ್ಥವಾದವು. ಕಂಪನಿಯ ಒಡತಿಯಾಗಿ ವೈಭವದಿಂದ ಮರೆದ ಆ ಕ್ಷಣಗಳೇ ಆಕೆಗೆ ಕೊನೆಗೆ ಉರುಳಾದುವೇನೋ? ಒಬ್ಬ ಮನುಷ್ಯನಿಗೆ ಪೆಟ್ಟಿನ ಮೇಲೆ ಪೆಟ್ಟು ಬಿದ್ದಾಗ ಮೇಲಕ್ಕೇಳುವುದು ಕಷ್ಟವಾಗುತ್ತದೆ. ವಿಧಿಲಿಖಿತ ಅದನ್ನು ತಾನೆ ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ. ದುಂದುವೆಚ್ಚವೂ ಕೂಡಾ ಕಲಾವಿದರ ಅವನತಿಗೆ ಕಾರಣವಾಗಬಹುದು.

ಒಟ್ಟಿನಲ್ಲಿ ರಂಗಭೂಮಿಯ ಒಂದು ನಕ್ಷತ್ರ ಮಿಂಚಿ ಮಾಯವಾದದ್ದಂತು ನಿಜ.

### 6) ಸುಮಿತ್ರಮ್ಮ ಕುಂದಾಪೂರ

ಹುಬ್ಬಳ್ಳಿಯಲ್ಲಿ ನೇಕಾರನಗರರೋಡ ಹತ್ತಿರ ಇರುವ ಸುಮಿತ್ರಮ್ಮನವರ ಮನೆಗೆ ದಿನಾಂಕ.29-11-08 ರಂದು ಹೋದಾಗ ಅಜ್ಜಿ ಹಾಗೂ ಅವರ ಮನೆಯವರು ನಮ್ಮನ್ನು ಸಂತೋಷದಿಂದಲೇ ಸ್ವಾಗತಿಸಿದರು.

ಮಧ್ಯಮ ವರ್ಗದ ಕುಟುಂಬದಿಂದ ಬಂದ ಸುಮಿತ್ರಮ್ಮ ತನ್ನ ಹದಿನಾರನೇಯ ವಯಸ್ಸಿನಲ್ಲಿಯೇ ಬಣ್ಣಕ್ಕೆ ಮಾರುಹೋದಳು. "ನನ್ನಷ್ಟು ಸೊಕ್ಕು ಯಾರಿಗೂ ಇರಲ್ಲಿಲ್ಲ ಅದಕ್ಕೆ ದೇವರು ಹೀಗೆ ಕಾಲ ಮುರಿದು ಕೂಡಿಸ್ಯಾನ ನೋಡ್ರಿ" ಎಂದು ಇಂಗ್ಲೀಷ ಮಿಶ್ರಿತ ಕನ್ನಡದಲ್ಲಿ ಅಳ್ಳು ಹುರಿದ್ಹಾಂಗ ಮಾತನಾಡುವ ಸುಮಿತ್ರಮ್ಮನವರ ಮಾತುಗಳನ್ನು ಹಾಗೆ ಕೇಳಬೇಕೆನಿಸುತ್ತಿತ್ತು.

ನಟನೆಯ ಕನಸು ಹೊತ್ತು ಬಣ್ಣದ ಸೆಳೆತಕ್ಕೆ ಒಳಗಾದ ಸಮಿತ್ರಮ್ಮ ಮುಂದೇನು ಮಾಡಬೇಕೆಂಬ ಯೋಚ್ನೆಯಲ್ಲಿರುವಾಗ, ಗುಬ್ಬಿ ಕಂಪನಿ ಕುಂದಾಪೂರಕ್ಕೆ ಕ್ಯಾಂಪ್ ಮಾಡಿತ್ತು. ನಾಟಕ ನೋಡಲು ಹೋಗಿ ಕಂಪನಿ ಮಾಲೀಕರ ಪರಿಚಯ ಮಾಡಿಕೊಂಡು, ತನಗೂ ನಟನೆಯ ಬಗ್ಗೆ ಆಸಕ್ತಿ ಇರುವುದನ್ನು ಹೇಳಿಕೊಂಡಳು. ಆ ಊರಿನಿಂದ ಕ್ಯಾಂಪ್ ಕ್ಲೋಜ್ ಆಗುವುದನ್ನು ಕಾಯುತ್ತ ಕುಳಿತಳು. ಅವಳೊಳಗಿನ ಕಲಾದೇವತೆ ಅವಳನ್ನು ಸಮ್ಮನೆ ಕೂಡಲು ಬಿಡಲಿಲ್ಲ.

ಮುಂದೆ ಕೆಲವೇ ದಿನಗಳಲ್ಲಿ ಕ್ಯಾಂಪ್ ಮೈಸೂರಿಗೆ ಹೋಗುತ್ತದೆ. ಅದೇ ಅವಕಾಶಕ್ಕಾಗಿ ಕಾಯುತ್ತಿದ್ದ ಸುಮಿತ್ರಮ್ಮ ಮನೆಯಲ್ಲಿ ಹೇಳದೆ ಕೇಳದೆ ಗುಬ್ಬಿ ಕಂಪನಿ ಸೇರಿಕೊಂಡಳು. ಅಲ್ಲಿಂದ ಶುರುವಾಯ್ತು ಇವರ ಬಣ್ಣದ ಬದುಕು. ಮೊದಮೊದಲು ಚಿಕ್ಕಮುಟ್ಟ ಪಾತ್ರಗಳನ್ನು ಮಾಡುತ್ತಿದ್ದ ಸುಮಿತ್ರಮ್ಮಳಿಗೆ ನಾಯಕಿಯ ಪಾತ್ರಕ್ಕೆ ಬಡ್ತಿ ಸಿಕ್ಕಿತು. ಅಷ್ಟೇ ಅಲ್ಲ ಡಾ. ರಾಜ್ ಅವರ ಮೊದಲ ಹಿರೋಹಿನ್ ಎಂಬ ಹೆಗ್ಗಳಿಕೆಗೂ ಪಾತ್ರಳಾದಳು. ರಾಜಾಗೋಪಿಚಂದ, ಧರ್ಮರತ್ನಾಕರ ಕಾಳಿದಾಸ ಮೊದಲಾದ ಸುಮಾರು ಇಪ್ಪತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಈ ಜೋಡಿ ಪ್ರೇಕ್ಷಕರಿಗೆ ಮೋಡಿ ಮಾಡಿತ್ತು.

ಸುಮಿತ್ರಮ್ಮ ಮೂಲತಃ ದಕ್ಷಿಣ ಕನ್ನಡದವಳಾಗಿದ್ದರೂ, ನಟನೆಯ ಗೀಳು ಅವರನ್ನು ಉತ್ತರ ಕರ್ನಾಟಕಕ್ಕೆ ಬಂದು ನೆಲೆಸುವಂತೆ ಮಾಡಿತು. ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘ, ಗೋಕಾಕ ಬಸವಣೆಪ್ಪನವರ ಕಂಪನಿ, ಸುಬ್ಬಯ್ಯ ನಾಯ್ಡು, ಹಾಗೂ ಶೇಷಾಚಾರರ ಕಂಪನಿಯಲ್ಲಿ ದಣಿವರಿಯದ ದುಡಿಮೆ ಇವರದಾಗಿತ್ತು.

ರಾ. ಕಾ. ನಾಯಕ ಅವರು 'ಲಗ್ನಬಂಧನ' ನಾಟಕವನ್ನು ಸುಮಿತ್ರಮ್ಮನ ಸಲುವಾಗಿನೇ ರಚನೆ ಮಾಡಿದ್ದರಂತೆ. ಯಾಕೆಂದರೆ ಅವಳ ದಿಟ್ಟ ಗಂಡೆದೆಯ ಸ್ವಭಾವಕ್ಕೆ ಈ ನಾಟಕ ಹೇಳಿ ಮಾಡಿಸಿದಂತ್ತಿತ್ತು ಎಂದು ಹಿರಿಯ ಕಲಾವಿದೆ ಲಕ್ಷ್ಮೀಬಾಯಿ ಏಣಗಿ ಅವರು ಹೇಳಿದರು.

"ಮೊದಲಿನಿಂದಲೂ ಗಂಡುಬೀರಿರಿ ನಾನು ಹೀಗಾಗಿ ನಾಟಕ ಕಂಪನಿ ಮಾಡಿದೆ" ಎನ್ನುತ್ತಾಳೆಸುಮಿತ್ರಮ್ಮ. 1952ರಲ್ಲಿ "ವಿಜಯ ಮಾಲಾ ನಾಟ್ಯ ಸಂಘ ಕುಂದಾಪೂರ ಎಂಬ ಕಂಪನಿಯನ್ನು ಶಿವಯ್ಯಸ್ವಾಮಿ ಲಕ್ಷ್ಮೇಶ್ವರ ಎಂಬುವರ ಕೂಡಾ ಮಾಡಿದ್ದಳು. ಅದಾದಮೇಲೆ 1961-1982 ಹೀಗೆ ಮೂರು ಸಲ ಕಂಪನಿ ಕಟ್ಟದ ಹಿರಿಮೆ ಇವಳದು.

ಎಲಿವಾಳ ಸಿದ್ದಯ್ಯಸ್ವಾಮಿ, ದುರ್ಗಾದಾಸ, ಬೀಳಗಿ ಪೇಂಟರ, ಬಿ.ಕೆ. ಶಂಕರ, ಮಹಾನ ನಟರು ಸುಮಿತ್ರಮ್ಮನ ಕಂಪನಿಯಲ್ಲಿ ಬಣ್ಣಹಚ್ಚಿದವರೇ. ಕಲೆಯನ್ನೆ ಕಸುವನ್ನಾಗಿ ಮಾಡಿಕೊಂಡು ಕಲೆಯೇ ಜೀವನ ಎಂದು ಸಾಧಿಸಿ ತೋರಿಸಿದ ಉತ್ತರ ಕರ್ನಾಟಕದ ರಾಜಕುಮಾರ ಎಂಬ ಉಪಾಧಿಗೆ ಒಳಗಾದ ಮೂರು ಕಂಪನಿಯ ಮಾಲಿಕರಾದ ಗುಡಗೇರಿ ಎನ್ ಬಸವರಾಜ ಮೊದಲು ಬಣ್ಣಹಚ್ಚಿದ್ದೆ ಈ ಸುಮಿತ್ರಮ್ಮನ ಕಂಪನಿಯಲ್ಲಿ. "ಎರಡುವರ್ಷ ಅವ್ನು ನನ್ನ ಕಂಪನಿಯಲ್ಲಿ ದುಡಿದಿದ್ದಾನೆ, ಅಕ್ಕಾ ಅಕ್ಕಾ ಅಂತಾ ನನ್ನ ಹಿಂದ್ಹಿಂದೆ ಓಡಾಡಿದ್ದಾನೆ. ನೋಡಿ ಅವ್ನು ಎಷ್ಟುಎತ್ತರಕ್ಕೆ ಬೆಳೆದ?" ಎಂದು ಬಾಯ್ತುಂಬ ಹರಸಿದಳು.

"ನಾಟಕ ಕಂಪನಿ ಕಟ್ಟಿದೆ, ಅಟೋರಿಕ್ಷಾ ಇಟ್ಟೆ ಲಾರಿಇಟ್ಟಿದ್ದೆ, ಎಲ್ಲಾನೂ ಮಾಡಿದೆ, ಹೋಟೆಲ ಉದ್ಯೋಗ ಒಂದನ್ನ ಮಾಡಿಲ್ಲ ನೋಡಿ, ದುಡ್ಡಿದ್ದರೆ ಈಗಲೂ ನಾ ನಾಟಕ ಕಂಪನಿ ಮಾಡುತ್ತಿದ್ದೆ" ಎನ್ನುವ 77 ರ ಹರೆಯದ ಸುಮಿತ್ರಮ್ಮನಲ್ಲಿ ಇನ್ನೊ ಉತ್ಸಾಹ ಕುಂದಿಲ್ಲ ಚೈತನ್ಯ ಕುಗ್ಗಿಲ್ಲ ಎನಿಸದೆ ಇರಲಿಲ್ಲ.

ಆದರೂ ಬಹಾಳ ಚಾಲಾಕಿ ಅಜ್ಜಿ. ಒಬ್ಬ ಕಂಪನೀಯ ಒಡತಿಯಾಗಿ ನಿಮಗೆ ಎದುರಾದ ಸಮಸ್ಯಗಳೇನು? ಎಂದರೆ ನನಗೇನೂ ಸಮಸ್ಯೆಗಳೇ ಎದುರಾಗಿಲ್ಲ, ದುಡ್ಡಿದ್ದಾಗ ಕಂಪನಿ ಚಾಲೂ ಮಾಡೂದು, ದುಡ್ಡ ಇಲ್ಲದಾಗ ಕಂಪನಿ ಬಂದ ಮಾಡೂದು, ದುಡ್ಡಿನ ಸಮಸ್ಯೆಯಿಂದನ, ಮೂರು ಸಲ ಕಂಪನಿ ಬಂದ ಮಾಡಿ ಮೂರು ಸಲ ಕಂಪನಿ ಚಾಲೂ ಮಾಡಿನಿ. ಎನ್ನುವ ಸುಮ್ಮಿತ್ರಮ್ಮನಿಗೆ ವೃತ್ತಿಕೌಶಲ್ಯವೊಂದನ್ನು ಬಿಟ್ಟರೆ ಬದುಕಿನ ಕೌಶಲ್ಯ, ವ್ಯವಹಾರಜ್ಞಾನ, ಇಲ್ಲದ್ದಕ್ಕಾಗಿ ಕಂಪನಿ ಮಾಲೀಕಳಾಗಿಯೂ ಸೋಲನ್ನು ಅನುಭವಿಸಿದ್ದಾರೆ. ಇವಳ ಧಾರಾಳತನದಿಂದಲೇ ಕಂಪನಿ ಮುಚ್ಚುವ ಪರಿಸ್ಥಿತಿ ಬಂದಿರಬಹುದು. ಪ್ರಮುಲ್ಲಾ, ಮಾಲಾ ಇಬ್ಬರು ಹೆಣ್ಣುಮಕ್ಕಳು. ಮಾಲಾ ಕೂಡಾ ರಂಗಭೂಮಿಯ ನಟಿಯಾಗಿ ಹೆಸರು ಮಾಡಿದ್ದಾಳೆ.[12]

---

[12] 29-11-2008 ರಂದು ಸೇಕಾರರ ಓಣಿ. ಹುಬ್ಬಳ್ಳಿಯಲ್ಲಿ ಸಂದರ್ಶನ ಮಾಡಿದ್ದು.

### 7) ಚಿಂದೋಡಿ ಲೀಲಾ:

ವೃತ್ತಿ ರಂಗಭೂಮಿಯ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಿ ನಿಂತು ರಂಗಭೂಮಿಯ ನಟಿಯಾಗಿ, ಕಂಪನಿಒಡತಿಯಾಗಿ ಸದಾಸುದ್ದಿಯಲ್ಲಿದ್ದವರು. ಕಲಾವಿದರ ಮನೆಯಲ್ಲಿ ಹುಟ್ಟಿದ ಲೀಲಮ್ಮನಿಗೆ ಕಲಾದೇವತೆ ಸಹಜವಾಗಿಯೇ ಒಲಿದಿದ್ದಳು. ಲೀಲಮ್ಮನವರ ತಂದೆ ಚಿಂದೋಡಿ ವೀರಪ್ಪನವರು. ಇವರಿಗೆ ಚಿಂದೋಡಿ ಎಂಬ ಹೆಸರು ಬರಬೇಕಾದರೆ ಅದರ ಹಿಂದೊಂದು ಕತೆಯಿದೆ. ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ವೀರಪ್ಪನವರ ಅದ್ಭುತ ಕಲಾಪ್ರತಿಭೆಯನ್ನು ಮೆಚ್ಚಿ ಚಿನ್ನದ ತೋಡೆ ತೊಡಿಸಿದ್ದರಂತೆ. ಅಂದಿನಿಂದ ಚಿನ್ನದ ತೋಡೆ ವೀರಪ್ಪ ಎಂಬ ಅನ್ವರ್ಥಕ ನಾಮದಿಂದ ಜನ ಕರೆಯತೊಡಗಿದರು. ಬರುಬರುತ್ತ, ಚಿನ್ನದ ತೋಡೆ ಚಿಂದೋಡಿಯಾಗಿ ರೂಢಿಯಲ್ಲಿ ಉಳಿದಿರಬಹುದು.

ಚಿಂದೋಡಿ ವೀರಪ್ಪನವರು ಪ್ರಖ್ಯಾತ ಸಂಗೀತಗಾರರಾಗಿದ್ದರು. ಆಗಿನ ಕಾಲದಲ್ಲಿ 'ಶರಣ ಶ್ರೇಷ್ಠಗಾನ ವಿಶಾರದ' ಎಂಬ ಬಿರುದನ್ನು ಪಡೆದಿದ್ದರು. 1928ರಲ್ಲಿಯೇ 'ಕರಿಬಸವೇಶ್ವರ ಸಂಗೀತ ನಾಟಕ ಮಂಡಳಿ'ಯನ್ನು ಕಟ್ಟಿದವರು. ಇವರ ಸಹಧರ್ಮಿಣಿ ಶಾಂತಮ್ಮ. ಈ ದಂಪತಿಗಳಿಗೆ ಎಂಟು ಜನ ಮಕ್ಕಳು. ಐದು ಜನ ಗಂಡು ಮಕ್ಕಳು, ಮೂರು ಜನ ಹೆಣ್ಣು ಮಕ್ಕಳು. ಈ ಮೂರು ಜನ ಹೆಣ್ಣು ಮಕ್ಕಳಲ್ಲಿ ಲೀಲಮ್ಮನವರು ಒಬ್ಬರು. ಇವರ ಮೊದಲಿನ ಹೆಸರು ವೀರಮ್ಮ. ಇವಳು ಐದು ವರ್ಷದ ಹಸುಳೆಯಾಗಿದ್ದಾಗ 'ಶಿವಯೋಗಿ ಸಿದ್ದರಾಮೇಶ್ವರ' ನಾಟಕದಲ್ಲಿ ಬಣ್ಣಹಚ್ಚಿದಳು. ಆವತ್ತಿನಿಂದ ಇವತ್ತಿನವರೆಗೂ ಬಣ್ಣದ ಬದುಕಿನಲ್ಲಿ ಕಾಮನಬಿಲ್ಲನ್ನು ಕಂಡವರು. 1943ರಲ್ಲಿ ಜನಿಸಿ 1948ರಲ್ಲಿ ರಂಗ ಪ್ರವೇಶಿಸಿದ ಈ ಲೀಲಮ್ಮ ಅದೆಷ್ಟೋ ಕಲಾರಸಿಕರ ಮನಸ್ಸನ್ನು ಕದ್ದವರು. "ಹಳ್ಳಿಹುಡುಗಿ" ನಾಟಕದ ಮೂಲಕ 60ರ ದಶಕದಲ್ಲಿ ಪ್ರೇಕ್ಷಕರ ಮನಸ್ಸಿಗೆ ಲಗ್ಗೆ ಇಟ್ಟವಳು. ಹುಬ್ಬಳ್ಳಿಯಲ್ಲದೆ ನಾಡಿನಾದ್ಯಂತ ಈ ನಾಟಕ ಜಯಭೇರಿಯನ್ನು ಭಾರಿಸಿತು.

ಹಳ್ಳಿ ಹುಡುಗಿ ನಾಟಕದ ಇವರ ಪಾತ್ರವನ್ನು ನೋಡಿ ಬಿ.ಆರ್. ಪಂತುಲು ಸಿನೇಮಾದಲ್ಲಿ ಇವರಿಗೆ ಅವಕಾಶವನ್ನು ಕೊಟ್ಟರು. (ತುಂಬಿದ ಕೊಡ, ಶರಪಂಜರ, ಭಲೇ ಹುಡುಗ, ಶ್ರೀಕೃಷ್ಣದೇವರಾಯ, ಕಿತ್ತೂರ ಚನ್ನಮ್ಮ) ಸುಮಾರು ಮೂವತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿದ ಲೀಲಮ್ಮನಿಗೆ, ಇಲ್ಲಿ ರಂಗಭೂಮಿಯ ತೃಪ್ತಿ ಸಿಗಲಿಲ್ಲವೇನೋ. ಮತ್ತೆ ರಂಗಭೂಮಿಯತ್ತ ಮುಖಮಾಡಿದರು.

ಇವರ ಇಡೀ ಕುಟುಂಬವೇ ರಂಗಭೂಮಿಗೆ ಟೊಂಕಕಟ್ಟಿ ನಿಂತಿತು. ಕಂಪನಿಯ ಒಡತಿಯಾಗಿ, ನಟಿಯಾಗಿ, ನಾಟಕ ಅಕಾಡಮಿ ಅಧ್ಯಕ್ಷಳಾಗಿ, ಬಹುಮುಖ ವ್ಯಕ್ತಿತ್ವವನ್ನು ಹೊಂದಿದ ಲೀಲಮ್ಮ

ಸಾಮಾಜಿಕ ಕ್ಷೇತ್ರದಲ್ಲಿಯೂ ಕಾಣಿಸಿಕೊಂಡದ್ದುಂಟು. ನಾಟಕ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಸಾಕಷ್ಟು ಅಭಿವೃದ್ಧಿಪರ ಕೆಲಸ ಮಾಡಿದ್ದಾರೆ. ನಾಟಕ ಕಂಪನಿಗಳಿಗೆ ಅನುದಾನ ಅಂತ ಪ್ರಾರಂಭವಾದದ್ದು ಇವರಿಂದ.

1980ರ ಅವಧಿಯಲ್ಲಿ ಕುಂದಾದ ನಾಡಾದ ಬೆಳಗಾಂವಿಗೆ ಬಂದಮೇಲೆ ಇವರ ಭಾಗ್ಯದ ಬಾಗಿಲು ತೆರೆಯಿತು. ಅರಸುವ ಬಳ್ಳಿ ಕಾಲ್ತೊಡಕಿದಂತೆ ಸದಾ ಚಟುವಟಿಕೆಯಿಂದಿರುವ ಲೀಲಮ್ಮ ಒಬ್ಬ ನಟಿಯಾಗಿ ಗುರುತಿಸಿಕೊಳ್ಳುವದರ ಜೊತೆಗೆ ವ್ಯವಹಾರ ನಿಪುಣೇ ಎಂಬುದನ್ನು ನಾಟಕ ಕಂಪನಿಯ ಒಡತಿಯಾಗಿ ಸಾಬೀತು ಪಡಿಸಿದಳು. 1979ರಲ್ಲಿಯೇ ಕ.ಬಿ.ಆರ್ ಡ್ರಾಮಾ ಕಂಪನಿ ಶಾಖೆಯ ನೇರ ಮಾಲೀಕಳಾದಳು. ಬೆಳಗಾಂವಿಗೆ ಬಂದಮೇಲೆ ಅದಕ್ಕೊಂದು ಚಾಲನೆಸಿಕ್ಕಿತು. ಒಬ್ಬ ಮಹಿಳೆಯಾಗಿ ಅದನ್ನು ಸವಾಲಾಗಿ ಸ್ವೀಕರಿಸಿದಳು. ಹೋರಾಟವೆ ಇವರ ಉಸಿರಾಗಿತ್ತು. ಹಲವು ಏಳುಬೀಳುಗಳ ನಡುವೆ ದಿಟ್ಟ ಹೆಜ್ಜೆ ಇಟ್ಟ ಲೀಲಮ್ಮನವರಿಗೆ ಇದ್ಯಾವುದೂ ಹೊಸದೆನಿಸಿರಲಿಕ್ಕಿಲ್ಲ. ಬಂದದ್ದೆಲ್ಲ ಬರಲಿ, ಅದನ್ನು ಎದುರಿಸುವ ಛಲವೊಂದಿರಲಿ ಎಂದು ತಮ್ಮ ಮನೆ ದೇವರಲ್ಲಿ ಬೇಡಿಕೊಂಡಿರಬಹುದು.

ಬೆಳಗಾಂವಿಯ ಶಿವಾನಂದ ಥೇಟರಿನಲ್ಲಿ ನಾಟಕಗಳನ್ನು ಆಡಲು ಶುರುಮಾಡಿದ್ರು ಎಂ.ಇ.ಎಸ್ ನ ಕಿಡಗೇಡಿಗಳು ಲೀಲಮ್ಮನವರಿಗೆ ಸಾಕಷ್ಟು ಮಾನಸಿಕ ಕಿರಿಕಿರಿಯನ್ನು ನೀಡಿದರು. ಥೇಟರ ಮೇಲೆ ಕಲ್ಲೆಸೆಯುವುದು, ಬಾಗಿಲು ಮುರಿಯುವುದು, ಆಶ್ಲೀಲ ಕರಪತ್ರಗಳನ್ನು ಹಂಚುವುದು ಮಾಡಿದರು. ಆದರೂ ಹೆದರದೆ 'ಛತ್ರಪತಿ ಶಿವಾಜಿ' ನಾಟಕ ಆಡಿದರು. "ಬೆಳಗಾವಿಯಲ್ಲಿ ಕನ್ನಡ ಏನದಾರೂ ನಿಂತಿದ್ದರೆ ಅದು ನನ್ನಿಂದಲೇ" ಎಂದು ಹೆಮ್ಮೆಯಿಂದ ಹೇಳುತ್ತಾರೆ. ಬೆಳಗಾವಿಯ ಜನರಿಂದ ಆದಷ್ಟು ತೊಂದರೆ ಮತ್ತೆ ಯಾರಿಂದಲೂ ಆಗಿಲ್ಲ. ಹಟಕ್ಕೆ ಬಿದ್ದು ಬೆಳಗಾಂವಿಯ ಶ್ಯಾಮ ಪ್ರಸಾದ ಮುಖರ್ಜಿ ರಸ್ತೆಯ ಕಪಿಲೇಶ್ವರ ದೇವಸ್ಥಾನದ ಬಳಿಯಿರುವ ಖುಲ್ಲಾ ಜಾಗೆಯನ್ನು ತಮಗೆ ಕೊಡಬೇಕೆಂದು ಲೀಲಮ್ಮನವರು ನಗರ ಸಭೆಯ ಆಡಳಿತಗಾರರನ್ನು ಕೇಳಿದ್ದರು. ಅದರಂತೆ ಲೀಜ್ ಮೇಲೆ ಆ ಜಾಗೆಯನ್ನು ಕೊಡಲಾಯಿತು. ಹಲವು ಹಿರಿಯ ಮುಖಂಡರ ಪ್ರೇರಣೆಯಿಂದ ಕೆ.ಬಿ.ಆರ್ ಡ್ರಾಮಾ ಥೇಟರ ಆ ಜಾಗದಲ್ಲಿ ತಲೆಎತ್ತಿತು. ಕನ್ನಡ ನಾಟಕಗಳ ಪ್ರದರ್ಶನ ಭರದಿಂದ ಸಾಗಿತು. ಅಲ್ಲಿನ ಮರಾಠಿಗರು ಸುಮ್ಮನೆ ಕೂಡಲಿಲ್ಲ ಕೋರ್ಟಗೆ ಹೋಗಿ ಲೀಲಮ್ಮನವರಿಗೆ ಮಾನಸಿಕ ಹಿಂಸೆಯನ್ನು ಕೊಡ ತೊಡಗಿದರು ಗಂಡೆದೆಯ ಲೀಲಾ ಬಗ್ಗಲೇ ಇಲ್ಲ. ರಾಜ್ಯ ಸರಕಾರ ನಗರಪಾಲಿಕೆಗೆ ನೀಡಿದ ಆ ಜಾಗವನ್ನು ಹಿಂದಕ್ಕೆ ತೆಗೆದುಕೊಂಡು 30 ವರ್ಷದ ವರೆಗೆ ಲೀಜ್ ಮೇಲೆ ಲೀಲಾ ಅವರಿಗೆ ಕೊಡಲಾಯಿತು. ಇವತ್ತು ಆ ಥೇಟರನ್ನು ಚಿಂದೋಡಿ ಲೀಲಾ ಥಿಯೇಟರ ಎಂದೇ ಕರೆಯುತ್ತಾರೆ.

ವೃತ್ತಿ ಕೌಶಲ್ಯದ ಜೊತೆಗೆ ವ್ಯವಹಾರ ಕೌಶಲ್ಯವೂ ಅವರಲ್ಲಿ ಇದ್ದುದರಿಂದ ಕಂಪನಿಯ ಒಡತಿಯಾಗಿ ಸಾಧನೆಯ ಶಿಖರಕ್ಕೇರಿದ್ದಾರೆ. 1995ರಲ್ಲಿ ಬೆಂಗಳೂರಿನ ಗುಬ್ಬಿ ರಂಗಮಂದಿರದಲ್ಲಿ 'ಪೋಲೀಸನ ಮಗಳು' ನಾಟಕ 1137 ಪ್ರಯೋಗಗಳನ್ನು ಕಂಡು ಗಿನ್ನಿಸ್ ದಾಖಲೆಯನ್ನು ಪಡೆಯುವ ನಿರೀಕ್ಷೆಯಲ್ಲಿದ್ದಾರೆ. ಲೀಲಮ್ಮ ಆ ನಾಟಕದಲ್ಲಿ ಪ್ರಮುಖ ಪಾತ್ರದಲ್ಲಿ ಮಿಂಚಿದ್ದಾರೆ. ಅವರ ಅದ್ಭುತ ನಟನೆಯೇ ನಾಟಕದ ಯಶಸ್ಸಿನ ಗುಟ್ಟು.

ರಂಗಭೂಮಿಯನ್ನೇ ತನ್ನ ತವರು ಮನೆಯನ್ನಾಗಿ ಮಾಡಿಕೊಂಡವಳು. ಸಹೋದರ ಶ್ರೀಕಂಠೇಶ, ಅಳಿಯ ಶಂಬುಲಿಂಗಪ್ಪ ಇವರುಗಳಿಗೆ ಬೆನ್ನೆಲುಬಾಗಿ ನಿಂತವಳು. ಪದ್ಮಶ್ರೀ ಪ್ರಶಸ್ತಿಯನ್ನು ಪಡೆದ ಮೊದಲ ಮಹಿಳಾ ಕಲಾವಿದೆಯೆಂಬ ಹೆಗ್ಗಳಿಕೆಗೂ ಪಾತ್ರಳಾದವಳು.

ರಂಗಭೂಮಿ, ರಂಗಭೂಮಿಯ ಕಲಾವಿದರ ಮಕ್ಕಳ ಕುರಿತು ಕಾಳಜಿ, ಕಕ್ಕುಲತೆ ಇರುವುದು ಕಂಡು ಬಂದದ್ದು ಹೀಗೆ.

1. ಕಲಾವಿದರ ಮಕ್ಕಳಿಗೆ ಒಳ್ಳೆಯ ಶಿಕ್ಷಣ ಸಿಗಬೇಕು. ಉನ್ನತ ಶಿಕ್ಷಣದಲ್ಲಿ ಅವರಿಗೆ ಫ್ರೀ ಸೀಟ್ ಕೊಡಬೇಕು.
2. 60 ವರ್ಷಕ್ಕೆ ಸಿಗುವ ಮಾಶಾಸನ 40 ವರ್ಷಕ್ಕೆ ಸಿಗಬೇಕು. ಅದು ಸಾವಿರ ರೂಪಾಯಿಯಿಂದ ಮೂರುಸಾವಿರವಾಗಬೇಕು.
3. ರಂಗಭೂಮಿಯ ಕಲಾವಿಧರಿಗೆ ವೃದ್ಧಾಶ್ರಮಗಳ ಅವಶ್ಯಕತೆಯಿದೆ ಎನ್ನುತ್ತಾರೆ ಲೀಲಮ್ಮ.

ಮಾಸೂರು ಕ್ಯಾಂಪನಲ್ಲಿದ್ದಾಗ ಹೇಮರಡ್ಡಿ ಮಲ್ಲಮ್ಮ ನಾಟಕ ಪ್ರದರ್ಶನ ನಡೆಯುತ್ತಿತ್ತು. ಮಲ್ಲಮ್ಮನ ಪಾತ್ರಧಾರಿಗೆ ಯಾವುದೋ ಕಾರಣದಿಂದ ಬರುವದಕ್ಕೆ ಆಗಿರಲಿಲ್ಲ. ಮುಂದೇನು ಮಾಡುವುದು? ಆ ಸಮಯದಲ್ಲಿ ಬೇರೆ ನಟಿಯನ್ನು ತರಬೇಕು ಇಲ್ಲಾ ಆಟ ಬಂದ ಮಾಡಬೇಕು. ಇದ್ಯಾವುದೂ ಆಗಲಿಲ್ಲ. ಅಲ್ಲಿ ನಡೆದದ್ದೆ ಬೇರೆ ಮಲ್ಲಮ್ಮನ ಪಾತ್ರ ಇಲ್ಲದೇ ಮನೆಯಲ್ಲಿ ಮಲ್ಲಮ್ಮ ಎಲ್ಲಿ ಎಂದು ಕೇಳಿದರೆ ಅಡವಿಗೆ ಹೋಗಿದ್ದಾಳೆಂದು, ಅಡವಿಯಲ್ಲಿ ಕೇಳಿದರೆ ಮನೆಯಲ್ಲಿದ್ದಾಳೆಂದು, ಹೇಳಿ ಮೂರು ತಾಸಿನ ನಾಟಕವನ್ನು ಮುಗಿಸಿದರು. ಹೆಣ್ಣಿನ ಬುದ್ದಿ ಮೊಣಕಾಲ ಕೆಳಗೆ ಎನ್ನುವವರು ಲೀಲಮ್ಮನಿಂದ ಪಾಠ ಕಲಿಯಬೇಕು. ಗಡಿ ಭಾಗದಲ್ಲಿ ಕನ್ನಡದ ಕಹಳೆಊದಿದ ಕನ್ನಡತಿ ಈ ಲೀಲಮ್ಮ ಶಿರಾಳಕೊಪ್ಪ ಕ್ಯಾಂಪಗೆ ಹೋಗಬೇಕಾದ ಸಂದರ್ಭದಲ್ಲಿ ಸೂಗಯ್ಯ ಎಂಬ ಸಾಲಗಾರ ಇವರ ಎಲ್ಲ ಸಾಮಾನುಗಳನ್ನು ತನ್ನವಶಕ್ಕೆ ತೆಗೆದುಕೊಂಡು, "ನನ್ನ ಸಾಲವನ್ನು ತೀರಿಸಿದ ಮೇಲೆನೇ ನಿಮಗೆ ನಾಟಕದ ಸಾಮಾನುಗಳನ್ನು ಹಿಂದಿರುಗಿಸುವುದು" ಎಂದಾಗ ಇವರಿಗೆ ಹೇಗಾಗಿರಬೇಕು? ಮತ್ತೆ ಯಾರಾದರೂ ಆಗಿದ್ದರೆ ಸಾಕಪ್ಪಾ ಈ ಬಣ್ಣದ ಬದುಕು ಎನ್ನಬಹುದಾಗಿತ್ತು. ಆ ಸಾಲಗಾರನಿಂದ ಪಾರಾಗಿ ಬಂದರೆ ಸಾಕಾಗಿತ್ತು. ಅದಕ್ಕಾಗಿ ಏನೆಲ್ಲಾ ಮಾಡಿ ಅವನ ಸಾಲತೀರಿಸಿ ಬೇರೆ ಊರಿನಲ್ಲಿ ಅಂದರೆ ಮತ್ತಿಗಟ್ಟಿ ಎಂಬ ಊರಲ್ಲಿ ಕ್ಯಾಂಪ ಹಾಕಿ ನಾಟಕ ಶುರುಮಾಡಿದರು.

ಒಬ್ಬ ಮಹಿಳೆಯಾಗಿ ಏನೆಲ್ಲಾ ತೊಂದರೆಗಳು, ಸಮಸ್ಯೆಗಳು ಬಂದಾಗ್ಯೂ ಸಹ ಕಂಪನಿಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದದ್ದು ಹೆಮ್ಮೆಯ ಸಂಗತಿ.[13] ರಂಗಭೂಮಿಗೆ ಲೀಲಮ್ಮನವರ ಕೊಡುಗೆ ಅಪಾರ.

## 8) ನ್ಯಾಮತಿ ಕಮಲವ್ವ :

"ಮಹೇಶ ನಾಟ್ಯಸಂಘ ನ್ಯಾಮತಿ" ಈ ಸಂಘದೊಡೆಯರಾದ ನ್ಯಾಮತಿ ಶಾಂತಪ್ಪನವರ ತಾರಾಪತ್ನಿ ನ್ಯಾಮತಿಕಮಲವ್ವ ತನ್ನ ಅದ್ಭುತ ನಟನೆಯಿಂದ ಉತ್ತರ ಕರ್ನಾಟಕದ ಮನೇಮಾತಾದವಳು. ಅಥಣಿಯ ಭೀಮಸೇನರಾವ ಅವರ ಭಾಗ್ಯೋದಯ ಮಂಡಳಿಯಲ್ಲಿ ನಟಿಸಿದವಳು. ಪೌರಾಣಿಕ ಹಾಗೂ ಭಕ್ತಿ ಪ್ರಧಾನವಾದಂತ ನಾಟಕಗಳಲ್ಲಿ ಅಭಿನಯಿಸಿ, ಕಂಪನಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟವಳು. ಒಬ್ಬ ಕಲಾವಿದೆಯೊಳಗೆ ಒಂದು ಕವಿ ಹೃದಯವೂ ಅಡಗಿತ್ತು ಎಂಬುದಕ್ಕೆ ಅವಳೇ ಬರೆದ 'ಮೂಲಾ ನಕ್ಷತ್ರ' ನಾಟಕವೇ ಸಾಕ್ಷಿ. ಅರವತ್ತರ ದಶಕದಲ್ಲಿ ಎರಡು ತಿಂಗಳು ಕಾಲ ಓಡಿತು, ಆದಾಗ್ಯೂ ಕಲಾವಿದರ ಬದುಕು ಹೀಗೆ ಇರುತ್ತದೆಂದು ಹೇಳಲು ಬರುವುದಿಲ್ಲ. ಸಂಸಾರದಲ್ಲಿ ಎಲ್ಲಿಯವರೆಗೆ ತಾಳಲಯ ಇರುವುದೋ ಅಲ್ಲಿಯತನಕ ಸುಶ್ರಾವ್ಯ ಹಾಡು ಹೊರಹೊಮ್ಮುತ್ತದೆ. ತಾಳತಪ್ಪಿದರೆ ಅಪಶೃತಿ ಶುರುವಾಗುತ್ತದೆ. ಇವರ ದಾಂಪತ್ಯದಲ್ಲಿ ಆದದ್ದು ಹೀಗೆನೆ, 1977ರಲ್ಲಿ ನ್ಯಾಮತಿ ಶಾಂತಪ್ಪನವರಿಗೂ ಪತ್ನಿ ಕಮಲವ್ವಳಿಗೂ ಕೌಟುಂಬಿಕ ಕಲಹವುಂಟಾಯ್ತು. ಕಮಲವ್ವ ತನ್ನಲ್ಲಿರುವ ಕಲೆಯನ್ನು ಬಾಡಲು ಅವಕಾಶಕೊಡದೆ, ತನ್ನ ವ್ಯವಹಾರ ಕುಶಲತೆಯಿಂದ ಒಂದು ಪ್ರತ್ಯೇಕ ಮಂಡಳಿಯನ್ನು ಕಟ್ಟುತ್ತಾಳೆ. ಒಂದು ವಿಶೇಷವೆಂದರೆ ಯಾವಾಗ ಇವಳ ಕಂಪನಿ ಪ್ರಾರಂಭವಾಗುತ್ತದೋ ಆವಾಗ ನ್ಯಾಮತಿ ಶಾಂತಪ್ಪನವರ ಕಂಪನಿ ಸೋಲಿನ ಹಾದಿಯನ್ನು ಹಿಡಿದು ಮುಚ್ಚಲ್ಪಟ್ಟಿತು. ಮುಂದೆ ಕೆಲವರ್ಷದ ತನಕ ಕಮಲವ್ವ ತನ್ನ ಕಂಪನಿಯನ್ನು ನಡೆಸಿಕೊಂಡು ಹೋಗುತ್ತಾಳೆ, ಆದರೆ ಕಂಪನಿಯ ಹೆಸರು, ಕಂಪನಿಯಿಂದ ಪ್ರದರ್ಶಿಸಲ್ಪಟ್ಟ ನಾಟಕಗಳು, ಕಂಪನಿಯಾವ್ಯಾವ ಊರಿಗೆ ಕ್ಯಾಂಪ ಹಾಕಿತ್ತು ಇವು ಯಾವುದರ ಕುರಿತು ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ಒಟ್ಟಾರೆ ಒಬ್ಬ ಮಹಿಳೆಯಾಗಿ ಕೇವಲ ತನ್ನನ್ನು ನಟನೆಗೆ ಮಾತ್ರ ಒಡ್ಡಿಕೊಳ್ಳದೆ, ಒಂದು ಕಂಪನಿಯ ಮಾಲಿಕಳಾಗಿ ಸಾರಥ್ಯವನ್ನು ವಹಿಸಿರುವುದು ಹೆಮ್ಮೆಯ ವಿಷಯ.

[13] 28-11-2008 ರಂದು ಬೆಂಗಳೂರಿನ ಗುಬ್ಬಿ ರಂಗಮಂದಿರದಲ್ಲಿ ಸಂದರ್ಶನ ಮಾಡಿದ್ದು.

## 9) ಪ್ರೇಮಾ ಗುಳೇದಗುಡ್ಡ:

ದಿನಾಂಕ:17-11-2010 ರಂದು ಗುಳೇದಗುಡ್ಡದಲ್ಲಿ ಗುಲಾಬಟಾಕೀಜ ಹತ್ತಿರವಿರುವ ಅವರ ಮನೆಯಲ್ಲಿ ಭೇಟಿ. ಸುಮಾರು ಹದಿನೈದು ವರ್ಷದ ಹಿಂದೆ ಬಿಜಾಪುರದಲ್ಲಿ ಎಚ್ಚರ ತಂಗಿ ಎಚ್ಚರ ನಾಟಕದಲ್ಲಿ ಗೋದಾವರಿಯ ಪಾತ್ರದಲ್ಲಿ ಅವರನ್ನು ನೋಡಿದ್ದೆ.

ಈಗಲೂ ಅದೇ ಗತ್ತು. ಅದೇ ದಿಟ್ಟತನ. ವಯಸ್ಸು ದೇಹಕ್ಕೆ ಮನಸ್ಸಿಗಲ್ಲ ಎಂಬುದನ್ನು ಅವರನ್ನು ನೋಡಿದಾಗ ಅನಿಸದೆ ಇರಲಿಲ್ಲ.

ಇವಳ ತಾಯಿ ಸುಲೋಚನಾ ಮೂಲತಃ ಸೋಲ್ಲಾಪೂರದವಳು. ಅವಳೊಬ್ಬ ತಮಾಷಾ ಕಲಾವಿದೆ. ಕರ್ನಾಟಕದ ಗುಳೇದಗುಡ್ಡಕ್ಕೆ ತಮಾಷಾ ಪ್ರದರ್ಶನಕ್ಕೆಂದು ಬಂದಾಗ ಆ ಊರಿನ ಚಿತ್ರಮಂದಿರದ ಮಾಲಿಕರಾದ ಬಸಪ್ಪಾ ಕರೀಗೂಳನ್ನನವರ ಕಣ್ಣು, ಈ ಪ್ರಖ್ಯಾತ ನಟಿ ಸುಲೋಚನಾಳ ಮೇಲೆ ಬಿತ್ತು. ಅವಳನ್ನು ಪತ್ನಿಯನ್ನಾಗಿ ಸ್ವೀಕರಿಸುತ್ತಾರೆ. ಆಗ ಸುಲೋಚನಾ ಶಾಶ್ವತವಾಗಿ ಗುಳೇದಗುಡ್ಡದಲ್ಲಿಯೆ ನೆಲೆಸುತ್ತಾಳೆ. ಮರಾಠಿ ಕನ್ನಡದ ಬೆಸುಗೆಯ ಕುಡಿ ಈ ಪ್ರೇಮಾ ಗುಳೇದಗುಡ್ಡ.

ಸುಲೋಚನಾ ಬಸಪ್ಪಾಕರಿಗೂಳನ್ನವರ ದಂಪತಿಗಳಿಗೆ ಒಟ್ಟು ಆರು ಜನ ಮಕ್ಕಳು. ನಾಲ್ಕು ಮಂದಿ ಹೆಣ್ಣುಮಕ್ಕಳು ಇಬ್ಬರು ಗಂಡು ಮಕ್ಕಳು.

ನಾಲ್ಕೂ ಮಂದಿ ಹೆಣ್ಣುಮಕ್ಕಳು ಬಣ್ಣದ ಬದುಕನ್ನು ನಂಬಿ ಬದುಕಿದವರು. ಅವರಲ್ಲಿ ಈ ಪ್ರೇಮಾಗೆ ಅವಳ ತಾಯಿ ಸುಲೋಚನಾನೆ ಗುರು. ಅವಳ ಗರಡಿಯಲ್ಲಿ ಇವಳು ಒಳ್ಳೇ ಡ್ಯಾನ್ಸರ ಕೂಡಾ ಆದಳು.

ಆರು ಮಕ್ಕಳು, ದೊಡ್ಡಸಂಸಾರ, ಬಸಪ್ಪನವರಿಗೂ ಸಂಸಾರದ ಬಗ್ಗೆ ಏನೋ ವೈರಾಗ್ಯ ಮೂಡಿತು. ಸಮಸ್ಯೆಗಳು ದುತ್ತೆಂದು ಎದುರಾದವು. ಆಗ ಅನಿವಾರ್ಯವಾಗಿ ಈ ಪ್ರೇಮಾ ರಂಗ ಭೂಮಿಯನ್ನು ಆಶ್ರಯಿಸಬೇಕಾಯಿತು. ತಾಯಿಯಿಂದ ರಕ್ತಗತವಾಗಿ ಬಂದಂತ ಕಲೆ ಅವಳಲ್ಲಿ ಗುಪ್ತಗಾಮಿನಿಯಾಗಿತ್ತು. ಅದೂ ಈಗ ಒಂದು ಮೂರ್ತರೂಪವನ್ನು ಪಡೆದುಕೊಳ್ಳುವ ಹಂತಕ್ಕೆ ಬಂದಿತ್ತು. ಪ್ರೇಮಾ ಹತ್ತು ವರ್ಷದವಳಿದ್ದಾಗಲೇನೆ ಈ ಕ್ಷೇತ್ರಕ್ಕೆ ಕಾಲಿಟ್ಟಳು. ಅವಳ ಮೊದಲ ವೃತ್ತಿ ಬದುಕು ಪ್ರಾರಂಭವಾದುದು ಹವ್ಯಾಸಿ ತಂಡದಿಂದ. ಇವಳ ಮೊದಲನಾಟಕ 'ಬೆಳದಿಂಗಳು' ಹರಿಣಿಪಾತ್ರ, ಹೀಗೆ ಸುಮಾರು ಹದಿನೈದು ವರ್ಷ ಇವಳು ಹವ್ಯಾಸಿ ಕಲಾವಿದೆಯಾಗಿ ಮುಂದುವರೆದಳು. ಹಾಗೂ ಹೀಗೂ ಎಸ್.ಎಸ್.ಎಲ್.ಸಿ. ವರೆಗೊ ಶಿಕ್ಷಣವನ್ನು ಪೂರೈಸಿದಳು.

ಅಭಿನಯದ ಕೊರತೆ ಇವರಿಗಿರಲಿಲ್ಲ ಕಂಪನಿ ನಾಟಕಗಳಲ್ಲಿಯೂ ಇವರಿಗೆ ಅವಕಾಶಗಳು ಹುಡುಕಿಕೊಂಡು ಬಂದವು. ಯಂಕಂಚಿ. ಜೋಶಿ. ರಾಮರಾವದೇಸಾಯಿಯವರ ಕಂಪನಿಗಳಲ್ಲಿ

ನಟಿಸಿದಳು. 80ರ ದಶಕದಲ್ಲಿ ರಾಯಚೂರ ಜಿಲ್ಲೆಯ ಆಶಾಪೂರದಲ್ಲಿ ಸೂಡಿ ಶೇಖರ ಅವರ ಕಂಪನಿ ಕ್ಯಾಂಪ ಹಾಕಿತ್ತು. ಗೌಡ್ರಗದ್ಲ ನಾಟಕದಲ್ಲಿ 'ಮಧುರ' ಎಂಬ ಲಂಪಟ ಹೆಣ್ಣಿನ ಪಾತ್ರ ಮಾಡಿ ಎಲ್ಲರ ಮೆಚ್ಚುಗೆಗೆ ಪಾತ್ರಳಾದಳು. ಇವಳೊಬ್ಬ ಕನಸುಗಾರ್ತಿ. ಇನ್ನೂ ಇನ್ನೂ ಎತ್ತರಕ್ಕೆ ಬೆಳೆಯಬೇಕೆಂಬ ಅಧಮ್ಯ ಆಶೆ ಈ ಬಣ್ಣದ ಜಿಂಕೆಯದು, ನಟಿಯಾದರೆ ಸಾಲದು ತಾನೊಂದು ಕಂಪನಿಯ ಒಡತಿಯಾಗಬೇಕೆಂಬ ಕನಸು ಕಂಡವಳು. 1982ರಲ್ಲಿ ಆ ಕನಸು ನನಸಾಯ್ತು. ಇವಳ ಬಯಕೆಗಳನ್ನು ಅರಿತುಕೊಂಡು ಅವುಗಳಿಗೆ ನೀರೆರೆದು ಬೆಳೆಸಿದವರು ಆಶಾಪುರ ಗೌಡರೆಂದೆ ಪ್ರಸಿದ್ಧರಾದ ಬಸವರಾಜ ಪಾಟೀಲರು. ಮೂಲತಃ ಇವರು ರಾಯಚೂರು ಜಿಲ್ಲೆಯ ಆಶಾಪೂರದವರು. ಇವಳು ನಾಟಕದಲ್ಲಷ್ಟೆ ಅಲ್ಲ ನಿಜ ಜೀವನದಲ್ಲಿಯೂ ನಾಯಕಿಯಾಗಿಯೇ ಬದುಕಿದವಳು. ಅಂದುಕೊಂಡಿದ್ದು ಆಗದೇ ಹೋದರೆ ಅವಳಿಗೆ ಸಮಾಧಾನವೇ ಇಲ್ಲ, ಆಕೆಯ ಮನಸ್ಸನ್ನು ಚನ್ನಾಗಿ ಅರಿತು ಕೊಂಡಂತಹ ಆಶಾಪೂರ ಗೌಡರು, 1982ರಲ್ಲಿ "ಶ್ರೀ ಸಂಗಮೇಶ್ವರ ನಾಟ್ಯಸಂಘ ಆಶಾಪೂರ" ಎಂಬ ಶಾಖೆಯನ್ನು ಹುಟ್ಟುಹಾಕಿದರು. 90ರ ದಶಕದಲ್ಲಿ ಮತ್ತೊಂದು ಹೊಸ ಕಂಪನಿ ಪ್ರಾರಂಭವಾಯ್ತು. ಮಾಂಡ್ರೆ ವಿರಚಿತ 'ತಾಳಿಯ ತಕರಾರು', 'ಮಡದಿಕೊಟ್ಟಮಾತು', 'ದೇಸಾಯರ ದರ್ಬಾರ' ಹಲವಾರು ನಾಟಕಗಳು ಅದ್ದೂರಿ ಪ್ರದರ್ಶನ ಕಂಡವು, ರಾಯಚೂರು, ಗುಲ್ಬರ್ಗ, ಚಿಂಚೂಳಿ, ಹೀಗೆ ಉತ್ತರ ಕರ್ನಾಟಕದಾದ್ಯಂತ ಸಂಚರಿಸಿ ಕಂಪನಿ ಜಯಭೇರಿ ಬಾರಿಸಿತು. ಪ್ರೇಮಾಳ ಅಧ್ಬುತ ಅಭಿನಯವೇ ಕಂಪನಿ ಉತ್ತುಂಗಕ್ಕೇರಲು ಕಾರಣವಾಯಿತು.

ಆಶಾಪೂರ ಗೌಡ್ರ ಅಗಲಿಕೆಯಿಂದ ಕಂಪನಿ ಬೀಳುವ ಸ್ಥಿತಿಯಲ್ಲಿತ್ತು. ಅದನ್ನು ಮತ್ತೆ ಎಬ್ಬಿಸಿ ನಿಲ್ಲಿಸುವ ಛಲ ಪ್ರೇಮಾಳದು. 2007ರಿಂದ ಕಂಪನಿಯ ಒಡತಿಯಾಗಿ, ಒಬ್ಬ ನಟಿಯಾಗಿ ಕಲಾವಿದರ ಕುಂದು ಕೊರತೆಗಳಿಗೆ ಸ್ಪಂದಿಸುತ್ತ ಮುಂದೆ ಸಾಗಿದ್ದಾಳೆ. ನಾಯಕತ್ವದ ಗುಣ, ಸಂಘಟನಾ ಮನೋಭಾವದ ಹೆಣ್ಮಗಳು ಪ್ರೇಮಾ. ದಿನದಿಂದ ದಿನಕ್ಕೆ ಕಲಾವಿದರ ಸಮಸ್ಯೆಗಳು ಹೆಚ್ಚುತ್ತಲಿವೆ. ಒಬ್ಬರನ್ನು ಹಿಡಿಯುವಷ್ಟರಲ್ಲಿ ಇನ್ನೊಬ್ಬ ಕಲಾವಿದ ಹೋಗಿರುತ್ತಾನೆ. ಇಂಥ ಕಲಾವಿದರನ್ನು ಕಟ್ಟಿಕೊಂಡು ಇವತ್ತಿನ ತುಟ್ಟಿದಿನದಲ್ಲಿ ಕಂಪನಿ ನಡೆಸುವುದು ಅಷ್ಟು ಸುಲಭದ ಕೆಲಸವಲ್ಲ ಎನ್ನುತ್ತಾರೆ ಪ್ರೇಮಾ.

ಒಬ್ಬ ಯಜಮಾನನಾದವನು ಒಂದು ಮನೆಯನ್ನು ನಡೆಸಿಕೊಂಡು ಹೋಗುವುದು ಕಷ್ಟವಾಗಿರುವಾಗ, ಇನ್ನೂ ಇಪ್ಪತ್ತು ಮೂವತ್ತು ಜನರನ್ನು ಸಲಹುವುದು ಧೈರ್ಯ ಇದ್ದವರಿಗೆ ಮಾತ್ರ ಸಾಧ್ಯ

ಕಂಪನಿ ನಡೆಸುವ ಉತ್ಸಾಹವಿದ್ದರೂ. ಜೊತೆಗೆ ಕಲಾವಿದರ ಕಿರಿಕಿರಿಯೂ ಇದೆ. ಕಲೆಯನ್ನು ಉಳಿಸಬೇಕು. ಕಲಾವಿದರಿಗೆ ಒಂದು ಅನ್ನದ ದಾರಿ ಮಾಡಿಕೊಡಬೇಕು ಎಂಬ ಮಾತು ಎಲ್ಲಿ ಹುಸಿಯಾಗುವುದೋ ಎಂಬ ನೋವು ಈ ನಟಿಯನ್ನು ಕಾಡುತ್ತಲಿದೆ.

ಮಾಲೀಕರಲ್ಲಿಯೂ ಸ್ಪರ್ಧಾ ಮನೋಭಾವ ಬೆಳೆದಿದೆ. ಯಾವನಾದರೂ ಒಬ್ಬ ಒಳ್ಳೇಯ ಕಲಾವಿದನಿದ್ದರೆ ಅವನು ಇನ್ನೂರು ಕೊಟ್ಟರೆ ನಾನು ಮುನ್ನೂರು ಕೊಡುತ್ತೇನೆ ಎನ್ನುವವರೂ ಇದ್ದಾರೆ.

ಹೀಗೆ ಸಮಸ್ಯೆಗಳ ನಡುವೆಯೂ ಪ್ರೇಮಾ ಎದೆಗುಂದದೆ ಕಂಪನಿ ನಡೆಸಿಕೊಂಡು ಹೊರಟಿದ್ದಾಳೆ. ಮಗಳು ಸೀಮಾ ಅಳಿಯ ಅಶೋಕ ಮಾಳಗಿ (ಇಂಜನೀಯರ) ಇವರೊಂದಿಗೆ ಸಂತೃಪ್ತ ಬದುಕನ್ನು ಸಾಗಿಸುತ್ತಿದ್ದಾಳೆ.

2005ರಲ್ಲಿ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದಿದ್ದಾರೆ. 2008ರಿಂದ ನಾಟಕ ಅಕಾಡಮಿ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಲಿದ್ದಾರೆ.[14]

### 10) ಮಾಲತಿ ಸುಧೀರ:

ದಿನಾಂಕ:8–7–09 ರಂದು ಬೆಂಗಳೂರಿನ ಶಂಕರ ಮಠದ ಹತ್ತಿರವಿರುವ ಮಾಲತಿ ಸುಧೀರ ಅವರ ಮನೆಗೆ ಹೋದೆ. ಸ್ಥೂಲಕಾಯದ ಮುದ್ದುಮುಖದ ಮಾಲತಿಯವರು ಕವಿ ಬಸವರಾಜ ಪಂಚಗಲ್ ಹಾಗೂ ನಟ ಶ್ರೀಧರ ಹೆಗ್ಡೆಯವರೊಂದಿಗೆ ಯಾವದೋ ವಿಷಯದ ಕುರಿತು ಚರ್ಚೆಯಲ್ಲಿ ನಿರತರಾಗಿದ್ದರು. ಅವರಲ್ಲಿ ನಾನೂ ಒಬ್ಬಳಾದೇ. ಕಂಪನಿಯ ಒಡತಿಯೆಂಬ ಯಾವ ಅಹಂಮಿಕೆ ಅವರಲ್ಲಿ ನನಗೆ ಕಾಣಿಸಲಿಲ್ಲ. ಸರಳ ಸಜ್ಜನಿಕೆಯ ಒಂದು ಮಾತೃ ಹೃದಯವನ್ನು ಕಂಡೆ.

ಆಂಧ್ರದ ಅನಂತಪುರದಲ್ಲಿ ಜನಿಸಿದ ಮಾಲತಿ, ಇವರ ತಂದೆ ಕೆ.ಎಸ್.ಆರ್.ಟಿ.ಸಿಯಲ್ಲಿ ನೌಕರಿ ಮಾಡುತ್ತಿದ್ದರು. ಸರಕಾರಿ ಕೆಲಸ ಎಂದ ಮೇಲೆ ವರ್ಗ ಆದ ಕಡೆಗೆಲ್ಲ ಹೋಗಲೇಬೇಕು ಹಾಗಾಗಿ ಹುಬ್ಬಳ್ಳಿಗೆ ಬಂದರು. ಹುಬ್ಬಳ್ಳಿಯ ವಿಕಾಸ ನಗರದಲ್ಲಿ ಜನೇವರಿ 26 ಗಣರಾಜ್ಯೋತ್ಸವವನ್ನು ಬಹಳ ವಿಜೃಂಭಣೆಯಿಂದ ಮಾಡುತ್ತಿದ್ದರು. ಓರಗೆಯ ಗೆಳತಿಯರು ಓಣಿಯ ಜನ ನೀನೂ ಒಂದು ಏನಾದರೂ ಕಾರ್‍ಯಕ್ರಮ ಕೊಡು ಎಂದು ದುಂಬಾಲು ಬಿದ್ದರು. ಮನಸ್ಸು ಮುರಿಯದೆ ಬಂಗಾರದ ಮನುಷ್ಯ ಚಿತ್ರದ ಬಾಳ ಬಂಗಾರ ನೀನು ಹಾಡಿಗೆ ಡ್ಯಾನ್ಸ ಮಾಡಿದಳು. ಆ ಡ್ಯಾನ್ಸೆ ಇವಳ ಮುಂದಿನ ಭವಿಷ್ಯಕ್ಕೆ ನಾಂದಿಯಾಯಿತೇನೋ. ಪ್ರೇಕ್ಷಕರ ಒತ್ತಾಯದ ಮೇರೆಗೆ ಒಂದೇ ದಿನ 5 ಡ್ಯಾನ್ಸಗಳನ್ನು ಮಾಡಿ ಚಪ್ಪಾಳೆ ಗಿಟ್ಟಿಸಿಕೊಂಡಳು. ಇದು ನಡೆದದ್ದು 1976ರಲ್ಲಿ. "ಆಗಿನ ಕಾಲದಲ್ಲಿ ನನಗೆ 200

---

[14] 17–11–2010 ರಂದು ಗುಳೇದಗುಡ್ಡದಲ್ಲಿ ಸಂದರ್ಶನ ಮಾಡಿದ್ದು.

ರೂಪಾಯಿ ಆಹೇರಿ ಬಂದು, ಊರಲ್ಲೆಲ್ಲಾ ಪ್ರಚಾರವಾಯ್ತು." ಇದನ್ನು ಹೇಳುವಾಗ ಮಾಲತಿ ಅವರು ನಾಲ್ಕುದಶಕ ಹಿಂದಕ್ಕೆ ಸರಿದಿದ್ದರು. ಆ ದಿನವನ್ನು ಅವರು ಹೇಗೆ ತಾನೆ ಮರೆಯಲು ಸಾಧ್ಯ? ಆ ಇನ್ನೂರು ರೂಪಾಯಿಯಲ್ಲಿ ಮೊದಲು ಹತ್ತು ರೂಪಾಯಿ ಕೊಟ್ಟು ಚಪ್ಪಲಿಯನ್ನು ಕೊಂಡು ಕೊಂಡೆ ಎಂದು ಹೇಳುವಾಗ ಅವರ ಮುಖದಲ್ಲಿನ ಸಂಭ್ರಮ ಮರೆಯುವಂತಿಲ್ಲ. ಅದರ ಮರುದಿನವೇ "ಕವಳೇಕರ ಮ್ಯೂಜಿಕಲ್ ಪಾರ್ಟಿ" ಯವರು ಕರೆದುಕೊಂಡು ಹೋದರು. ಪ್ರತಿಭೆ ಇದ್ದರೆ ಅವಕಾಶಗಳಿಗೆ ಬರವಿಲ್ಲ ಎಂಬುದು ಸುಳ್ಳಲ್ಲ.

1977ರಲ್ಲಿ ಹುಬ್ಬಳ್ಳಿಗೆ "ಮಿನುಗುತಾರೆ ಮಿತ್ರ ಮಂಡಳಿ ಕಂಪನಿ ಬಂದಿತ್ತು." ಮನೆಮಗಳು ನಾಟಕವನ್ನು ಆಡುತ್ತಿದ್ದರು. ಆ ನಾಟಕದಲ್ಲಿ ಕಲ್ಪನಾಳದು ಪ್ರಮುಖಪಾತ್ರ, ಸುಧೀರ ಅವರದು ಖಳನಾಯಕನ ಪಾತ್ರ, ಅದೇ ನಾಟಕದಲ್ಲಿ ಈ ಮಾಲತಿ 'ಏರಿ ಮೇಲೆ ಏರಿ ಮ್ಯಾಲೇ ಕೆಳಗೆ ಹಾರಿ' ಈ ಹಾಡಿಗೆ ಡ್ಯಾನ್ಸ ಮಾಡುತ್ತಿದ್ದಳು. ಈ ಮಾಲತಿ ರಂಗಭೂಮಿಗೆ ಪಾದಾರ್ಪಣೆ ಮಾಡಿದ್ದು ಈ ನಾಟಕದಿಂದಲೇ. ಅದೂ ಒಬ್ಬ ಡ್ಯಾನ್ಸರ ಆಗಿ. ಕಲಾವಿದರಾಗುವುದು ಪೂರ್ವಜನ್ಮದ ಪುಣ್ಯ ಎಂದು ಇವರ ಗುರುವಾದ ಕಲ್ಪನಾ ಅವರು ಹೇಳುತ್ತಿದ್ದರಂತೆ. ನೃತ್ಯವೇ ಒಂದು ಸ್ಫೂರ್ತಿಯಾಗಿತ್ತು. ಸದಾ ನೃತ್ಯದ ಗುಂಗಿನಲ್ಲಿಯೇ ಇರುತ್ತಿದ್ದ ಇವಳು ಪಿ.ಯು.ಸಿ. 2ನೇ ವರ್ಷಕ್ಕೆ ಓದು ನಿಲ್ಲಿಸಬೇಕಾಗಿಬಂತು.

ಜಗನ್ಮೋಹನ ಪ್ಯಾಲೇಸದಲ್ಲಿ ಕೃಷ್ಣರಾಜ್ ಒಡೆಯರು, ಇವಳ ನೃತ್ಯವನ್ನು ನೋಡಿ ಮೆಚ್ಚಿಕೊಂಡದ್ದುಂಟು ನಂತರ 'ಮನೆ ಮಗಳು' ನಾಟಕದಲ್ಲಿ ರಾಜಶ್ರೀ ಎಂಬ ಹಾಸ್ಯ ಪಾತ್ರ ಮಾಡಿದಳು. ಒಳ್ಳೇಯ ಕಲಾವಿದೆ ಎಂಬ ಹೆಸರೂ ಪಡೆದಳು. ಚಿತ್ರನಟ ಸುಧೀರ ಅವರು ಅದೇ ಕಂಪನಿಯಲ್ಲಿ ಇದ್ದರಲ್ಲ! ಹೀಗಾಗಿ ಪರಿಚಯ ಸ್ನೇಹಕ್ಕೆ ತಿರುಗಿ ಸ್ನೇಹ ಮದುವೆಯಲ್ಲಿ ಮುಕ್ತಾಯವಾಯ್ತು. ಇವರಿಬ್ಬರ ಮದುವೆಯನ್ನು ಮಾಡಿಸಿದವರೇ ಚಿತ್ರನಟಿ ಕಲ್ಪನಾ.

ಸುಧೀರ ಅವರ ಪ್ರೀತಿಯ ಸೆರೆಯಲ್ಲಿ ಬಂದಿತಳಾದ ಮಾಲತಿ, ರಂಗಭೂಮಿಯಿಂದ ನೇಪಥ್ಯಕ್ಕೆ ಸರಿದರು. ಒಂದು ಮಗುವಿನ ತಾಯಿಯಾಗುವವರೆಗೆ. ಅದಾದಮೇಲೆ ಅವಳೊಳಗಿನ ಸುಪ್ತ ಪ್ರತಿಭೆ ಅವಳನ್ನು ಸುಮ್ಮನೆ ಬಿಡಲಿಲ್ಲ. ಎಸ್. ಬಸವರಾಜ ಅವರ ಗುಡಗೇರಿ ಕಂಪನಿಯಲ್ಲಿ ಕಲಿಯುಗದ ರಾಮ ನಾಟಕದಲ್ಲಿ ಸುಧಾಳ ಪಾತ್ರ ಮಾಡುತ್ತಿದ್ದಳಂತೆ. ಸ್ವತಃ ಗುಡಗೇರಿ ಮಾಲಕರೇ ಹೇಳುತ್ತಿದ್ದರಂತೆ. ಮಾಲತಿ ಮಾಡಿದ ಈ ಪಾತ್ರ ನಂತರ ಬಂದವರು ಯಾರೂ ಮಾಡಲಿಲ್ಲವೆಂದು. ಗೌಡ್ರಗದ್ಲ, ಸಿಂಧೂರ ಲಕ್ಷ್ಮಣ, ನಾಟಕದಲ್ಲಿ ಸುಧೀರ ಅವರ ಜೊತೆಗೆ ಪಾತ್ರ ಮಾಡುತ್ತಿದ್ದರೆ, ಪಾಯಸಕ್ಕೆ ತುಪ್ಪದ ಹಾಗೆ. 1998ರಲ್ಲಿ ಸುಧೀರ ಅವರು "ಕರ್ನಾಟಕ ಕಲಾವೈಭವ ಸಂಘ" ಎಂಬ ಕಂಪನಿಯನ್ನು ಹುಟ್ಟುಹಾಕಿದರು. ಅವರು ಕಂಪನಿ ಕಟ್ಟುವಾಗ ಮಾಲತಿಯವರಿಗೆ ಅಸಮಾಧಾನವಿತ್ತು. ಕಾಂತಾ ಸುಸ್ಮಿತಳಾಗಿ

ಸುಧೀರವರಿಗೆ ಹೆಗಲಿಗೆ ಹೆಗಲು ಕೊಡಬೇಕಾಗಿತ್ತು. ಸುಧೀರ ಇವರ ಮಾತಿಗೆ ಕಿವಿಗೊಡದೆ ಕಂಪನಿ ಕಟ್ಟಿದ್ದರು. ಎರಡು ವರ್ಷ ಕಂಪನಿ ಚನ್ನಾಗಿಯೇ ನಡೆದಿತ್ತು. ಆದರೆ 2000ದಲ್ಲಿ ಅವರ ಅನುಪಸ್ಥಿತಿಯಲ್ಲಿ ಕಂಪನಿ ಕ್ಲೋಜ ಮಾಡುವ ಪ್ರಸಂಗ ಎದುರಾಯ್ತು. ಆದರೆ ಕಂಪನಿ ಬಂದ್ ಆಗಲಿಲ್ಲ ಛಲಗಾರ್ತಿ ಮಾಲತಿ, ಸುಧೀರ ಅವರ ಕನಸಿನ ಕೂಸನ್ನು ಇವತ್ತಿಗೂ ಜೋಪಾನವಾಗಿ ಮುಂದುವರೆಸಿಕೊಂಡು ಹೊರಟಿದ್ದಾರೆ.

ಕೀಶೋರ ಸುಧೀರ, ತರುಣ ಸುಧೀರ ಇಬ್ಬರು ಮಕ್ಕಳು. ಸುಧೀರ ಗಳಿಸಿದ ಹಣ, ಇಷ್ಟೆಲ್ಲ ಇರುವಾಗ ಮಾಲತಿ ಹಾಯಾಗಿ ರಾಣಿಯ ಹಾಗೆ ಇರಬಹುದಾಗಿತ್ತು. ಆದರೆ ಸುಧೀರ ಅವರು ಹೋದಮೇಲೆ ಅವರ ಆಲೋಚನಾ ಕ್ರಮವೇ ಬೇರೆಯಾಯ್ತು. ರಂಗಭೂಮಿಯ ಒಬ್ಬ ನಟಿಯಾಗಿ, ಸುಧೀರ ಅವರ ಮೇಲಿನ ಪ್ರೀತಿ ಅಭಿಮಾನಕ್ಕಾಗಿ ನಿಂತು ಹೋಗುವ ಕಂಪನಿಗೆ ಮರು ಜೀವ ತುಂಬಿದರು. 2000ದಲ್ಲಿ ಮಾಲತಿ ಸಂಘದ ಒಡತಿಯಾದರು. ಸುಧೀರ ಅವರು ಹೋದಮೇಲೆ ಕಂಪನಿ ತಿಪಟೂರಿನಿಂದ ತೀರ್ಥಹಳ್ಳಿಗೆ ಕ್ಯಾಂಪಹಾಕಲಾಯ್ತು. ಅಲ್ಲಿ ಅನ್ನಕ್ಕೂ ಗತಿಯಿಲ್ಲದೆ ಪರದಾಡಬೇಕಾಯ್ತು. ಊರಿನ ಜನ ಇವರಿಗೆ ಸಹಾಯ ಮಾಡಿದರು. ಈ ಸಮಯದಲ್ಲಿ ಮಾಲತಿ ಹೋದ್ಲ ಹಾಲಪ್ಪನವರನ್ನು ನೆನೆಸುತ್ತಾರೆ. ಅವರನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಹತ್ತು ಸಾವಿರ ರೂಪಾಯಿ ಉಡಿಯಲ್ಲಿ ಹಾಕಿದರಂತೆ. ಎಕ್ಸೈಜ್ ಇನ್ಸಪೆಕ್ಟರು ಒಬ್ಬರು ಹತ್ತುಸಾವಿರಕೊಟ್ಟರು. ಕಲಾವಿದರನ್ನು ಗೌರವದಿಂದ ನೋಡುವ ಅವರ ಕಷ್ಟಕ್ಕೆ ಒದಗುವ ಹೃದಯವಂತರೂ ಇದ್ದಾರೆ ಎಂಬುದು ಮನವರಿಕೆಯಾಗುತ್ತದೆ. ಹೀಗೆ ಊರಿನ ಕಲಾಭಿಮಾನಿಗಳು ಕೊಟ್ಟ ಹಣದ ಮೊತ್ತ ಒಂದು ಲಕ್ಷ ಐವತ್ತು ಸಾವಿರ ಕೂಡಿತಂತೆ ಎಂದು ಹೇಳುವಾಗ ಕಣ್ಣಂಚಿನಲ್ಲಿ ಹಸಿಯಾಗಿತ್ತು. ಮಧ್ಯಮಧ್ಯದಲ್ಲಿ ಕವಿ ಪಂಚಗಲ್ ಅವರನ್ನು ಅಲ್ಲವೇ? ಕವಿಗಳೇ ಎಂದು ಕೇಳುತ್ತಿದ್ದರು. ಹೌದು ಎನ್ನುವಂತೆ ಅವರು ತಲೆಅಲ್ಲಾಡಿಸುತ್ತಿದ್ದರು. ಆ ಹಣವನ್ನು ತೀರಿಸುವದಕ್ಕಾಗಿ ಬ್ಯಾಂಕಿನಲ್ಲಿ ಒಡವೆಗಳನ್ನು ಅಡ ಇಟ್ಟಿದ್ದಾರೆಂದು ಕವಿಗಳೇ ಹೇಳಿದರು.

ಒಂದು ಕಂಪನಿಯ ಉಳಿವಿಗಾಗಿ, ರಂಗಭೂಮಿ ನಶಿಸುತ್ತಿರುವ ಈ ಕಾಲದಲ್ಲಿ 9 ವರ್ಷದಿಂದ ಆ ಕಂಪನಿಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ವೃತ್ತಿ ರಂಗಭೂಮಿಗೆ ಇದೊಂದು ಕೊಡುಗೆಯಲ್ಲದೆ ಮತ್ತೇನು?

ಅದೇ ಕಂಪನಿ ತೀರ್ಥಹಳ್ಳಿಯಿಂದ ನ್ಯಾಮತಿಗೆ ಬಂದ ಮೇಲೆ 'ಎಚ್ಚರ ತಂಗಿ ಎಚ್ಚರ' ನಾಟಕ ತಿಂಗಳಿಗೆ ನಾಲ್ಕುಲಕ್ಷ ಕಲೆಕ್ಷನ ಮಾಡಿತಂತೆ.

ಕಂಪನಿಯ ಕಲಾವಿದರನ್ನು ಮಕ್ಕಳಂತೆ ನೋಡಿಕೊಳ್ಳುವ ಮನಸ್ಸು ಇವರದು. ಒಂದು ಕಟ್ಟಡಕ್ಕೆ ಒಂದು ಕಂಬ ಮಾತ್ರ ಸಾಲದು, ಎಲ್ಲರೂ ಅದಕ್ಕೆ ಪೂರಕವಾಗಿ ಇದ್ದಾಗ ಮಾತ್ರ ಈ ಕಂಪನಿ ಎಂಬ ಕಟ್ಟಡ ಭದ್ರವಾಗಿ ನಿಲ್ಲುತ್ತದೆ. ಅದೇ ರೀತಿ ಎಲ್ಲ ಕಲಾಬಳಗ ತಾಂತ್ರಿಕವರ್ಗ ಇವರಿಗೆ ಪೂರಕ ಪ್ರೇರಕವಾಗಿದ್ದಾರೆ.

ಈಗ ಸಧ್ಯ ಗುಲಬರ್ಗಾದಲ್ಲಿ ಇವರ ಕ್ಯಾಂಪ್ ಇದೆ. ಚನ್ನಾಗಿ ನಡೆದಿದೆ. ಮಾಲತಿಯವರಿಗೆ ಕಲಾವಿದರ ಬಗ್ಗೆ ಏನಾದರೂ ಮಾಡಬೇಕೆಂಬ ತುಡಿತ ಇದೆ. ನಿಜ ಎಷ್ಟೋ ಕಲಾವಿದರಿಗೆ ವೋಟರ್ ಲಿಸ್ಟನಲ್ಲಿ ಹೆಸರಿಲ್ಲ, ಮನೆಯಿಲ್ಲ, ಅಂಥವರಿಗೆ ಏನಾದರೂ ಒಂದಿಷ್ಟು ಸಹಾಯ ಮಾಡುವ ಆಶೆ. ಸರಕಾರ ವೃತ್ತಿ ರಂಗಭೂಮಿಗೆ ಸ್ಪಂದಿಸುತ್ತಿಲ್ಲ, ಕಲಾವಿದರು ಪಬ್ಲಿಕ ಪ್ರಾಪರ್ಟಿ ಇದ್ದಂತೆ. ಸಣ್ಣ ತಪ್ಪು ಮಾಡಿದರೂ ಬೆಳಕಿಗೆ ಬರುತ್ತದೆ, ಇವತ್ತಿನ ಕಲಾವಿದರಲ್ಲಿ ಶ್ರದ್ಧೆಯಿಲ್ಲ, ರಂಗಭೂಮಿಯ ಅವನತಿಗೆ ಅದೂ ಒಂದು ಕಾರಣವಾಗಿದೆ ಎನ್ನುತ್ತಾರೆ. ಉತ್ಸಾಹಿ ಮಹಿಳೆ ಮಾಲತಿ. ರಂಗಭೂಮಿ ನನಗೆ ತೃಪ್ತಿಕೊಟ್ಟಿದೆ. ಈಗಲೂ ನಾನು ಇಷ್ಟ ದಪ್ಪಾ ಇದ್ದರೂ ನಟನೆ ಮಾಡುತ್ತೇನೆ ಎನ್ನುತ್ತಾರೆ. ಅವರ ಮಾತು ಕೇಳಿದಾಗ ಮನುಷ್ಯನ ವ್ಯಕ್ತಿತ್ವಕ್ಕೆ ಬಾಹ್ಯ ಸೌಂದರ್ಯಕ್ಕಿಂತ ಆಂತರಿಕ ಸೌಂದರ್ಯ ಮುಖ್ಯವೆನಿಸುತ್ತದೆ.

ಕೊನೆಗೆ ಇನ್ನೊಂದು ಮಾತು ಹೊರ ಬಂತು "ಮಹಿಳೆಯಾಗಿ ನಾಟಕ ಕಂಪನಿ ನಡೆಸುವುದು ದೊಡ್ಡ ತಪ್ಪು, ಅದರಲ್ಲೂ ಮನೆತನಸ್ತ ಹೆಣ್ಣುಮಕ್ಕಳು ಇದನ್ನು ಮಾಡಲೇಬಾರದು." ಈ ಮಾತು ಬರಬೇಕಾದರೆ ಒಬ್ಬಮಹಿಳೆಯಾಗಿ, ಕಂಪನಿ ಒಡತಿಯಾಗಿ ಅವಳು ಪಟ್ಟ ಕಷ್ಟ ಏನೆಂಬುದು ಗೊತ್ತಾಗುತ್ತದೆ. ಆದರೂ ಕೊನೆಯುಸಿರು ಇರುವ ವರೆಗೆ ಕಂಪನಿಯನ್ನು ಉಳಿಸಿ ಬೆಳೆಸಬೇಕೆಂಬ ಛಲ ಇದೆಯಲ್ಲ ಅದನ್ನು ಮೆಚ್ಚಬೇಕು.[15]

### 11) ಸುಮತಿಶ್ರೀ ನವಲಿ ಹಿರೇಮಠ:

ದಿನಾಂಕ:22-6-09 ರಂದು ಹುಬ್ಬಳ್ಳಿಯ ವಿದ್ಯಾನಗರದಲ್ಲಿರುವ ಸುಮತಿಶ್ರೀ ಅವರ ಮನೆಗೆ ಹೋದಾಗ ಸುಮತಿಶ್ರೀ ತಮ್ಮ ನೆನಪಿನ ಬುತ್ತಿಯನ್ನು ಹೀಗೆ ಬಿಚ್ಚಿಟ್ಟರು.

1962ರಲ್ಲಿ ಕಮಲಾಬಾಯಿ ಹಾಗೂ ಲಕ್ಷ್ಮಣ ದಂಪತಿಗಳ ಉದರದಲ್ಲಿ ನಿಸರ್ಗ ರಮಣಿಯ ತಾಣ ಕಾರವಾರ ಜಿಲ್ಲೆ ಯಲ್ಲಾಪುರದಲ್ಲಿ ಜನಿಸಿದಳು. ಬಹುಶ ಹುಟ್ಟುವಾಗಲೇ ಕಲಾದೇವತೆಯ ಕರುಣೆಯನ್ನು ಪಡೆದು ಹುಟ್ಟಿದ್ದಳೇನೋ? ತನ್ನ 7ನೇಯ ವಯಸ್ಸಿನಲ್ಲಿಯೇ ರಾಜಾ ಸತ್ಯಹರಿಶ್ಚಂದ್ರ

---

[15] 8-7-2009 ರಂದು ಬೆಂಗಳೂರಿನ ಶಂಕರಮಠದ ಹತ್ತಿರವಿರುವ ಅವರ ಮನೆಯಲ್ಲಿ ಸಂದರ್ಶನ ಮಾಡಿದ್ದು.

ನಾಟಕದಲ್ಲಿ ಲೋಹಿತಾಶ್ವ ಪಾತ್ರದ ಮೂಲಕ ಬಣ್ಣದ ಬದುಕಿಗೆ ಪಾದಾರ್ಪಣೆ ಮಾಡಿದಳು. ಕೆ. ಎಸ್. ಸಾಳುಂಕೆ, ಪಿ.ಬಿ.ದುತ್ತರಗಿ, ಎಚ್.ಎನ್. ಹೂಗಾರ ಕೃತ ಹಲವಾರು ನಾಟಕಗಳಲ್ಲಿ ಅಭಿನಯಿಸಿದ ಸುಮತಿಶ್ರೀ ಶ್ರೀ ಕುಮಾರೇಶ್ವರ ನಾಟ್ಯಸಂಘ ಚಿತ್ತರಗಿ, ಗುಡಗೇರಿ ಕಂಪನಿ ಹಾಗೂ ಬಿ.ಆರ್. ಅರಿಶಿನಗೋಡಿಯವರ ಕಂಪನಿಗಳಲ್ಲಿ ಹಲವಾರು ನಾಟಕಗಳಲ್ಲಿ ವಿಭಿನ್ನ ಪಾತ್ರಗಳಲ್ಲಿ ನಟಿಸಿ ಜನರ ಮನಗೆದ್ದಳು. ನಟನೆಯೊಂದರಿಂದಲೇ ಬೇಸರವಾಗಿರಬಹುದು. ಬದುಕಿನಲ್ಲಿ ವೈವಿಧ್ಯತೆಯನ್ನು ಬಯಸುವ ಸುಮತಿಶ್ರೀ ಸೆಕ್ಸ ಬಾಂಬ್ ಎಂದು ಪ್ರಸಿದ್ಧಿಯನ್ನು ಪಡೆದವಳು. ಇವಳಲ್ಲಿ ಏನೋ ಒಂದು ತುಡಿತ ಮಿಡಿತ ಇತ್ತು. ಅದರ ಪ್ರತಿ ಫಲವೇ 1983ರಲ್ಲಿ "ಕುಮಾರೇಶ್ವರ ಪ್ರಾಸಾದಿತ ಸಂಗೀತ ನಾಟಕ ಮಂಡಳಿ" ಕಾಗವಾಡ ಎಂಬ ಕಂಪನಿಯನ್ನು ಹುಟ್ಟುಹಾಕಿದಳು. ಉತ್ತರ ಕರ್ನಾಟಕದಾದ್ಯಂತ ಹನ್ನೊಂದು ವರ್ಷ ಈ ಕಂಪನಿ ಭರ್ಜರಿಯಾಗಿ ನಡೆಯಿತು.

ಶೀಲಮ್ಮ ಸಂಗನಾಳ ಇವರ ದೊಡ್ಡ ಅಕ್ಕ ಅವಳೂ ಸಹ ದೊಡ್ಡ ಕಲಾವಿದೆ. ಅವಳಿಂದ ಸುಮತಿಶ್ರೀ ರಂಗಭೂಮಿಗೆ ಬಂದಳು. ಹಾವೇರಿ ಜುಬೇದಮ್ಮ ಇವರಿಗೆ ಬಣ್ಣ ಹಚ್ಚಿದ್ದು. ಮಧ್ಯಮಧ್ಯದಲ್ಲಿ ಭಾವೋದ್ವೇಗಕ್ಕೆ ಒಳಗಾದ ಸುಮತಿಶ್ರೀ ಹೆಣ್ಣಿಗೆ ಆತ್ಮಸ್ಥೈರ್ಯಬೇಕು. ಹೆಣ್ಣು ಹೂ ಇದ್ದ ಹಾಗೆ ಗಂಡು ಮುಳ್ಳು ಇದ್ದಹಾಗೆ, ಪುರುಷ ಪ್ರಧಾನವಾದ ಸಮಾಜದಿಂದ ಈಕೆಯ ಮನಸ್ಸು ಸಾಕಷ್ಟು ಘಾಸಿಗೊಂಡಿರುವುದು ಸ್ಪಷ್ಟವಾಗುತ್ತಿತ್ತು.

1996ರಲ್ಲಿ "ಆದಿ ಶಕ್ತಿ ಕಲಾ ನಾಟ್ಯಸಂಘಚಿತ್ರದುರ್ಗ" ಎಂಬ ಹೆಸರಿನ ಮತ್ತೊಂದು ಕಂಪನಿಯನ್ನು ಕಟ್ಟಿದಳು 'ದೇವಿ ಮಾಹಾತ್ಮೆ', ಹಾಗೂ 'ಇಟಗಿಯ ಭೀಮಾಂಬಿಕೆ ಮಹಾತ್ಮೆ', ನಾಟಕಗಳು ಸಾವಿರಾರು ಪ್ರಯೋಗಗಳು ಕಂಡವು ಸುಮತಿಶ್ರೀ ಪ್ರಮುಖ ಪಾತ್ರಗಳಲ್ಲಿ ಮಿಂಚಿದ್ದಾಳೆ.

ದೇವಿಮಹಾತ್ಮೆ ನಾಟಕ ಸಾವಿರ ಪ್ರಯೋಗಗಳನ್ನು ಕಂಡಿತು, ಐದು ಜನ ಮ್ಯಾನೇಜರಗಳು ಕಾರ್ಯ ನಿರ್ವಹಿಸುತ್ತಿದ್ದರಂತೆ. ದಿವಸಕ್ಕೆ 80ಸಾವಿರ ಕಲೆಕ್ಷನ್ ಆಗುತ್ತಿತ್ತಂತೆ ದುತ್ತರಗಿಯವರ ದೇವಿ ಮಹಾತ್ಮೆಯಿಂದ ಸುಮತಿಶ್ರೀ ಅವರ ಲಕ್ಕು ಲುಕ್ಕು ಎರಡೂ ಬದಲಾಯ್ತು.

ಬಳ್ಳಾರಿಯಲ್ಲಿ ಬಸಕಂಡಕ್ಟರ್ ನಾಟಕದಲ್ಲಿ ಚೆನ್ನಿಯ ಪಾತ್ರಕ್ಕೆ ಲಾಠಿಚಾರ್ಜ ಕೂಡಾ ಆಯ್ತು. ಕಾರಣ ಕೆಲವು ಪಡ್ಡೆ ಹುಡುಗರು ಚೆನ್ನಿಯ ಪಾತ್ರವನ್ನು ನೋಡಲೆಂದೇ ತಿಂಗಳಿಂದ ನಿರಂತರವಾಗಿ ಅದೇ ಸೀಟಿಗೆ ಬಂದು ಕೂಡುತ್ತಿದ್ದರಂತೆ. ಒಬ್ಬ ನಟಿಯಾಗಿ, ಕಂಪನಿಯ ಒಡತಿಯಾಗಿ ಇವಳ ಕೊಡುಗೆ ಅಪಾರ 1) ನಾಟಕ ಕಂಪನಿಗಳು ದಿವಾಳಿ ಆದಾಗ ಆರ್ಥಿಕ ದುಸ್ಥಿತಿಯಲ್ಲಿದ್ದ ನಾಟಕ

ಕಂಪನಿಗಳಿಗೆ ಹೋಗಿ ತಮ್ಮ ಹೆಸರು ಹಾಗೂ ನಟನೆಯಿಂದ ಆ ಕಂಪನಿಗಳಿಗೆ ಆರ್ಥಿಕ ಪುನಶ್ಚೇತನ ತುಂಬುತ್ತಿದ್ದಳು. 2) ಎಲ್ಲಾ ಕಂಪನಿಗಳು ಮುಚ್ಚುವ ಹಂತದಲ್ಲಿದ್ದಾಗ ಇವರ ಕಂಪನಿ ಉತ್ತುಂಗಕ್ಕೇರುತ್ತದೆ, ದಿವಸಕ್ಕೆ 80 ಸಾವಿರ ಕಲೆಕ್ಷನ್ ಆಗುತ್ತದೆ. ಇದು ಇವರ ವಿಶೇಷ ಕೊಡುಗೆ. ಹೆಚ್ಚಾಗಿ ಹಾಸ್ಯ ಪಾತ್ರಗಳಲ್ಲಿ ನಟಿಸಿದ ಸುಮತಿಶ್ರೀ ಇವಳು ಇದ್ದಲ್ಲಿಗೆ ಉಮಾಶ್ರೀ ಬರಲು ಒಪ್ಪುತ್ತಿರಲಿಲ್ಲವಂತೆ. ವೃತ್ತಿದ್ವೇಷವೋ? ಅಥವಾ ನನಗಿಂತ ಒಬ್ಬ ಒಳ್ಳೆಯ ನಟಿ ಅಲ್ಲಿರುವಾಗ ನನ್ನದೇನು ಕೆಲಸವೆಂಬ ಔದಾರ್ಯವೋ?

ಈಗಲೂ ನಟನೆಯಲ್ಲಿ ಮುಂದುವರೆದಿರುವ ಸುಮತಿಶ್ರೀ ನಟನೆಯಿಂದ ಬಂದ ಹಣದಲ್ಲಿ ಸ್ವಲ್ಪಭಾಗವನ್ನು ಸಮಾಜಸೇವೆಗೆ ವಿನಿಯೋಗಿಸುತ್ತಿದ್ದಾರೆ. ಬಹುಶ ಅವರ ಪತಿ ನವಲಿ ಹಿರೇಮಠರಿಂದ ಈ ಸೇವಾ ಮನೋಭಾವ ಬೆಳೆದು ಬಂದಿರಬಹುದು. ನವರಾತ್ರಿಯಲ್ಲಿ 9ದಿನ ದಾಸೋಹನಡೆಸುತ್ತಾರೆ ಹಲವಾರು ಸಂಘಸಂಸ್ಥೆಗಳು ಇವರ ಕಲೆಯನ್ನು ಸಮಾಜಸೇವೆಯನ್ನು ಗುರ್ತಿಸಿ "ಕರುನಾಡು ಕುವರಿ" ಎಂಬ ಪ್ರಶಸ್ತಿ ನೀಡಿವೆ. 2003ರಲ್ಲಿ ನಾಟಕ ಅಕಾಡಮಿ ಪ್ರಶಸ್ತಿ, 2005ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ತಮ್ಮದಾಗಿಸಿಕೊಂಡಿದ್ದಾರೆ.[16]

## 12) ರೇಣುಕಾ ಅಕ್ಕಲಕೋಟೆ :

ದಿನಾಂಕ:12–4–09 ರಂದು ಅಥಣಿಯಲ್ಲಿ 'ಸ್ವಾಮಿ ಸಮರ್ಥನಾಟ್ಯಸಂಘ ಅಕ್ಕಲಕೋಟಿ' ಈ ಕಂಪನಿ ಕ್ಯಾಂಪ ಹಾಕಿತ್ತು, ಬಸ್ ಹಮಾಲ ನಾಟಕ ಪ್ರದರ್ಶನ ನಡೆದಿತ್ತು, ಅದೇ ಸಂದರ್ಭದಲ್ಲಿ ಅದರ ಒಡತಿಯಾದ ರೇಣುಕಾ ಅಕ್ಕಲಕೋಟೆಯವರನ್ನು ಭೇಟಿಯಾಗುವ ಒಂದು ಸದಾವಕಾಶ ಒದಗಿಬಂತು.

ಎಪ್ರೀಲ 1, 1978ರಲ್ಲಿ ಮಹಾರಾಷ್ಟ್ರದ ಅಕ್ಕಲಕೋಟಿಯಲ್ಲಿ ಜನಿಸಿದಳು. ತಾಯಿ ಕೂಡಾ (ಶಕುಂತಲಾ ಹತ್ತೆ) 'ರೇವಣಸಿದ್ಧೇಶ್ವರ ಕಂಪನಿ'ಯಲ್ಲಿ ನಟಿಯಾಗಿದ್ದವಳು. ತಾಯಿಯ ನಟನಾ ಕೌಶಲ ಸಹಜವಾಗಿ ಮಗಳು ರೇಣುಕಾಳಲ್ಲಿ ಹರಿದು ಬಂದಿತ್ತು. ಬಾಲಕಲಾವಿದೆಯಾಗಿ ನಟನೆ ಮಾಡುತ್ತ ತನ್ನನ್ನು ತಾನು ಡ್ಯಾನ್ಸರ ಆಗಿ ಗುರುತಿಸಿಕೊಂಡಳು. ಕಾಲ ಕಳೆದಂತೆ ಈ ಹುಡುಗಿಯಲ್ಲಿ ಆಶೆಗಳು ಮೊಳಕೆಒಡೆದವು. ಇನ್ನೊಬ್ಬರ ಕಂಪನಿಯಲ್ಲಿ ದುಡಿಯುವದಕ್ಕಿಂತ ನಾನೆ ಒಂದು ಸ್ವಂತ ಕಂಪನಿಯನ್ನು ಏಕೆ ಪ್ರಾರಂಭಮಾಡಬಾರದು? ಎಂಬ ಆಶೆ ಅಂಕುರಿಸಿದ್ದೆ ತಡ 2007ರಲ್ಲಿ 'ಶ್ರೀ ಸ್ವಾಮಿ ಸಮರ್ಥ ಕಲಾ ಸಂಘ ಅಕ್ಕಲಕೋಟೆ' ಕಂಪನಿಯನ್ನು ಕಟ್ಟಿಯೇ ಬಿಟ್ಟಳು. ಈ ಛಲಗಾರ್ತಿ ರೇಣುಕಾ. ತಾನು ಕಂಪನಿ

---

[16] 22–6–2009 ರಂದು ಹುಬ್ಬಳ್ಳಿಯ ವಿದ್ಯಾನಗರದ ಅವರ ಮನೆಯಲ್ಲಿ ಸಂದರ್ಶನ ಮಾಡಿದ್ದು.

ಒಡತಿಯಾಗಿ ಮೆರೆಯಬೇಕೆಂಬ ಸ್ವಾರ್ಥ ಅವಳಲ್ಲಿರಲಿಲ್ಲ. ಈ ಮೂಲಕವಾದರೂ, ಒಂದುನಾಲ್ಕು ಜನರಿಗೆ ಅನ್ನ ಹಾಕಿದ ಪುಣ್ಯ ಅವರ ಜೀವನಕ್ಕೂ ಒಂದು ಆಧಾರವಾಗುವದೆಂಬ ಭರವಸೆಯಿಂದ ರೇಣುಕಾ ಕಂಪನಿ ಪ್ರಾರಂಭಿಸಿದಳು.

ಕಂಪನಿ ಪ್ರಾರಂಭ ಮಾಡಿದ 3 ವರ್ಷದಲ್ಲಿ ರೇಣುಕಾ ಎರಡು ಕಂಪನಿಯ ಮಾಲಿಕಳಾಗುತ್ತಾಳೆ, ಇದಕ್ಕೆ ಕಾರಣ ರಂಗಭೂಮಿಯ ಬಗ್ಗೆ ಅವಳಿಗಿದ್ದ ಕಾಳಜಿ, ಕಳಕಳಿ, ಒಲವು, ವ್ಯವಹಾರ ನೈಪುಣ್ಯತೆ. ಅತ್ಯಂತ ಕಿರಿಯ ವಯಸ್ಸಿನಲ್ಲಿ ಒಬ್ಬ ಮಹಿಳೆಯಾಗಿ ಎರಡೆರಡು ಕಂಪನಿಗಳನ್ನು ನಡೆಸಿಕೊಂಡು ಹೋಗುವುದು ಅಸಾಧ್ಯವಾದ ಮಾತು. ಅದನ್ನು ಸಾಧ್ಯ ಮಾಡಿ ತೋರಿಸಿದ್ದಾಳೆ ರೇಣುಕಾ ಆದರೂ ಜೀವನ ಹೀಗೆ ಇರುತ್ತದೆ ಎಂದು ಕಂಡವರು ಯಾರು? ಶಾಂತವಾದಸಮುದ್ರದಲ್ಲಿ ಬಿರುಗಾಳಿ ಏಳುವಂತೆ ಇವಳ ಹಿರಿಯಕ್ಕನ ಸಾವಿನಿಂದ ಇವಳಿಗೊಂದು ದೊಡ್ಡ ಹೊಡೆತವೇ ಬಿದ್ದಿತು. ಆದರೂ ಎದೆಗುಂದದೆ ಕಂಪನಿ ಮುನ್ನಡೆಸಿಕೊಂಡು ಬಂದುದು ಅವಳ ದಿಟ್ಟತನವನ್ನು ಎತ್ತಿತೋರಿಸುತ್ತದೆ.

ಕರ್ನಾಟಕ ಮಹಾರಾಷ್ಟ್ರ ಗಡಿಭಾಗದಿಂದ ಬಂದ ಈ ರೇಣುಕಾ ಕಲಿತದ್ದು ಮರಾಠಿ 5ನೇ ಇಯತ್ತೆ ವಿಶೇಷವೆಂದರೆ ಕನ್ನಡ ಮಾತನಾಡಲು ಬಾರದ ಈ ರೇಣುಕಾ ಉತ್ತರ ಕರ್ನಾಟಕದಲ್ಲಿ ನಾಟಕ ಕಂಪನಿಯ ಮಾಲಿಕಳಾಗಿ ಕಾರ್ಯನಿರ್ವಹಿಸಿದ್ದು. ಆ ಮೇಲೆ ಕನ್ನಡ ಕಲಿತು ಕರ್ನಾಟಕದಲ್ಲಿಯೇ ಶಾಶ್ವತವಾಗಿ ನೆಲೆಯೂರಿದ್ದು. ಒಬ್ಬ ಮಹಿಳೆಯಾಗಿ ಎರಡು ಕಂಪನಿಯ ಒಡತಿಯಾಗಿ ಅಲ್ಲಿರುವ ಕಲಾವಿದರನ್ನು ಸಂಭಾಳಿಸಿಕೊಂಡು ಹೋಗುವುದು ಎಂಥ ಎದೆಗಾರರಿಂದಲೂ ಸಾಧ್ಯವಾಗದ ಮಾತು, ಯಾಕೆಂದರೆ ಒಂದು ಕಂಪನಿ ಅಂದರೆ ಕೇವಲ ಒಂದು ಕುಟುಂಬ ಅಲ್ಲ ಒಂದು ಓಣಿಯ ಜನರನ್ನು ಸಂಭಾಳಿಸಿದಂತೆ. ಕಲೆಕ್ಷನ್ ಆದರೂ ಸರಿ ಆಗದಿದ್ದರೂ ಸರಿ ದಿನಾಲೂ ಒಂದೈವತ್ತು ಜನರ ಭಾರವನ್ನು ಹೊರಲೇಬೇಕು. ಎಲ್ಲಕ್ಕಿಂತಲೂ ಹೆಚ್ಚಾಗಿ ನನಗೆ ಪಾತ್ರಧಾರಿಗಳ ಕಿರಿಕಿರಿಯೊಂದನ್ನು ಬಿಟ್ಟರೆ ಉಳಿದ ಸಮಸ್ಯೆಗಳು ಸಮಸ್ಯೆಗಳೇ ಎನಿಸಿಲ್ಲವೆನ್ನುತ್ತಾಳೆ ರೇಣುಕಾ.

ಪಾತ್ರಧಾರಿಗಳು ಸಿಕ್ಕಾ ಪಟ್ಟೆ ಅಡ್ವಾನ್ಸ ಕೇಳುತ್ತಾರೆ, ದುಡ್ಡು ತೆಗೆದುಕೊಂಡು ಸರಿಯಾಗಿ ಕೆಲಸ ಮಾಡುವದಿಲ್ಲ. ಇನ್ನು ಸ್ವಲ್ಪಹೊತ್ತಿನಲ್ಲಿ ನಾಟಕ ಶುರುವಾಗುತ್ತದೆ ಎನ್ನುವಾಗ ಯಾವನೋ ಎಲ್ಲಿಯೋ ಕುಡಿದು ಬಿದ್ದಿರುತ್ತಾನೆ. ಅಥವಾ ಇನ್ನೊಂದು ಕಂಪನಿಯವನು ಹೆಚ್ಚಿಗೆ ಸಂಬಳ ಕೊಡುತ್ತೇನೆಂದರೆ ಹೇಳದೆ ಕೇಳದೆ ಅಲ್ಲಿಗೆ ಹೋಗಿರುತ್ತಾರೆ. ಹೀಗಾಗಿ ಒಮ್ಮೆ ಅನಿಸುತ್ತದೆ ಕಂಪನಿ ಕ್ಲೋಜ್ ಮಾಡಬೇಕೆಂದು ಎಂಬ ವಿಷಾದ ಕಲಾವಿದೆಯ ಮುಖದಲ್ಲಿತ್ತು.

ಮೂರು ಕಂಪನಿಗೆ ಆಗುವಷ್ಟು ರಂಗಘರಿಕರಗಳಿವೆ ನಿಗರ್ವಿಯಾದ ಎಲ್ಲರೊಂದಿಗೂ ಹೊಂದಿಕೊಂಡು ಹೋಗುವ ರೇಣುಕಾ ತಾನು ಒಬ್ಬ ಕಂಪನಿಯ ಮಾಲೀಕಳಾಗಿದ್ದರೂ ಪ್ರಸಂಗಬಂದರೆ ಮತ್ತೋಬ್ಬರ ಕಂಪನಿಯಲ್ಲಿ ನಟನೆ ಮಾಡಲು ಹಿಂದೆ ಮುಂದೆ ನೋಡುವದಿಲ್ಲ.

ಇತ್ತಿತ್ತಲಾಗಿ (ಕಿನ್ನರಿ, ಆಲೂರು ಈ ಊರು) (ಧಾರವಾಹಿ) ಕೆಲವೊಂದು ಚಲನಚಿತ್ರಗಳಲ್ಲಿಯೂ ಮಿಂಚುತ್ತಿದ್ದಾಳೆ.[17]

---

[17] ದಿನಾಂಕ : 12-4-2009ರಲ್ಲಿ ಅಥಣಿ ಕ್ಯಾಂಪಿನಲ್ಲಿ ಸಂದರ್ಶಿಸಿದ್ದು.

# 4. ರಂಗ ಅಭಿನೇತ್ರಿಯರಾಗಿ

ತಮ್ಮ ವಿಶೇಷ ಅಭಿನಯಗಳಿಂದ ಯಾವದೇ ಪಾತ್ರವನ್ನು ಕೊಟ್ಟರೂ ಮೈಮರೆತು ಮಾಡುವ ವಿಶೇಷ ನಟನಾ ಸಾಮರ್ಥ್ಯ ಕೆಲವರಿಗೆ ಕರಗತವಾಗಿರುತ್ತದೆ. ಅದು ಹಾಸ್ಯವಿರಬಹುದು, ನಾಯಕಿಯ ಪಾತ್ರವಿರಬಹುದು, ಅಥವಾ ಖಳನಾಯಕಿಯ ಪಾತ್ರ ಇರಬಹುದು. ಒಟ್ಟಿನಲ್ಲಿ ಆ ಪಾತ್ರಕ್ಕೆ ನ್ಯಾಯ ಒದಗಿಸಿ, ಅದಕ್ಕೆ ಜೀವತುಂಬಿ ಮುಂದಿದ್ದ ಪ್ರೇಕ್ಷಕನನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸಿಯೋ ಇಲ್ಲಾ ಅಳಿಸಿಯೋ ಅಥವಾ ಕೈಯಲ್ಲಿದ್ದ ವಸ್ತುವನ್ನು ತೆಗೆದುಕೊಂಡು ಬಿಸಾಕಿಬಿಡಲೋ ಎನ್ನುವಷ್ಟರಮಟ್ಟಿಗೆ ಆಕ್ರೋಶಕ್ಕೆ ಒಳಗಾಗುವಂತೆ ಮಾಡುವ ಕಲಾವಿಶಾರದರೂ, ಅದೆಷ್ಟೋ ಜನ ನಟಿಯರು ಇದ್ದರು. ಈಗಲೂ ನಮ್ಮ ನಿಮ್ಮ ನಡುವೆ ಇದ್ದಾರೆ, ಅವರನ್ನು ಒಬ್ಬೊಬ್ಬರನ್ನಾಗಿ ನೋಡೋಣ.

**ಯಲ್ಲೂಬಾಯಿ ಗುಳೇದ ಗುಡ್ಡ :**

ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಇತಿಹಾಸದಲ್ಲಿ ಯಲ್ಲೂಬಾಯಿಗೆ ವಿಶಿಷ್ಟ ಸ್ಥಾನವಿದೆ. ಯಾಕೆಂದರೆ ವೃತ್ತಿ ರಂಗಭೂಮಿಗೆ ಕಾಲಿಟ್ಟ ಪ್ರಥಮ ಮಹಿಳೆ ಎಲ್ಲೂಬಾಯಿ. ಆಗಿನ ಕಾಲದಲ್ಲಿ ಅದೊಂದು ಕ್ರಾಂತಿಕಾರಕ ಹೆಜ್ಜೆಯೇ ಸರಿ. ನಾಟಕ ಆಡುವವರೂ ಗಂಡಸರು, ನೋಡುವವರೂ ಗಂಡಸರು ಎಂದುಕೊಂಡಿದ್ದ ಕಾಲದಲ್ಲಿ ಕೊಣ್ಣೂರಿನ "ಕಾಡ ಸಿದ್ದೇಶ್ವರ ಸಂಗೀತ ನಾಟಕ ಮಂಡಳಿ"ಯ ಮಾಲಿಕರಾದ ಶಿವಮೂರ್ತಿ ಸ್ವಾಮಿಗಳು, ಈ ಮಹತ್ತರ ಬದಲಾವಣೆಗೆ ಕಾರಣ ಕರ್ತರಾದರು.

ಕ್ರಿ.ಶ. 1900ರಲ್ಲಿ ಸುಸಜ್ಜಿತ ರಂಗ ಪರಿಕರ ತರಬೇತಿ ಪಡೆದ ನಟರೊಂದಿಗೆ (2 ವರ್ಷಗಳ ಕಾಲ ತಯ್ಯಾರಿಯ ನಂತರ) ಪ್ರಾರಂಭಿಸಲಾದ ಈ ಮಂಡಳಿಗೆ ಅಭಿನಯದಲ್ಲಿ ಸಹಜತೆ ತರಲು ಸ್ತ್ರೀ ಪಾತ್ರಕ್ಕೆ ಸ್ತ್ರೀಯರೆ ಇರಬೇಕೆಂದರು. ಶಿವಮೂರ್ತಿ ಸ್ವಾಮಿಗಳು, ಜಾನಪದ ಆಟ ದೊಡ್ಡಾಟದ ಕಲಾವಿದರನ್ನೇ ಕರೆತಂದು ತರಬೇತಿ ಕೊಡಿಸಿದಂತೆ, ಮಹಿಳೆಯರ ಹುಡುಕಾಟಕ್ಕೆ ತಮ್ಮ ಮಂಡಳಿಯ ನಟ ಗುರುಲಿಂಗಪ್ಪ ಗೊಂಬಿಗೆ ಸೂಚಿಸಿದರು. ಹೀಗೆ ಗುರುಲಿಂಗಪ್ಪನ ಮುಖಾಂತರ ಮಂಡಳಿ ಪ್ರವೇಶಿಸಿದವಳೇ ಎಲ್ಲೂ ಬಾಯಿ ಗುಳೇದಗುಡ್ಡ.

"ನವೋದಿತ ಬಾಗಲಕೋಟೆ ಜಿಲ್ಲೆಯ ಬದಾಮಿ ತಾಲೂಕಿನ 'ಹಂಸನೂರು' ಯಲ್ಲೂಬಾಯಿಯ ಮೂಲಸ್ಥಳ. ಹಂಸನೂರು ಬಣ್ಣದ ಬೆಳಕಿನ ತವರು. ಇಲ್ಲಿ ಕಲೆ ದೈವದತ್ತವಾಗಿದೆ. ಕೆಲವರಿಗೆ ರಕ್ತಗತವಾಗಿ ಹರಿದು ಬಂದಿದೆ. ದಾಸರಾಟವನ್ನು ಮೈಗೂಡಿಸಿಕೊಂಡುಬಂದ ಎಲ್ಲೂಬಾಯಿ

ಬಾಲ್ಯದಲ್ಲಿಯೇ ಬೆರಗು ಹುಟ್ಟಿಸುವ ಅಭಿನಯ, ಸಮಧುರ ಕಂಠ, ತಿದ್ದಿ ತೀಡಿದ ರೂಪಲಾವಣ್ಯ, ತಾಯಿಯನ್ನಗಲಿದ ತಬ್ಬಲಿಗೆ ಅಲ್ಲಿಯ ಪರಿಸರ ಬದಕುವ ಕಲೆಯನ್ನು ಕಲಿಸಿಕೊಟ್ಟಿತು."[18]

ತನ್ನ ಪ್ರಬುದ್ಧ ಅಭಿನಯ, ಕಂಠಸಿರಿಯಿಂದ ಮಂಡಳಿಯಲ್ಲಿ ಬಹುಬೇಗ ಜನಪ್ರೀಯ ನಟಿಯಾಗಿ ಬೆಳೆಯುತ್ತಾಳೆ. ರಂಗದ ಮೇಲೆ ಗುರುಲಿಂಗಪ್ಪ ಗೋಂಬಿಗೆ ನಾಯಕಿಯಾದವಳು, ಜೀವನ ದಲ್ಲಿಯೂ ಅವನ ಸಂಗಾತಿಯಾಗುತ್ತಾಳೆ.

ಈ ಜೋಡಿ ಕೊಣ್ಣೂರ ಕಂಪನಿಯಲ್ಲೇ 18 ವರ್ಷ ಸೇವೆಸಲ್ಲಿಸಿ 'ಹರಿಶ್ಚಂದ್ರ' 'ಕೀಚಕವದೆ' 'ಪ್ರಮೀಳೆ, ಚಂದ್ರಹಾಸ, ಮದನಮೋಹನ, ಶನಿಪ್ರಭಾವ, ಮನೋವಿಜಯ, ಬಬ್ರುವಾಹನ, ಶಿವಲೀಲೆ, ಭಕ್ತ ಮಾರ್ಕಂಡೆಯ ಸೇರಿದಂತೆ ಇನ್ನೂ ಹಲವಾರು ನಾಟಕಗಳಲ್ಲಿ ಅಭಿನಯಿಸುತ್ತದೆ.

ಯಲ್ಲೂಬಾಯಿ ಮಹಿಳಾ ಪಾತ್ರಗಳಲ್ಲಿ ಅಷ್ಟೇ ಅಲ್ಲ ಪುರುಷ ಪಾತ್ರದಲ್ಲಿ ನಟಿಸಿದ ಮೊದಲ ಮಹಿಳೆಯೂ ಆಗುತ್ತಾಳೆ. "ಬಸವೇಶ್ವರ" ನಾಟಕದಲ್ಲಿ ಮೊದಲಿಗೆ ಮಾದಲಾಂಬಿಕೆಯಾಗಿ ನಟಿಸಿ, ಮುಂದೆ ಬಿಜ್ಜಳನ ಪಾತ್ರದಲ್ಲಿಯೂ ಕಾಣುತ್ತಿದ್ದಳಂತೆ. ಈಕೆ ಹೆಣ್ಣೆಂಬ ಅಂಶ ಎನಿತೂ ತೋರದಂತೆ ಬಿಜ್ಜಳನ ಪಾತ್ರಕ್ಕೆ ಜೀವತುಂಬುತ್ತಿದ್ದಳಂತೆ.

ಪುರುಷರೆ ಸ್ತ್ರೀ ಪಾತ್ರಳನ್ನು ಮಾಡುತ್ತಿದ್ದ ಕಾಲದಲ್ಲಿ, ಮಹಿಳಾ ಪಾತ್ರದೊಂದಿಗೆ ಪುರುಷ ಪಾತ್ರವನ್ನು ನಿರ್ವಹಿಸಿಕೊಂಡು ಬಂದದ್ದು ಒಂದು ವಿಶೇಷವೇ.

ಅದೂ ಅಲ್ಲದೆ ತನಗೆ ಸಿಕ್ಕಿದ್ದ ಹೆಣ್ಣು ಮಗುವೊಂದನ್ನು ಸಾಕಿ, ಬೆಳೆಸಿ ಅವಳಿಗೆ ಕೊಣ್ಣೂರ ಕಂಪನಿಯಲ್ಲಿಯೇ ರಂಗ ದೀಕ್ಷೆ ನೀಡುತ್ತಾಳೆ. ಮುಂದೆ ಅವಳು ಶ್ರೇಷ್ಠ ಅಭಿನೇತ್ರಿಯಾಗಿ ಮಂಡಳಿಯ ಒಡತಿಯಾಗಿ, ಮುಂದೆ ಅವಳು 'ಗಾನರತ್ನ'ವೆಂಬ ಬಿರುದು ಪಡೆಯುತ್ತಾಳೆ. ಗಂಗೂಬಾಯಿ ಗುಳೇದಗುಡ್ಡಳೇ ಯಲ್ಲೂಬಾಯಿಯ ಸಾಕು ಮಗಳು.

ಮಗಳು ಗಂಗೂಬಾಯಿ, ಗಂಡ ಗುರಲಿಂಗಪ್ಪನೊಂದಿಗೆ ವಾಮನರಾವ್ ಮಾಸ್ತರರ "ವಿಶ್ವಗುಣಾದರ್ಶ ನಾಟಕ ಮಂಡಳಿ" ಸೇರುತ್ತಾಳೆ ಎಲ್ಲೂಬಾಯಿ.

ನಂತರ ಗಂಗೂಬಾಯಿಯೇ ಮಂಡಳಿ ಮಾಡಿದಾಗ ಅವಳಿಗೆ ಆಸರೆಯಾಗಿ ನಿಂತು ಸಲಹೆ, ಸೂಚನೆ, ಮಾರ್ಗದರ್ಶನ ಮಾಡುತ್ತ ಕಾಲ ಕಳೆದ ಎಲ್ಲೂಬಾಯಿ ಶತಾಯುಷಿಯಾಗಿ 1978ರ ಆಸುಪಾಸಿನಲ್ಲಿ ತನ್ನ ಜೀವನ ಯಾತ್ರೆ ಮುಗಿಸುತ್ತಾಳೆ.

---

[18] "ಯಲ್ಲೂಬಾಯಿ ಗುಳೇದಗುಡ್ಡ" ಲೇಖನದಲ್ಲಿ ಭೀಮನಗೌಡ ಪಾಟೀಲ ಶ್ರೀವಲ್ಲಭ 2007ನೇ ಸಂಚಿಕೆ. ಪು. 169.

**ರೇಣುಕಾ ಮುರಗೋಡ :**

ನಿಷ್ಠುರ ಸ್ವಭಾವದ, ನೇರ ನುಡಿಯ, ಬದುಕಿನ ಕೊನೆಯ ದಿನಗಳಲ್ಲಿಯೂ ಚಟುವಟಿಕೆಯಿಂದಿದ್ದ ರೇಣುಕಮ್ಮ ಕನ್ನಡ ವೃತ್ತಿರಂಗಭೂಮಿಯ ಹಿರಿಯ ಕಲಾವಿದೆ. ಹಲಗೇರಿ ಜಟ್ಟೆಪ್ಪನವರ ಕಂಪನಿಯಲ್ಲಿ ಬಾಲಕಲಾವಿದೆಯಾಗಿ ಪ್ರವೇಶ ಮಾಡಿದ ಇವಳು ಬದುಕಿನ 80 ವಸಂತಗಳ ತನಕ ಹಿಂದಿರುಗಿ ನೋಡಿಯೇ ಇಲ್ಲ. ಬಾಲನಟಿಯಾಗಿ ಮಿಂಚುತ್ತಿರುವಾಗಲೇ ಏಣಗಿಬಾಳಪ್ಪನವರ ಕಂಪನಿಯತ್ತ ಮುಖ ಮಾಡಿದಳು. ಹಲವಾರು ಅವಕಾಶಗಳು ತಾನಾಗಿಯೇ ಒದಗಿಬಂದವು. ಅಪ್ಪುರಾಜ ಮುಧೋಳಕರ "ಕಲಾವಿಕಾಸ ನಾಟಕ ಮಂಡಳಿ"ಯಲ್ಲಿ ತವರುಮನೆ, ಕುರುಕ್ಷೇತ್ರ, ಅಕ್ಷಯಾಂಬರ, ರೂಪವತಿ ಮಾನವತಿ, ಮುಂತಾದ ನಾಟಕಗಳ ಮೂಲಕ ಪ್ರಸಿದ್ಧಿಗೆ ಬಂದುದಲ್ಲದೆ, ಗುಡಗೇರಿ ಬಸವರಾಜರ 'ಸಂಗಮೇಶ್ವರ ನಾಟ್ಯ ಸಂಘ"ದಲ್ಲಿನೇ ಹದಿನೇಳು ವರ್ಷ ಬಣ್ಣ ಹಚ್ಚಿದಳು.

ಕಲಾವಿದರ ಬದುಕೇ ಒಂದು ಅಲೆಮಾರಿ ಜೀವನ ಹೂವಿಂದ ಹೂವಿಗೆ ಹಾರುವ ದುಂಬಿಯಂತೆ ಒಂದು ಕಂಪನಿಯಂದ ಇನ್ನೊಂದು ಕಂಪನಿಗೆ ಹೋಗುವುದು ಸರ್ವೆಸಾಮಾನ್ಯ ಅದರಂತೆ ರೇಣುಮ್ಮಳು ಕೂಡ ಹೊನ್ನಪ್ಪ ಭಾಗವತರ ಕಂಪನಿ, ಲಕ್ಕುಂಡಿ, ಕೊಟ್ರಪ್ಪನವರ ಕೊಟ್ಟೂರೇಶ್ವರ ನಾಟ್ಯ ಸಂಘ, ಮಲ್ಲಿಕಾಜುನ ನಾಟ್ಯ ಸಂಘ ನೇಸರಗಿ. ಈ ಕಂಪನಿಯನ್ನು ತನ್ನ ಒಡೆತನದಲ್ಲಿ ಆರು ವರ್ಷ ನಡೆಸಿಕೊಂಡು ಹೋದಳು.

ಒಮ್ಮೊಮ್ಮೆ ಪುರುಷ ಪಾತ್ರದಲ್ಲಿಯೂ ಮಿಂಚಿದ್ದಾಳೆ ಈ ಅಜ್ಜಿ. 'ಹೇಮರಡ್ಡಿ ಮಲ್ಲಮ್ಮ' ನಾಟಕದಲ್ಲಿ 'ಮಲ್ಲಿಕಾರ್ಜುನನ ಪಾತ್ರದಿಂದ ಸಾಕಷ್ಟು ಜನಮನ್ನಣೆಗೆ ಒಳಗಾದಳು.

ಇಷ್ಟೆಲ್ಲಾ ಪ್ರತಿಭೆಯಿದ್ದರೂ ದೈವಬಲ ಎನ್ನುವುದೂ ಇರದಿದ್ದರೆ "ಹೊಳೆಯಲ್ಲಿ ಹುಣಸೆಹಣ್ಣು ತೊಳೆದಂತೆ" ಬರಹಗಾರನ ಕೈ ಬರಿಗೈ ಹಾಗೆ ಕಲಾವಿದರ ತಾಪತ್ರಯ ಇದ್ದದ್ದೆ.

ಬದುಕಿನ ಕೊನೆಯದಿನಗಳನ್ನು ಅಜ್ಜಿ ಸುಖಾಂತವಾಗಿ ಕಳೆಯಲು ಸಾಧ್ಯವಾಯ್ತು. ಅದೂ ರಂಗಭೂಮಿಯಿಂದ ಬೆಳ್ಳಿತೆರೆಗೆ, ಕಿರುತೆರೆಗೆ ಬಂದ ಮೇಲೆ. ಗಿರೀಶ ಕಾಸರವಳ್ಳಿಯವರ ಕ್ರೌರ್ಯ, ನಮ್ಮೂರ ಮಂದಾರ ಹೂವೆ, ಮುಸ್ಸಂಜೆ, ವೀರಪ್ಪನಾಯಕ, ಚಂದ್ರಚಕೋರಿ, ಪರ್ವ, ತಾಯಿಸಾಹೇಬ, ಅರಸು ಈ ಎಲ್ಲಾ ಚಿತ್ರದಲ್ಲಿಯೂ ತನ್ನ ಅದ್ಭುತ ನಟನೆಯಿಂದ ಆ ಪಾತ್ರಗಳಿಗೆ ಜೀವ ತುಂಬುತ್ತಿದ್ದಳು.

ಹದ್ದಿನಕಣ್ಣು, ಪಾರ್ವತಿ, ಕಥಾಸಾಗರ, ಮೂಡಲಮನೆ, ತ್ರಿಕಾಲ, ಹೀಗೆ ಹಲವಾರು ಕಿರುತೆರೆಯ ಧಾರಾವಾಹಿಗಳಲ್ಲಿಯೂ ನಟಿಸಿದ ಹೆಮ್ಮೆ ರೇಣುಮ್ಮಳದು.

ರಂಗಭೂಮಿಯ ಕಸುವು ಆಕೆಯ ನರನಾಡಿಯಲ್ಲಿ ಹರಿದಾಡುತ್ತಿತ್ತು. ಆ ಕಸುವೇ ಆಕೆ ೮೦ರ ಹರೆಯದಲ್ಲಿ ಬೆಳ್ಳಿತೆರೆಯಲ್ಲಿ ಮಿಂಚುವಂತೆ ಮಾಡಿತು.

1994ರಲ್ಲಿ ನಾಟಕ ಅಕ್ಯಾಡೆಮಿ ಪ್ರಶಸ್ತಿ ಬಿಟ್ಟರೆ ಮತ್ಯಾವ ಪ್ರಶಸ್ತಿಗಳೂ ಅವಳ ಹತ್ತಿರಕ್ಕೆ ಸುಳಿದಿಲ್ಲ. ಮಗ ಬಸವರಾಜ ಮುರಗೋಡ ಅವರೂ ಒಬ್ಬ ಕಲಾವಿದ. ಮೂಲತಃ ಬೆಳಗಾಂವ ಜಿಲ್ಲೆಯ ಸವದತ್ತಿ ತಾಲೂಕಿನ ಮುರಗೋಡ ಇವರದು.

ಒಬ್ಬ ಹಳ್ಳಿಯ ಹುಡುಗಿ ಬೊಚ್ಚುಬಾಯಿಯ ಅಜ್ಜಿಯಾಗುವತನಕ ಎಲ್ಲರ ಮನದಲ್ಲಿ, ಮನೆಯಲ್ಲಿ ತನ್ನ ಛಾಪನ್ನು ಒತ್ತಿದ್ದು ಒಂದು ವಿಶೇಷವೇ ಸರಿ.

**ಕಾಶೀಬಾಯಿ ನಾಲ್ವತವಾಡ :**

ಇದ್ದವರ ಬಗ್ಗೆ ವಿಷಯ ಸಂಗ್ರಹಮಾಡುವುದು ಕಷ್ಟವಾಗಿರುವಾಗ ಇಲ್ಲದವರ ಕುರಿತು ವಿಷಯ ಸಂಗ್ರಹಿಸುವುದು ಇನ್ನು ಕಷ್ಟದ ಕೆಲಸ. ಅದಕ್ಕಾಗಿ ಅಥಣಿಯ ಖ್ಯಾತ ವಕೀಲರಾದಂತಹ ಶ್ರೀಯುತ ಕುಂದರಗಿಯವರನ್ನು ಹಾಗೂ ಕಾಶೀಬಾಯಿಯವರ ಮಕ್ಕಳಾದ ಮುರುಗೇಶ (ಮೊದಲ ಹೆಂಡತಿಯ ಮಗ) ತಾರಾನಾಥ (ಕಾಶಿಬಾಯಿಯವರ ಮಗ) ಅವರನ್ನು ಭೇಟಿಯಾದಾಗ, ಪೋನ ಮೂಲಕ ವಿಚಾರಿಸಿದಾಗ ಕಾಶೀಬಾಯಿ ಬಗ್ಗೆ ತಿಳಿದು ಬಂದಿದ್ದು ಇಷ್ಟು.

ಅಥಣಿಯ ಭೀಮಪ್ಪ ಹೂಗಾರರು ಏರಾಶಿ ಭರಮಪ್ಪನವರ ವಾಣಿವಿಲಾಸ ಹೊಂಬಳ ಹಾಗೂ ಗುಳೇದಗುಡ್ಡ ಕಂಪನಿಗಳಲ್ಲಿ ಹಾರ್ಮೋನಿಯಂ ಮಾಸ್ತರರಾಗಿ ಕಾರ್ಯ ನಿರ್ವಹಿಸುತ್ತಿದ್ದರು. 1933ರಲ್ಲಿ ಹೂಗಾರರ ಸಹೋದರ ಶಂಕ್ರಪ್ಪ ಹಾಗೂ ತಾರಾ ಪತ್ನಿ ಕಾಶೀಬಾಯಿ ನಾಲ್ವತವಾಡ ಇವರ ಸಹಾಯ ಹಾಗೂ ಪ್ರೋತ್ಸಾಹದಿಂದ 'ಭಾಗ್ಯೋದಯ' ನಾಟಕ ಮಂಡಳಿಯನ್ನು ಹುಟ್ಟುಹಾಕಿದರು.

ಭಾಗ್ಯೋದಯ ನಾಟಕ ಮಂಡಳಿ ಪ್ರಾರಂಭವಾಗಿದ್ದೆ ತಡ ಕಾಶೀಬಾಯಿ ತನು, ಮನ, ಧನ, ದಿಂದ ಸಂಪೂರ್ಣವಾಗಿ ಕಂಪನಿಯ ಬೆನ್ನೆಲುಬಾಗಿ ನಿಂತಳು. ಕಾಶೀಬಾಯಿ ಹಾಗೂ ಹಂದಿಗನೂರ ಸಿದ್ರಾಮಪ್ಪನವರ ನಟನೆಯಿಂದ ಕಂಪನಿ ಸಾಕಷ್ಟು ಲಾಭದಲ್ಲಿತ್ತು.

ಸೊಲ್ಲಾಪುರದಲ್ಲಿ "ಹೇಮರಡ್ಡಿ ಮಲ್ಲಮ್ಮ" ನಾಟಕದಲ್ಲಿ ಕಾಶೀಬಾಯಿ 'ಮಲ್ಲಮ್ಮ'ನ ಪಾತ್ರದಲ್ಲಿ ಸೊಲ್ಲಾಪುರ ನಾಗರೀಕರಮನಸೂರೆಗೊಂಡಿದ್ದಳು. ಅಲ್ಲಿನ ನಾಗರೀಕರು 'ಅಭಿನಯ ವಿಶಾರದೆ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿದರು. ಕೃಷ್ಣರಾವ್ ಹುಯಿಲಗೋಳ ಅವರು ಬರೆದ "ನರಗುಂದ ಮುತ್ತಿಗೆ" ಈ ನಾಟಕವೂ ಕೂಡಾ ಒಳ್ಳೇಯ ಹೆಸರನ್ನು ತಂದುಕೊಟ್ಟಿತು.

ಆದರೆ "ವಿನಾಶಕಾಲೇ ವಿಪರೀತ ಬುದ್ಧಿ" ಎಂಬಂತೆ ಭೀಮಣ್ಣ ಹಾಗೂ ಸಹೋದರ ಶಂಕರ ಇಬ್ಬರು ದುರ್ವ್ಯಸನಕ್ಕೆ ಬಿದ್ದರು. ಕುಡಿತಕ್ಕೆ ಹಣ ನೀರಿನಂತೆ ಖರ್ಚಾಗಿ ಕಂಪನಿ ಸಾಲದಲ್ಲಿ

ಮುಳುಗಿತು.(ಗುರುಭಕ್ತ ಅಥಣಿ ಭೀಮದಾಸರು" ಲೇಖಕರು ಜಯತೀರ್ಥ ಗೋವಿಂದರಾವ ಕುಲಕರ್ಣಿ ಪುಟ-25)

ಇಂಥ ಸಂದರ್ಭದಲ್ಲಿ ಕಾಶೀಬಾಯಿ ಧೈರ್ಯಗೆಡದೆ ಕಂಪನಿ ಹಾಗೂ ಮನೆಯ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತಾಳೆ. ತನ್ನಲ್ಲಿದ್ದ ಅಲ್ಪಸ್ವಲ್ಪ ಒಡವೆಗಳನ್ನು ಮಾರುತ್ತಾಳೆ. ಕಂಪನಿಯ ಉಳಿವಿಗಾಗಿ, ಆದರೂ ಭೀಮಣ್ಣನವರಿಗೆ ಬುದ್ಧಿ ಬರಲಿಲ್ಲ.ಶಂಕರಪ್ಪನ ಆರೋಗ್ಯ ಹದಗೆಡುತ್ತದೆ. ಒಬ್ಬ ಮಹಿಳೆಯಾಗಿ ಕಂಪನಿಯನ್ನು ಉಳಿಸಿ ಬೆಳೆಸಲು ಮಾಡಿದ ಪ್ರಯತ್ನ ವ್ಯರ್ಥವಾಯ್ತು.ಇಬ್ಬರ ನಡುವೆ ಮನಸ್ತಾಪವುಂಟಾಗಿ (ಭೀಮಣ್ಣ ಹೂಗಾರ ಹಾಗೂ ಕಾಶೀಬಾಯಿ) 1940ರಲ್ಲಿ ಕಂಪನಿ ಮುಚ್ಚಲ್ಪಟ್ಟಿತು. ಮರಳಿ ಕಾಶೀಬಾಯಿ ಮತ್ತೆ ಹಂದಿಗನೂರ ಸಿದ್ರಾಮಪ್ಪನವರ ಕಂಪನಿಯಲ್ಲಿ ನಟಿಸಲು ಪ್ರಾರಂಭಮಾಡುತ್ತಾಳೆ.

ಒಬ್ಬ ಒಳ್ಳೇಯ ನಟಿಯನ್ನು ವ್ಯವಹಾರ ನಿಪುಣೆಯನ್ನು ಕಳೆದುಕೊಂಡದ್ದು ಭಾಗ್ಯೋದಯ ಕಂಪನಿಯದುರಾದೃಷ್ಟವೆಂದೇ ಹೇಳಬಹುದು."ಅಟ್ಟಮೇಲೆ ಒಲೆ ಉರಿಯಿತು, ಕೆಟ್ಟಮೇಲೆ ಬುದ್ದಿಬಂತು" ಎಂಬಂತೆ. ಭೀಮಣ್ಣ ಹೂಗಾರ ಅವರು ಅಚಾನಕ್ಕಾಗಿ ಬಾಗಲಕೋಟೆಯಲ್ಲಿ ಕಾಶೀಬಾಯಿಯವರನ್ನು ಭೇಟಿಯಾದಾಗ ತಾವು ಹರಿದಾಸರಾಗುವ ವಿಚಾರವನ್ನು ವ್ಯಕ್ತಪಡಿಸಿದಾಗ ಸದ್ಗುಣಿ ಕಾಶೀಬಾಯಿ ಅವರ ಹೆಂಡತಿ ಮತ್ತು ಮಕ್ಕಳನ್ನು ನೋಡಿಕೊಳ್ಳುವುದಾಗಿ ಭೀಮದಾಸರಿಗೆ ಮಾತುಕೊಡುತ್ತಾಳೆ. ಮಾತು ಕೊಟ್ಟಂತೆ ನಡೆದೂ ತೋರಿಸಿದ ಕಾಶೀಬಾಯಿ 5/9/1995 ರಂದು ಬಣ್ಣದ ಲೋಕಕ್ಕೆ ಇಹಲೋಕಕ್ಕೆ ಗುಡ್ ಬೈ ಹೇಳಿದಳು.[19]

**ಲಕ್ಷ್ಮಿಬಾಯಿ ಏಣಗಿ :**

ಧಾರವಾಡದ ರಜತಗಿರಿಯ ಅವರ ಮೆನಗೆ ಹೋದಾಗ ಸಂತೋಷದಿಂದ ಸ್ವಾಗತಿಸಿದ ಲಕ್ಷ್ಮೀಬಾಯಿಯವರು ಏಣಗಿ ಬಾಳಪ್ಪನವರ ತಾರಾಪತ್ನಿ. ಏಣಗಿ ಬಾಳಪ್ಪನವರೂ ಒಟ್ಟಿಗೆ ಸಿಕ್ಕರೆ ಒಳ್ಳೆಯದಾಗುತ್ತದೆ ಎಂದು ಭರವಸೆಯನ್ನಿಟ್ಟುಕೊಂಡು ಹೋದ ನನಗೆ ನಿರಾಶೆಕಾದಿತ್ತು. ಅವರು ಊರಲ್ಲಿರಲಿಲ್ಲ. ಆದರೂ ನಗುಮುಖದ, ಹಣೆ ತುಂಬಾ ಕಾಸಿನಗಲ ಕುಂಕುಮ ಹಚ್ಚಿಕೊಂಡ ಈ ಇಳಿವಯಸ್ಸಿನಲ್ಲಿಯೂ ತರುಣಿಯರು ನಾಚುವಂತ ಚೆಲುವಿನ ಪುತ್ಥಳಿ ಲಕ್ಷ್ಮೀಬಾಯಿಯವರನ್ನು ಕಂಡಾಗ ಎದೆತುಂಬಿಬಂತು.

---

[19] 5-5-2009 ರಂದು ಅಥಣಿಯಲ್ಲಿ ಭೀಮದಾಸರ ಮಗ ಮುರಗೆಪ್ಪಾ ಹಾಗೂ ಖ್ಯಾತ ವಕೀಲರಾದಂತ ಕೆ.ಎಲ್.ಕುಂದರಗಿ ಅವರೊಡನೆ ಸಂದರ್ಶನ ಮಾಡಿದ್ದು.

ಹಿರಿಯ ನಟ ತನ್ನ ಬಣ್ಣದ ಬದುಕಿನ ಬುತ್ತಿಯ ಗಂಟನ್ನು ನನ್ನೆದುರಿಗೆ ಬಿಚ್ಚಿಟ್ಟರು.

ಮೂಲತಃ ಇವರ ಮನೆಯವರು ಯಾರೂ ಬಣ್ಣದ ಬದುಕಿಗೆ ಅಂಟಿಕೊಂಡವರಲ್ಲ. ವಿರುಪಾಕ್ಷಪ್ಪ ಬಳ್ಳಾರಿ ಇವರ ತಂದೆಯವರು ಭಾಗ್ಯೋದಯ ಕಂಪನಿಯಲ್ಲಿ ಮ್ಯಾನೇಜರ್ ಆಗಿದ್ದರು. ಇವಳ ತಾಯಿಯ ಊರು ಕೂಡ್ಲಿಗಿ. ಈ ಬಳ್ಳಾರಿ, ಕೂಡ್ಲಿಗಿ, ಹೊಸಪೇಟ, ಮರಿಯಮ್ಮನಹಳ್ಳಿ ಇಲ್ಲೆಲ್ಲಾ ಆಗಲೇ ಕಲೆ, ಸಂಸ್ಕೃತಿಯ ಕಂಪು ಹರಡಿತ್ತು. ಅಂಥ ಒಂದು ಪರಿಸರದಲ್ಲಿ ಬೆಳೆದ ಲಕ್ಷ್ಮೀಬಾಯಿಗೆ ಏಳು ವರ್ಷದವಳಿದ್ದಾಗಲೇ ಬಣ್ಣದ ಗೀಳು ಶುರುವಾಯ್ತು. ಅದಕ್ಕೆ ಯಾರೂ ಅಡ್ಡಿಯಾಗಲಿಲ್ಲ. ಬಾಲ ಪಾತ್ರದಿಂದಲೇ ಇವಳ ನಟನೆ ಪ್ರಾರಂಭವಾಯ್ತು. ಅಕ್ಷಯಾಂಬರದಲ್ಲಿ ಸತ್ಯ ಭಾಮ, ರುಕ್ಮಿಣಿ ಪಾತ್ರ ಮಾಡಿದಳು. "ಭಾಗ್ಯೋದಯ" ಕಂಪನಿಯಿಂದಲೇ ಇವಳ ಬಣ್ಣದ ಬದುಕು ಪ್ರಾರಂಭವಾಯ್ತು.

ನಂತರ ತಂದೆಯ ಪರಿಚಯದಿಂದ ಗರುಡ ಸದಾ ಶಿವರಾಯರ ಕಂಪನಿಯಲ್ಲಿ ನಟಿಸಿದ ಲಕ್ಷ್ಮಿಬಾಯಿ 1948 ರಲ್ಲಿ 'ಕಲಾವೈಭವ' ಕಂಪನಿಗೆ ಸೇರಿದರು. ಆಗ ಇರರಿಗೆ 19 ವರ್ಷ ಏಣಗಿ ಬಾಳಪ್ಪನವರ ಈ "ಕಲಾವೈಭವ ಸಂಘ" ದಲ್ಲಿ ಸ್ತ್ರೀಪಾತ್ರದಾರಿಗಳು ಯಾರೂ ಇರಲಿಲ್ಲ. ಸ್ವತಃ ಏಣಗಿ ಬಾಳಪ್ಪನವರೇ ಸ್ತ್ರೀಪಾತ್ರಗಳನ್ನು ಮಾಡುತ್ತಿದ್ದರು. ಅಂಥ ಒಂದು ವಾತಾವರಣದಲ್ಲಿ ಹೊಸ ಅಲೆಯನ್ನು ಎಬ್ಬಿಸಿದರು ಲಕ್ಷ್ಮಿಬಾಯಿ. ಸತತ 32 ವರ್ಷ ಅದೇ ಕಂಪನಿಯಲ್ಲಿ ದುಡಿದು ಜೊತೆಗೆ ಏಣಗಿ ಬಾಳಪ್ಪನವರ ಹೃದಯದ ಗದ್ದುಗೆಯಲ್ಲಿ ಒಂದು ಶಾಶ್ವತವಾದ ಸ್ಥಾನವನ್ನು ಗಿಟ್ಟಿಸಿಕೊಂಡರು.

'ಕುಂಕುಮ' ನಾಟಕದಲ್ಲಿ ಬಾಲವಿಧವೆಯ ಪಾತ್ರ, ಆ ಪಾತ್ರವನ್ನು ಮಾಡುವವಳಿಗೆ ಯಾವುದೋ ಕಾರಣದಿಂದ ಆ ದಿನ ಬರುವುದು ಆಗಿರಲಿಲ್ಲ. ಆ ಬಾಲ ವಿಧವೆಯ ಪಾತ್ರವನ್ನು ಲಕ್ಷ್ಮಿಬಾಯಿಯವರು ಮಾಡಿದರು. ವಿಶೇಷವೆಂದರೆ ನಾಟಕವನ್ನು ನೋಡಿದ ಮೇಲೆ ಬಹಳಷ್ಟು ಜನ ವಿಧವೆಯರು ಪುನರ್ ವಿವಾಹವನ್ನು ಮಾಡಿಕೊಂಡರಂತೆ. ಇದೊಂದು ಸಾಮಾಜಿಕ ಬದಲಾವಣೆಗೆ ಪ್ರೇರಣೆಯಾಯ್ತು.

ಹೀಗೆ ಇವರ ಬಣ್ಣದ ತೇರು ದೂರದೂರಕೆ ಸಾಗುತ್ತ ಹೋಗುತ್ತದೆ. ವಧುವರ, ಚಲೇಜಾವ, ಧರ್ಮ ಪತ್ನಿ, ಬಡತನ ಭೂತ, ಈ ಎಲ್ಲಾ ಸಾಮಾಜಿಕ ನಾಟಕಗಳಲ್ಲಿ ನಾಯಕಿಯ ಪಾತ್ರಗಳನ್ನು ಇವರು ಮಾಡುತ್ತಿದ್ದರು.

ಸಂತ ಸಕ್ಕುಬಾಯಿ ನಾಟಕದಲ್ಲಿ ಅತ್ತೆಯ ಪಾತ್ರ ಅದೂ ಹಾಸ್ಯಪಾತ್ರ "ಶಾಲಾ ಮಾಸ್ತರ" ಸಾಮಾಜಿಕ ನಾಟಕ, ಅದರಲ್ಲಿ ಮಾಸ್ತರನ ಹೆಂಡತಿಯ ಪಾತ್ರ (ಸುಶಿಲಾ) ಇವರಿಗೆ ಹೆಚ್ಚು ಇಷ್ಟವಾದ ಪಾತ್ರಗಳು. 'ತಾಯಿ ಕರಳು' ತಾಯಿ ಪಾತ್ರ ಹೀಗೆ ಅದು ಸಾಮಾಜಿಕವಿರಲಿ, ಪೌರಾಣಿಕ ಏರಲಿ ಎಲ್ಲ ಪಾತ್ರಕ್ಕೂ ಜೀವ ತುಂಬಬಲ್ಲ ಅಭಿಜಾತ ಕಲಾವಿದೆ ಈ ಲಕ್ಷ್ಮಿಬಾಯಿ.

"ಜಗಜ್ಯೋತಿ ಬಸವಣ್ಣ" ನಾಟಕದಲ್ಲಿ ಕಲ್ಯಾಣಮ್ಮನ ಪಾತ್ರವನ್ನು ಈ 81ರ ಹರೆಯದಲ್ಲಿ ಮಾಡುತ್ತಾರೆಂದರೆ ಅಚ್ಚರಿಯಾಗುತ್ತದೆ.

"ಅಕ್ಕಮಹಾದೇವಿ" ನಾಟಕದಲ್ಲಿ ಅಕ್ಕನಪಾತ್ರ ಗೋಕಾಕ, ರಬಕವಿ, ಮಹಾಲಿಂಗಪೂರಗಳಲ್ಲಿ ಕ್ಯಾಂಪ ಹಾಕಿದಾಗ ಮೊದಲಿನ ಒಂದು ಆಟಕ್ಕೆ ಕೇವಲ ಹೆಣ್ಣು ಮಕ್ಕಳಿಗೆ ಮಾತ್ರ ಟಿಕೆಟ್ ಕೊಡುತ್ತಿದ್ದರಂತೆ ಎರಡನೇಯ ಆಟಕ್ಕೆ ಸ್ತ್ರೀ ಪುರುಷರಿಬ್ಬರಿಗೂ ಟಿಕೆಟ್ ಕೊಡುತ್ತಿದ್ದರಂತೆ. ಅಕ್ಕನ ಪಾತ್ರ ಮಹಿಳೆಯರ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿತ್ತು ಎಂಬುದು ಗೊತ್ತಾಗುತ್ತದೆ.

ಕುಂಕುಮ, ಅಕ್ಕಮಹಾದೇವಿ, ಕಿತ್ತೂರ ಚೆನ್ನಮ್ಮ, ಈ ನಾಟಕದಲ್ಲಿ ಬಾಲವಿಧವೆ, ಅಕ್ಕಮಹಾದೇವಿ, ಕಿತ್ತೂರ ಚನ್ನಮ್ಮ ಈ ಪಾತ್ರಗಳನ್ನು ಇವಳೇ ಮಾಡಬೇಕು. ಘೋರಾ ಕುಂಬಾರದಲ್ಲಿನ ಸಂತುಬಾಯಿ.

ಕುಂಕುಮ ನಾಟಕ ನಡೆದಾಗ ಅರೋಗ್ಯ ಸರಿ ಇಲ್ಲದ ಕಾರಣ ಘಟಪ್ರಭಾಕ್ಕೆ ಹೋದಾಗ ಆ ನಾಟಕವನ್ನು ಬಂದ್ ಇಡಬೇಕಾದ ಪ್ರಸಂಗ ಬತ್ತಂತೆ.

ಸುಮಿತ್ರಮ್ಮ ಕುಂದಾಪುರ ಹಾಗು ಸುಭದ್ರಮ್ಮ ಮನ್ಸೂರ ಇವರ ಬಗ್ಗೆ ಮೆಚ್ಚಿಗೆಯಿದ ಮಾತನಾಡುತ್ತಾರೆ.

ಆವತ್ತಿನ ರಂಗಭೂಮಿ ನಟಿಯರ ಬಗ್ಗೆ ತುಂಬಾ ಗೌರವ ಇತ್ತು. ಯಾವಾಗಲಾದರೂ ಒಂದು ದಿನ ನಾವು ಪೇಟೆಗೆ ಹೋಗಬೇಕಾದರೆ ತಲೆತುಂಬಾ ಸೆರಗುಹೊತ್ತುಕೊಂಡು ಎಲ್ಲಾ ಸ್ತ್ರೀಯರು ಒಟ್ಟಾಗಿ ಹೂಗುತ್ತಿದ್ದೆವು. ಚಪ್ಪಲಿ ಹಾಕಿಕೊಂಡು ರಂಗದ ಮೇಲೆ ಯಾರೂ ಬರುತ್ತಿರಲಿಲ್ಲ. ಅಂಥ ಒಂದು ಶ್ರದ್ಧೆ, ಭಕ್ತಿ ರಂಗಭೂಮಿಯ ಬಗ್ಗೆ ನಮಗೆ ಇತ್ತು ಎನ್ನುತ್ತಾರೆ ಲಕ್ಷ್ಮೀಬಾಯಿಯವರು.

ಇವತ್ತಿನ ನಟಿಯರು ವಾತಾವರಣಕ್ಕೆ ತಕ್ಕಂತೆ ಪಾತ್ರ ಮಾಡುತ್ತಾರೆ. ಯಾಕೆಂದರೆ ಅವರು ಬದುಕಬೇಕಲ್ಲ, ಶ್ರದ್ಧೆ, ಭಕ್ತಿಯ ಕೊರತೆ ಎದ್ದು ತೋರುತ್ತದೆ.

ಇಬ್ಬರು ಮಕ್ಕಳು ಏಣಗಿ ನಟರಾಜ, ಹಾಗೂ ಭಾಗ್ಯಶ್ರೀ ನೆಮ್ಮದಿಯ ಬದುಕು ನನ್ನದು. ರಂಗಭೂಮಿಯಲ್ಲಿ ನಟಿಯಾಗಿ, ಮನೆಯಲ್ಲಿ ಗೃಹಿಣಿಯಾಗಿ ತೃಪ್ತಿಯ ಬದುಕನ್ನು ನಾನು ಸಾಗಿಸುತ್ತಿದ್ದೇನೆ ಸಾಗಿಸುತ್ತಲಿದ್ದಾರೆ ಈ ಕಲಾವಿದೆ.[20]

---

[20] 14-12-2009 ರಂದು ಧಾರವಾಡ ರಜತಗಿರಿಯ ಅವರ ಮನೆಯಲ್ಲಿ ಸಂದರ್ಶನ ಮಾಡಿದ್ದು.

**ನಾಗರತ್ನಮ್ಮ ಹೊಸಮನಿ :**

ಮೂಲತಃ ಇವರು ಬಳ್ಳಾರಿಜಿಲ್ಲೆಯ ಕೊಟ್ಟೂರಿನವರು. ಇವರ ಸಾಕು ತಂದೆ ಹುಗ್ಗಿ ಕಾಳಪ್ಪನವರು. ಇವರು ಮೇಕಪ್ ಮ್ಯಾನ್ ಆಗಿ ಕಾರ್ಯ ನಿರ್ವಹಿಸುತ್ತಿದ್ದರು. ಬಣ್ಣದ ಪರಿಸರದಲ್ಲಿ ಬೆಳೆಯುತ್ತ ಸಹಜವಾಗಿ ಭಾವನೆಗಳು ಗರಿಗೆದರಿರಲಿಕ್ಕೆ ಬೇಕು. ಮಗಳ ಆಶೆಯನ್ನರಿತ ಹುಗ್ಗಿಕಾಳಪ್ಪನವರು ರಂಗದ ಮೇಲೆ ತರುವ ಮೊದಲ ಪ್ರಯತ್ನ ಮಾಡುತ್ತಾರೆ. ಅವರ ಪ್ರಯತ್ನಕ್ಕೆ ಫಲವೂ ಸಿಗದೇ ಇರಲಿಲ್ಲ. ಈ ಶ್ಯಾಮಲ ವರ್ಣದ ಹುಡುಗಿಗೆ "ಹಳ್ಳಿ ಹುಡುಗಿ" ನಾಟಕದಲ್ಲಿ ಅಭಿನಯಿಸಲು ಒಂದು ಅವಕಾಶ ಸಿಗುತ್ತದೆ. ಅದೊಂದು ಚಿಕ್ಕ ಪಾತ್ರ

ಅಲ್ಲಿಂದ ಇವಳ ಬಣ್ಣದ ಬದುಕು ಪ್ರಾರಂಭವಾಗುತ್ತದೆ. ಓದು ಬರಹ ಬಾರದ ಈ ಹುಡುಗಿ ಯಾವದೇ ಪಾತ್ರವನ್ನು ಮಾಡಲು ಸದಾ ಸಿದ್ಧಳಾಗಿರುತ್ತಿದ್ದಳು. ಬಣ್ಣದ ಮೋಹ ಅವಳ ಮೈಮನವನ್ನು ಮುತ್ತಿ ಕೊಂಡಿತ್ತು. ಪ್ರತಿಭೆ ಇದ್ದಲ್ಲಿ ಅವಕಾಶಗಳಿಗೆಲ್ಲಿ ಕೊರತೆ? ಒಂದೊಂದೆ ಮೆಟ್ಟಿಲನ್ನು ಏರತೊಡಗಿದ ನಾಗರತ್ನಮ್ಮ 'ಕಂಚಿಕೇರಿ ಕೊಟ್ರಬಸಜ್ಜ' ಇವರ ಕಂಪನಿಯಲ್ಲಿ 'ಶಾಂತಕುಮಾರಿ' ಎಂಬ ಅತೀಚಿಕ್ಕ ಪಾತ್ರ ನಾಟಕ 'ಬಹುಮಾಶಲಾ' ಅದೂ 1947 ಅಂದರೆ ಸ್ವಾತಂತ್ರ್ಯದ ಬಿಸಿ ಅದೇ ಥಾನೇ ಜನರನ್ನು ಬಡಿದೆಬ್ಬಿಸಿತ್ತು.

ಅದೇ ತಾನೇ ಸಿಕ್ಕ ಸ್ವಾತಂತ್ರ್ಯದ ಹುರುಪಿನಲ್ಲಿ ತಾನೂ ಒಂದು ಸ್ವಚ್ಛಂದ ಹಕ್ಕಿಯಾಗಿದ್ದಳು. ದಾವಣಗೇರಿಯಲ್ಲಿ ಕ್ಯಾಂಪ ಹಾಕಿದ ಗೋಕಾಕ ಬಸವಣ್ಣೆಪ್ಪನವರ "ಶಾರದಾ ಸಂಗೀತ ನಾಟಕ ಮಂಡಳಿಗೆ" ಬಂದ ನಾಗರತ್ನಮ್ಮ ಹಿಂದಿರುಗಿ ನೋಡಲೇ ಇಲ್ಲ. ಇವಳು ಆ ಕಂಪನಿಗೆ ಹೋಗುವ ಪೂರ್ವದಲ್ಲಿ ಕೆರೂರ ಶಾಂತಮ್ಮ ಒಬ್ಬರೆ ಸ್ತ್ರೀಪಾತ್ರವನ್ನು ಮಾಡುತ್ತಿದ್ದರು. 1947 ರಿಂದ 1977ರ ವರೆಗೆ ನಾಗರತ್ನಮ್ಮ ತಮ್ಮ ಇಡೀ ಆಯುಷ್ಯವನ್ನೇ ಗೋಕಾಕ ಕಂಪನಿಗೆ ಮೀಸಲಾಗಿಟ್ಟರು. ಬೇರೆ ಯಾವ ಕಂಪನಿಯತ್ತ ಇವರು ಮುಖ ಮಾಡಲೇ ಇಲ್ಲ. "ಆನು ಒಲಿದಂತೆ ಹಾಡುವೆನಯ್ಯ ಪರರ ಹಂಗು ನನಗೇಕಯ್ಯ" ಎಂಬಂತೆ ಗೋಕಾಕ ಕಂಪನಿನೇ ಇವಳಿಗೆ ತವರುಮನೆ ಗಂಡನಮನೆ ಎರಡೂ ತೆರನಾದ ಆಸರೆಯನ್ನು ನೀಡಿತು.

ಮಾತಂಗ ಕನ್ಯೆ (ಮಾತಂಗ ಕನ್ಯೆಪಾತ್ರ) ಬ್ಲಾಕ್ ಮಾರ್ಕೆಟ್ ರಾಜದ್ರೋಹ, ಚಿತ್ರಾಂಗದಾ (ನಾಗಮುನಿ) ರಕ್ತರಾತ್ರಿ (ದ್ರೌಪದಿ), ಕುರುಕ್ಷೇತ್ರ, ಜಗನ್ಮಾಯಾ, ಮಲಮಗಳು, ಅಕ್ಷಯಾಂಬರ, ಕಿತ್ತೂರ ಚೆನ್ನಮ್ಮ (ಚಿಕ್ಕಸೊಸೆ ನಗಮ್ಮನ ಪಾತ್ರ) ಸಂಪತ್ತಿಗೆ ಸವಾಲ್ (ಅತ್ತಿಗೆ ಪಾತ್ರ) ಹೀಗೆ ಹಲವಾರು ನಾಟಕಗಳಲ್ಲಿ ನಟಿಸಿದ ನಾಗರತ್ನಮ್ಮ ಒಳ್ಳೆಯ ಹೆಸರಿನ ಜೊತೆಗೆ ಕಂಪನಿಯ ಮಾಲೀಕರಿಗೆ ಒಳ್ಳೆಯ

ಕಲೆಕ್ಷನ ಕೂಡಾ ತಂದುಕೊಟ್ಟವು. ಒಂದು ವಿಶೇಷತೆಯೆಂದರೆ, ಇವಳು ನಟಿಸಿದ ಎಲ್ಲ ನಾಟಕಗಳು ಹಿಟ್ ಆಗುತ್ತಿದ್ದವು. ಅದಕ್ಕೆ ಕಾರಣವೂ ಇಲ್ಲದಿಲ್ಲ. ಬಿಡುವಿಲ್ಲದ ದುಡಿಮೆ ಇವರದು. ರಿಹರ್ಸಲ್ ನಾಟಕ, ನಾಟಕ ರಿಹರ್ಸಲ್ ಇದೇ ಇವರ ಜಗತ್ತು. ಇದನ್ನು ಬಿಟ್ಟರೆ ಉಳಿದ ಸಮಯ ಊಟ, ನಿದ್ರೆ ಸದಾ ನಾಟಕದ ಗುಂಗಿನಲ್ಲೇ ಇವಳು ಇರುತ್ತಿದ್ದಳಂತೆ. ಅಂದರೆ ಅವಳಿಗೆ ಅಭಿನಯದ ಬಗ್ಗೆ ಅಷ್ಟೊಂದು ಶ್ರದ್ಧೆ ಭಕ್ತಿ ಅವಳ ಯಶಸ್ಸಿನ ಗುಟ್ಟು ಇದೆ ಇವಳಿಗೆ ಹೊರಗಿನ ಪ್ರಪಂಚವೇ ಗೊತ್ತಿಲ್ಲ. ಅಂದಿನ ಸಮಾಜ ತಮ್ಮನ್ನು ಹೇಗೆ ನೋಡುತ್ತಿತ್ತು. ಇವತ್ತಿನ ಸಮಾಜ ಕಲಾವಿದರನ್ನು ಹೇಗೆ ನೋಡುತ್ತಲಿದೆ. ಇದ್ಯಾವದರ ಗೊಡವೆಯೂ ಅವಳಿಗಿಲ್ಲ. 'ಕಾಯಕವೇ ಕೈಲಾಸ' ಎಂಬಂತೆ ನಟನೆಯನ್ನು ಕಂಪನಿ ಮಾಲೀಕರನ್ನು ನಂಬಿ ಬದುಕನ್ನು ನಡೆಸಿದವಳು. ಅದೂ ಅಲ್ಲದೆ ಅಂದಿನ ವೃತ್ತಿರಂಗಭೂಮಿ ಚಾರಿತ್ರ್ಯ ನೈತಿಕತೆಗೆ ಬಹಳಷ್ಟು ಪ್ರಾಮುಖ್ಯತೆಯನ್ನು ನೀಡಿತ್ತು ಎಂದು ಬಹಳ ಹೆಮ್ಮೆಯಿಂದ ಹೇಳುತ್ತಾರೆ ನಾಗರತ್ನಮ್ಮ. ಮಕ್ಕಳು ಬಾಗ್ಯಶ್ರೀ, ಶಶಿಕಲಾ, ಜಯಣ್ಣ ಗೋಕಾಕ, ಜಯಣ್ಣಕೂಡಾ ಒಬ್ಬ ಒಳ್ಳೆಯ ಕಲಾವಿದ. ನಾಗರತ್ನಮ್ಮರ ಅಳಿಯ ಎಂ.ಎಸ್. ಕೊಟ್ರೇಶಪ್ಪ ಅವರೂ ಒಬ್ಬ ನಟ, ನಾಟಕಕಾರ ಒಟ್ಟಾರೆ ಗೋಕಾಕರ ಗರಡಿಯಲ್ಲಿ ಬೆಳೆದ, ಇವರದೊಂದು ಕಲಾವಿದರ ಕುಟುಂಬ ಎಂದರೆ ತಪ್ಪಲ್ಲ.[21]

**ಫ್ಲೋರಿನಾ ಗದಗ :**

ಬಣ್ಣದ ಬದುಕಿಗೆ ಅಂಟಿಕೊಂಡಿರುವ ಕಲಾವಿದರ ಬಣ್ಣ ಮಾಸಿರಬಹುದು. ಅವರಲ್ಲಿರುವ ಕಲೆ ಎಂದಾದರೂ ಮಾಸಲು ಸಾಧ್ಯವೇ? 'ಹಾಸ್ಯರತ್ನ' ಎಂಬ ಬಿರುದಿನ ಮೂಲಕ ಒಂದು ಕಾಲಕ್ಕೆ ಎಲ್ಲರ ಮನ ಸೂರೆಗೊಂಡ ನಟಿ ಫ್ಲೋರಿನಾ ಗದಗ. ಅವರನ್ನು ಭೇಟಿಯಾಗಲು ಗದಗದ ಐತದೇವರ ಗುಡಿಯ ಹತ್ತಿರ ಿರುವ ಅವರ ಮನೆಗೆ ಹೋದಾಗ ಚಹಾದ ಜೋಡಿ ಚೂಡಾದ್ಹಂಗ ಪತಿ ಕೊಟ್ರಪ್ಪನವರ ಕೂಡ ಚಹಾ ಕುಡಿಯುತ್ತ ಕುಳಿತಿದ್ದರು. ಆತ್ಮೀಯತೆಯಿಂದ ನಮ್ಮೊಂದಿಗೆ ಮಾತಿಗೆ ಇಳಿದರು.

ಹಾವೇರಿ ಜಿಲ್ಲೆಯ ಗುತ್ತಲದಲ್ಲಿ ಹುಟ್ಟಿದ ಫ್ಲೋರಿನಾ 14 ವರ್ಷದವಳಿದ್ದಾಗ ರಂಗಭೂಮಿಗೆ ಪ್ರವೇಶವಾಯ್ತು. ಗೋಕಾಕ ಬಸವಣ್ಣೆಪ್ಪನವರ ಕಂಪನಿಯಲ್ಲಿ ಮೊದಲ ಅಭಿನಯ. 1954–58ರಲ್ಲಿ ಇದೇ ಸಮಯದಲ್ಲಿ ಕೊಟ್ರಪ್ಪನವರ "ಕೊಟ್ಟೂರೇಶ್ವರ ನಾಟ್ಯ ಸಂಘ" ಗದಗ ಕಂಪನಿಯೂ ಚಾಲ್ತಿಯಲ್ಲಿತ್ತು. ಧುತ್ತರಗಿ ಅವರ "ತಾಯಿಯ ಕರಳು" ನಾಟಕದ ಸರಸ್ವತಿಯ ಪಾತ್ರಕ್ಕೆ ಒಬ್ಬ ನಟಿಯ ಅವಶ್ಯಕತೆಯಿತ್ತು.

---

[21] 15–12–2009 ರಂದು ಧಾರವಾಡದಲ್ಲಿ ಸಂದರ್ಶನ ಮಾಡಿದ್ದು.

ಬಳ್ಳಾರಿ ಜಿಲ್ಲೆಯ ಕೊಟ್ಟೂರಕ್ಕೆ ಯಾರೋ ಹೇಳಿದಪ್ರಕಾರ ಪ್ಲೋರಿನಾ ಅವರನ್ನು ನೋಡಲು ಹೋದರು. ಅವರ ಕಪ್ಪುವರ್ಣವನ್ನು ನೋಡಿ ಕೊಟ್ರಪ್ಪನವರು ತಗೀ ಇದೇನ ಪಾತ್ರ ಮಾಡತದೋ ಮಾರಾಯ" ಅಂದಿದ್ದರಂತೆ, ನೇರಳೆ ಹಣ್ಣು ಕಪ್ಪಾದರೂ ರುಚಿಯಲ್ಲವೇ? ಅವ್ವ ಮಾಡೋ ಪಾತ್ರಾನಾದರೂ ನೋಡು ಎಂದು ಗೆಳೆಯರ ಒತ್ತಾಯದ ಮೇರೆಗೆ ಒಲ್ಲದ ಮನಸ್ಸಿನಿಂದ ಪ್ಲೋರಿನಾ ಅವರನ್ನು ಕರೆತಂದದ್ದು ಏನೂ ಕೆಡುಕಾಗಲಿಲ್ಲ. ಪ್ಲೋರಿನಾ ಇವರ ಕಂಪನಿಗೆ ಕಾಲಿಟ್ಟಮೇಲೆ ಕಂಪನಿಗೆ ಸಾಕಷ್ಟು ಲಾಭವಾಯ್ತು. ಸಿನೇಮಾದಲ್ಲಿ ಕರೆಬಂದರೂ ಕೊಟ್ರಪ್ಪನವರು ಪ್ಲೋರಿನಾ ಅವರನ್ನು ಬಿಟ್ಟುಕೊಡಲಿಲ್ಲ. ಕಲೆ ಇಬ್ಬರನ್ನೂ ದಾಂಪತ್ಯ ಜೀವನಕ್ಕೆ ಬಂದಿಸಿತ್ತು. ಕ್ಷಣಿಕ ಸುಖಕ್ಕಾಗಿ ಸ್ನೇಹ ಬೆಳೆಸದೆ ಈ ಇಳಿಹೊತ್ತಿನಲ್ಲಿ ಒಬ್ಬರಿಗೊಬ್ಬರು ಊರುಗೋಲಾಗಿ ಅನ್ಯೋನ್ಯತೆಯಿಂದಿರುವುದು ನೋಡಿದರೆ ಯುವಪೀಳಿಗೆ ನಾಚಲೇಬೇಕು.

ಹೆಚ್ಚಾಗಿ ಹಾಸ್ಯ ಪಾತ್ರದಲ್ಲಿ ಮಿಂಚಿದ ಪ್ಲೋರಿನಾ ಬದಾಮಿ-ಬನಶಂಕರಿ ಕ್ಯಾಂಪನಲ್ಲಿದ್ದಾಗ ಬಹುಶ 1974ರಲ್ಲಿದ್ದಿರಬಹುದು. ಬಿ. ಜಯಾ ಮತ್ತು ಎಂ. ಎನ್. ಲಕ್ಷ್ಮಿದೇವಿ ಬಂದಿದ್ದರು. 'ರತ್ನ ಮಾಂಗಲ್ಯ ನಾಟಕದಲ್ಲಿ ಮಾಳಿಯ ಪಾತ್ರ ಆದರೆ ಕುಳಿತ ಪ್ರೇಕ್ಷಕರು ಪ್ಲೋರಿನಾನೆ ಬೇಕು ಎಂದು ಗಲಾಟೆಮಾಡಿದರು. ಅದೇ ರೀತಿ ಹಾವೇರಿ ಕ್ಯಾಂಪನಲ್ಲಿ ಕಟ್ಟಿದ ತಾಳಿ ನಾಟಕದಲ್ಲಿ ಜಾನಕಿ ಪಾತ್ರಕ್ಕೂ ಹೀಗೆ ಆಗಿತ್ತು. ಇದನ್ನೆಲ್ಲ ನೋಡಿದಾಗ ಇವಳ ಪಾತ್ರ ಪ್ರೇಕ್ಷಕರ ಮೇಲೆ ಎಂಥ ಛಾಪು ಒತ್ತಿತ್ತು ಎಂಬುದು ಗೊತ್ತಾಗುತ್ತದೆ. ಕೆಲವೊಂದು ಊರಲ್ಲಿ ಇವಳು ಇರದೇ ಇದ್ದಾಗ ಪ್ರೇಕ್ಷಕರು ನಾಟಕ ಬಂದ್ ಇಟ್ಟಿದ್ದಾರಂತೆ.

'ಬಂಜೆ ತೊಟ್ಟಿಲ'ದಲ್ಲಿಯ ಸಂಗವ್ವನ ಪಾತ್ರ ಒಳ್ಳೆಯ ಹೆಸರನ್ನು ತಂದುಕೊಟ್ಟಿತು. "ಮನೆ ಎರಡು ಮನ ಒಂದು" ನಾಟಕದಲ್ಲಿಯ ಗಂಗಾನ ಪಾತ್ರಕ್ಕೆ (ಜಮಖಂಡಿ ಕ್ಯಾಂಫನಲ್ಲಿದ್ದಾಗಿನ ಘಟನೆ) ಒಬ್ಬ ವಕೀಲರು ತಮ್ಮ ಹೆಂಡತಿಯ ಜೊತೆಗೆ ನಾಟಕ ನೋಡಲು ಬಂದವರು ಪಕ್ಕದಲ್ಲಿ ತಮ್ಮ ಹೆಂಡತಿ ಇದ್ದಾಳೆ ಎಂಬುದನ್ನು ಮರೆತು ಗಂಗಾನ ಪಾತ್ರಕ್ಕೆ ಮಾರುಹೋಗಿದ್ದರು. ಅಷ್ಟೇ ಅಲ್ಲ, ಮತ್ತೆ ಮತ್ತೆ ನಾಟಕ ನೋಡುವ ನೆಪಮಾಡಿಕೊಂಡು ಗಂಗಾನ ಪಾತ್ರದಲ್ಲಿರುವ ಪ್ಲೋರಿನಾ ಅವರನ್ನು ಮದುವೆಯಾಗುವಂತೆ ಅಂಗಲಾಚಿದ್ದು ಉಂಟಂತೆ. ಆದರೆ ಪ್ಲೋರಿನಾ ಅದಕ್ಕೆ ಆಸ್ಪದ ಕೊಡಲಿಲ್ಲ. ಕಲೆಗೂ, ಪತಿಗೂ ಎಂದೂ ದ್ರೋಹ ಬಗೆದವಳಲ್ಲ ಈ ಪ್ಲೋರಿನಾ.

ರಂಗಭೂಮಿ ಎಂದರೆ ಹೀನಾಯವಾಗಿ ನೋಡುವ ಕಾಲದಲ್ಲಿ ರಂಗ ಪ್ರವೇಶ ಮಾಡಿದ ಈ 80ರ ಅಂಚಿನಲ್ಲಿರುವ ಪ್ಲೋರಿನಾ ಆ ಗತವೈಭವದ ದಿನಗಳನ್ನು ನೆನಪಿಸಿಕೊಂಡುದ್ದು ಹೀಗೆ ಆಗ ಧುತ್ತರಗಿ, ಸಾಳುಂಕೆ ಎಚ್.ಎನ್.ಹೂಗಾರ ಮಾಂಡ್ರೆ ಅಂಥ ಒಳ್ಳೇಯ ಕವಿಗಳು ಇದ್ದರು. ನಿಷ್ಠೆಯಿಂದ ದುಡಿಯುವ ನಟ-ನಟಿಯರು ಇದ್ದರು ಈಗ ಒಳ್ಳೇಯ ಕವಿಗಳು ಇಲ್ಲ. ಎಲ್ಲಾ ಡಬಲ್ ಮೀನಿಂಗ ಬಂದ ಮೇಲೆ ರಂಗಭೂಮಿ ನಶಿಸಿಹೋಗುತ್ತಿದೆಎಂಬ ವಿಷಾದ ಅವರ ಧ್ವನಿಯಲ್ಲಿತ್ತು.

'ರಂಗಭೂಮಿಯ ಪಾರಿವಾಳವೆಂದು' ಬಿರುದು ಪಡೆದ ಸುಮಾರು 50 ವರ್ಷಗಳವರೆಗೆ ಬಣ್ಣದ ಬದುಕಿನಲ್ಲಿ ಕಲಾ ಸಾಮ್ರಾಜ್ಞೆಯಾಗಿ ಮೆರೆದ ಈ ಅನರ್ಘ್ಯ ರತ್ನವನ್ನು ಎಂದಾದರೂ ಮರೆಯಲು ಸಾಧ್ಯವೇ?

1994ರಲ್ಲಿ ಅಕ್ಯಾಡಮಿ ಪ್ರಶಸ್ತಿ ಪಡೆದ ಫ್ಲೋರಿನಾಗೆ ರಾಜ್ಯ ಪ್ರಶಸ್ತಿ ಪಡೆಯುವ ಹಂಬಲ. ಮಾಶಾಸನದ ದಾರಿ ಕಾಯುತ್ತಲಿದ್ದಾಳೆ.[22]

**ಜಯಲಕ್ಷ್ಮಿ ಪಾಟೀಲ :**

28-6-2009 ರಂದು ಹುಬ್ಬಳ್ಳಿಯ ಅಕ್ಷಯ ಪಾರ್ಕ ಹತ್ತಿರವಿರುವ ಪ್ರಿಯದರ್ಶಿನಿ ಕಾಲನಿಯಲ್ಲಿರುವ ಅವರ ಮನೆಯಲ್ಲಿ ಜಯಲಕ್ಷ್ಮೀಯವರನ್ನು ಭೇಟಿಯಾಗುವ ಅವಕಾಶ ಸಿಕ್ಕಿತು.

ಅಪ್ಪ ಚನ್ನಬಸಪ್ಪ ಕವಲಿ ತಾಯಿ ರಾಧಾಬಾಯಿ ಇಬ್ಬರೂ ಕಲಾವಿದರೆ. ಅಪ್ಪ ಅಮ್ಮ ಕಲಾವಿದರೆಂದಾಗ ಸಹಜವಾಗಿ ಆ ಬಣ್ಣ ಇವರ ರಕ್ತದಲ್ಲಿ ಹರಿದಿರಬಹುದು. ಬಣ್ಣದ ಬದುಕು ನಟನೆ, ನಾಟಕ ಎಂದರೇನೆಂದು ತಿಳಿಯುವ ಮೊದಲೇ, ಮೂರು ತಿಂಗಳ ಮಗುವಾಗಿದ್ದಾಗ ಚಿತ್ರಾಂಗದಾ ನಾಟಕದಲ್ಲಿ ಇವರ ತಾಯಿ ಚಿತ್ರಾಂಗದೆಯಾಗಿ ಪಾತ್ರ ಮಾಡುತ್ತಿರಬೇಕಾದರೆ, ಗೊಂಬೆಯ ಬದಲು ಈ ಹಸುಳೆಯನ್ನೆ ತೆಗೆದುಕೊಂಡು ಆ ತಾಯಿ ಪಾತ್ರ ಮಾಡುತ್ತಿದ್ದಳಂತೆ. ಹೀಗೆ ಹಸುಳೆಯಾಗಿ ಬಣ್ಣದ ಬದುಕಿಗೆ ಕಾಲಿಟ್ಟ ಈ ಸಸಿ ಈಗ ಬೆಳೆದು ಹೆಮ್ಮರವಾಗಿದೆ. ಖ್ಯಾತ ಸಿನೆಮಾ ನಟರು ವಿಷ್ಣುವರ್ಧನ ಅವರ ತಂದೆ ನಾರಾಯಣರಾಯರು ಕವಿಗಳಾಗಿದ್ದರು. ಅವರೊಂದು 'ಸತ್ಯನಾರಾಯಣ ಕಥೆ' ಎಂಬ ನಾಟಕವನ್ನು ಬರೆದಿದ್ದರು. ಆ ನಾಟಕದ ಕೇಂದ್ರಬಿಂದು ಒಬ್ಬ ಬಡಬ್ರಾಹ್ಮಣ. ಆ ಬ್ರಾಹ್ಮಣನ ಮಗನ ಪಾತ್ರವನ್ನು ಐದು ವರ್ಷದವಳಿದ್ದಾಗ, "ಗಜಾನನ ನಾಟಕ ಮಂಡಳಿ ಜಮಖಂಡಿ" ಈ ಕಂಪನಿಯಲ್ಲಿ ಪಾತ್ರಮಾಡಿದ್ದಳು. ತದನಂತರ ಜಯಲಕ್ಷ್ಮಿ ಅವರ ತಂದೆ ಚನ್ನಬಸಪ್ಪ ಕವಲಿ ಅವರ "ಕಲಾಪ್ರಕಾಶ ನಾಟ್ಯ ಸಂಘ ಬ್ಯಾಡಗಿ" ಈ ಕಂಪನಿಯಲ್ಲಿ 'ಕೊಂಡು ತಂದ ಗಂಡ' ನಾಟಕದ ಮೂಲಕ ನಾಯಕಿಯ ಪಾತ್ರದಲ್ಲಿ ಮಿಂಚತೊಡಗಿದರು. 1970ರಲ್ಲಿ ಬಿ. ಆರ್. ಅರಿಶಿನಗೋಡಿಯವರ ಕಂಪನಿಯಲ್ಲಿ 'ಬಸಕಂಡಕ್ಟರ್' ನಾಟಕದಲ್ಲಿ ಉಮಾನ ಪಾತ್ರ, ಒಳ್ಳೆಯ ಹೆಸರನ್ನು ತಂದುಕೊಟ್ಟಿತು. ಲಂಚಸಾಮ್ರಾಜ್ಯ, ಹೆಣ್ಣುಮಗಳು, ಗರೀಬಿ ಹಟಾವೋ, ಹಲವು ನಾಟಕಗಳ ಮೂಲಕ ಬೆಳಕಿಗೆ ಬಂದ ಜಯಲಕ್ಷ್ಮೀ ಆ ಕಂಪನಿಯನ್ನು ತೊರೆದು 1977ರಲ್ಲಿ ಸುಳ್ಳದ ದೇಸಾಯಿಯವರ ಕಂಪನಿಗೆ ಬಂದರು. ಕ್ಯಾಂಪ ಗಂಗಾವತಿಯಲ್ಲಿ 'ವೀರಸಿಂಧೂರಲಕ್ಷ್ಮಣ' ನಾಟಕವಾಡುತ್ತಿತ್ತು. ಆ ನಾಟಕದಲ್ಲಿನ ಮೇರಿ ಪಾತ್ರವನ್ನು

---

[22] 20-5-2009 ರಂದು ಗದಗನಲ್ಲಿ ಸಂದರ್ಶನ ಮಾಡಿದ್ದು.

ಮೆಚ್ಚಿ ಅದೆಷ್ಟೋ ಜನ ಪ್ರೇಕ್ಷಕರು ಪ್ರೀತಿಯ ಕಾಣಿಕೆಯಾಗಿ ಕ್ರಾಸ್ ಕೊಟ್ಟು ಹೋಗುತ್ತಿದ್ದರಂತೆ. ಆ ಪಾತ್ರ ಪ್ರೇಕ್ಷಕರ ಮನಸ್ಸಿನ ಮೇಲೆ ಎಂಥ ಪ್ರಭಾವಬೀರಿತ್ತು ಎಂಬುದು ಗೊತ್ತಾಗುತ್ತದೆ.

ಸುಳ್ಯದ ದೇಸಾಯಿಯವರ ಕಂಪನಿಯಲ್ಲಿದ್ದಾಗಲೇ ಸರೋಜಮ್ಮ ದುತ್ತರಗಿ ಇವಳಿಗೆ ನೃತ್ಯ, ನಟನೆ ಎಲ್ಲವನ್ನು ಕಲಿಸಿಕೊಟ್ಟ ಗುರು. ಆದರೆ 1978ರಲ್ಲಿ ಕಂಪನಿ ಅಗ್ನಿಅನಾಹುತಕ್ಕೆ ಒಳಗಾಯ್ತು. ಮತ್ತೆ ಹೊಡಮರಳಿ ಅರಿಶಿನಗೋಡಿ ಹಾಗೂ ಗುಡಗೇರಿ ಅವರ ಕಂಪನಿಗೆ ಬರಬೇಕಾಯ್ತು. ಗುಡಗೇರಿ ಕಂಪನಿ ಗುಲಬರ್ಗಾದಲ್ಲಿ ಕ್ಯಾಂಪ ಹಾಕಿತ್ತು. ರೈತನ ಮಕ್ಕಳು ನಾಟಕದಲ್ಲಿ 'ವಂದನಾ' ಕಾಮಿಡಿ ಪಾತ್ರ ಹೆಚ್ಚು ಕಲೆಕ್ಷನ್ ತಂದುಕೊಟ್ಟಿತು. ಜನರ ನಾಡಿಮಿಡಿತವನ್ನು ಅರಿತ ಜಯಲಕ್ಷ್ಮಿ ಮೊದಮೊದಲು ನಾಯಕಿಯ ಪಾತ್ರದಲ್ಲಿ ಮಿಂಚುತ್ತಿದ್ದವಳು. ಕಾಮಿಡಿಗೆ ಜಂಪಾದರು. ಆಗ ಚಿಕ್ಕ ಕಂಪನಿ ಹಲವಾರು, ಈಗ ದೊಡ್ಡ ಕಂಪನಿ ಕೆಲವಾರು. ನಾಟಕದಲ್ಲಿನ ಯಾವದೋ ಒಂದು ದೃಶ್ಯಕ್ಕೆ ಜಯಲಕ್ಷ್ಮಿ ಲೆಕ್ಚರ್ ಕೊಡುವ ಸನ್ನಿವೇಶ ಇರಲೇಬೇಕು. ಆ ಲೆಕ್ಚರ್ ಅನ್ನು ಕೊಡುವ ಸನ್ನಿವೇಶವನ್ನು ನೋಡಲೆಂದೇ ಪ್ರೇಕ್ಷಕರು ಉತ್ಸುಕರಾಗಿರುತ್ತಿದ್ದರಂತೆ.

ಕಣವಿ ಕವಿಗಳು ಬರೆದ 'ಹಸಿರು ಬಳೆ' ರೇಡಿಯೋ ನಾಟಕ ಅದರಲ್ಲಿನ ಪಾರ್ವತಿಯ ಪಾತ್ರ ಅದು ಕ್ಯಾಸೆಟ್ ಕೂಡಾ ಆಗಿದೆ. ಇದರಿಂದ ಇವರಿಗೆ ಹೆಚ್ಚು ಪ್ರಚಾರ ಸಿಕ್ಕಿತು. ಒಂದು ಲೇಡಿಜ್ ಟ್ರೂಪ್ ಕಟ್ಟಿಕೊಂಡು ಇಲಕಲ್ ಹತ್ತಿರ ದೋಟಿಹಾಳ ಊರಲ್ಲಿ 'ಸಮಾಜಕ್ಕೊಂದು ಕನ್ನಡಿ' ಎಂಬ ನಾಟಕವನ್ನು ಆಡಿ ಜನರ ಮೆಚ್ಚುಗೆಗೆ ಪಾತ್ರರಾದರು. ಕೆ.ಬಿ.ಆರ್. ಕಂಪನಿಯಲ್ಲಿ ಪೋಲೀಸನ ಮಗಳು ನಾಟಕದಲ್ಲಿ (ಗುಲಬರ್ಗಾದ ಹತ್ತಿರ ಶಹಾಪೂರದಲ್ಲಿ ಕ್ಯಾಂಪ) ಶೀಲಾನ ಪಾತ್ರ ಹಾಗೂ ತಾಯಿಯ ಪಾತ್ರ ಎರಡನ್ನೂ ಮಾಡಿ ಸೈ ಎನಿಸಿಕೊಂಡಿದ್ದುಂಟು. ಲೀಲಮ್ಮ ನನ್ನ ತಾಯಿ, ಗುರು, ಜೊತೆಗೆ ಒಳ್ಳೆಯ ಪ್ರೆಂಡ್ಸಕೂಡ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ ಜಯಲಕ್ಷ್ಮಿ.

ಈ ಬಣ್ಣದ ಬದುಕು ಹೀಗೇನೇ, ಇವರಿಗೊಂದು ನಿಶ್ಚಿತತೆ ಎನ್ನುವುದು ಇರುವುದಿಲ್ಲ. ಅನಿಶ್ಚಿತತೆ ಯಾವಾಗಲೂ ಇವರನ್ನು ಕಾಡುತ್ತಿರುತ್ತದೆ. ಯಾಕೆಂದರೆ ತಾಯಿಯಂತಿದ್ದ ಲೀಲಮ್ಮನವರ ಕಂಪನಿಯನ್ನು ಬಿಟ್ಟು ಮಂಗಳೂರಿನ ಪಿ.ಬಿ.ರೈ ಅವರ ಕಂಪನಿಯಲ್ಲಿ ಮನೆ ಬೆಳಗಿದ ಸೊಸೆ, ಗೋಮುಖವ್ಯಾಘ್ರ, ಎಚ್ಚರ ತಂಗಿ ಎಚ್ಚರ, ನಾಟಕದಲ್ಲಿ ನಟನೆ ಇವರಿಗೆ ಕನ್ನಡದ ಬಗ್ಗೆ ಏನೋ ಹೆಮ್ಮೆ ಯಾಕೆಂದರೆ, ಅಲ್ಲಿ ಕಲೆ ಇನ್ನೂ ಜೀವಂತವಾಗಿ ಉಳಿದಿದೆ. ಅದು ನನಗೆ ತುಂಬಾ ಹಿಡಿಸಿತು ಎನ್ನುವ ಜಯಲಕ್ಷ್ಮೀ ವೃತ್ತಿರಂಗದ ಜೊತೆಜೊತೆಗೆನೆ ಸಿನೇಮಾ, ಹವ್ಯಾಸಿ, ಕಿರುತೆರೆ ಎಲ್ಲವನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಬಹು ಮುಖಿ ಪ್ರತಿಭೆಯ ನಟಿ ಈ ಜಯಲಕ್ಷ್ಮಿ. ಜೀವನದಲ್ಲಿ ಸಾಕಷ್ಟು ಕಹಿಯನ್ನುಂಡು ಗಟ್ಟಿಯಾಗಿದ್ದಾರೆ ನನ್ನಲ್ಲಿ ಶಕ್ತಿ ಇರುವವರೆಗೂ ನನ್ನ ಅನ್ನವನ್ನು ನಾನೇ ಸಂಪಾದಿಸಿಕೊಳ್ಳಬೇಕೆಂಬ ಛಲ ಇವರದು.

ಬಹಳಷ್ಟು ಜನ ಕಲಾವಿದರಿಗೆ ಅಭದ್ರತೆ ಕಾಡುತ್ತಿರುತ್ತದೆ. ಅವರ ಬದುಕಿನಲ್ಲಿ ಶಿಸ್ತು ಎನ್ನುವುದು ಇರುವುದಿಲ್ಲ. ನಮ್ಮ ವೃತ್ತಿಯ ಬಗ್ಗೆ ನಮಗೆ ಹೆಮ್ಮೆ ಇರಬೇಕು. ಕೀಳರಿಮೆ ಬೇಡ. ಹಳೆ ಮೈಸೂರಿನಲ್ಲಿ ರಾಜಮಹಾರಾಜರ ಕಾಲದಿಂದಲೂ ಕಲೆಗೆ ಬೆಲೆ ಇದೆ. ಆದರೆ ಉತ್ತರ ಕರ್ನಾಟಕದಲ್ಲಿ ಇಲ್ಲ. ಎಲ್ಲರಿಗೂ ಸಮಾನ ಅವಕಾಶ ಸಿಗಬೇಕು ಎಂಬ ಸದುದ್ದೇಶ ಇವರದು.

ಜೋಳದ ರಾಶಿ ದೊಡ್ಡನ ಗೌಡ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡಮಿ ಪ್ರಶಸ್ತಿ 1992ರಲ್ಲಿ, ಹುಬ್ಬಳ್ಳಿ ಧಾರವಾಡ ಮಹಾನಗರ ಸಭೆ ರಾಜ್ಯೋತ್ಸವ ಪ್ರಶಸ್ತಿ, ಗುಲಬರ್ಗಾದ ನಾಗರಿಕರಿಂದ 'ರಂಗನಾಯಕಿ' ಪ್ರಶಸ್ತಿ ದೊರಕಿವೆ. ರಂಗಭೂಮಿ ಕೊಡುವ ತೃಪ್ತಿ ಕಿರುತೆರೆಯಲ್ಲಿ ಇಲ್ಲವೆನ್ನುತ್ತಾರೆ ಜಯಲಕ್ಷ್ಮಿ.

**ಶಾಂತಮ್ಮ ಪತ್ತಾರ :**

ಮೂಲತಃ ಇಲಕಲ್‌ದವರಾದ ಶಾಂತಮ್ಮ ಅಪ್ಪ ಈರಪ್ಪ ಪತ್ತಾರ. ಹಾರ್ಮೋನಿಯಂ ಮಾಸ್ತರಾಗಿದ್ದರು. ಸಂಗೀತದ ಸ್ವರಗಳನ್ನು ಕೇಳುತ್ತಲೇ ಬೆಳೆದ ಈ ಹುಡುಗಿಗೂ ಒಳೊಗೊಳಗೆ ಸಂಗೀತ ಕಲಿಯಬೇಕೆಂಬ ಅದಮ್ಯ ಆಶೆ ಮೂಡಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಏಳು ವರ್ಷದವಳಿದ್ದಾಗಲೇನೆ ಬಡಿಗೇರ ಅಯ್ಯಪ್ಪ ಮಾಸ್ತರರ ಹತ್ತಿರ ಸಂಗೀತಾಭ್ಯಾಸ, ಮುಂದೆ ಕುಷ್ಟಗಿಯಲ್ಲಿ ಹೆಚ್ಚಿನ ಅಭ್ಯಾಸ ಮುಂದುವರೆಸಿದಳು. ಈ ಪುಟ್ಟಪೋರಿ 10 ವರ್ಷದವಳಿದ್ದಾಗ ತಂದೆಯ ಅಕಾಲಿಕ ನಿಧನದಿಂದಾಗಿ ಸಂಗೀತಾಭ್ಯಾಸಕ್ಕೆ ಒಂದಿಷ್ಟು ಅಡತಡೆಯಾದರೂ, ಕಲಿತ ಸಂಗೀತ ಈ ಹುಡುಗಿಯ ಕೈ ಬಿಡಲಿಲ್ಲ.

ಅಂದಿನ ವೃತ್ತಿನಾಟಕಗಳು ಸಂಗೀತ ಪ್ರಧಾನವಾದಂತ ನಾಟಕಗಳನ್ನೇ ಪ್ರದರ್ಶಿಸುತ್ತಿದ್ದವು. ಅದಕ್ಕೊಂದು ಭೂಮಿಕೆಯಾಯ್ತು ಇವಳು ಕಲಿತ ಸಂಗೀತ, ಹನ್ನೆರಡನೇಯ ವರ್ಷಕ್ಕೆ ಊರಲ್ಲಿ, ಊರ ಸುತ್ತಲಿನ ಹಳ್ಳಿಗಳಲ್ಲಿ ಆಡುವ ಗ್ರಾಮೀಣ ನಾಟಕಗಳಲ್ಲಿ ಚಿಕ್ಕಪುಟ್ಟ ಪಾತ್ರಗಳನ್ನು ಮಾಡುತ್ತ ಬಳ್ಳಾರಿ ಲಲಿತಮ್ಮನವರ ಕಂಪನಿಯಿಂದ ಇವಳ ಬಣ್ಣದ ಬದುಕು ಪ್ರಾರಂಭವಾಯ್ತು. ಎಚ್. ಟಿ. ಮಹಾಂತೇಶಶಾಸ್ತ್ರಿ ಅವರು ವಿರಚಿತ 'ಅಕ್ಕ-ತಂಗಿ' ನಾಟಕ ಗುಲಬರ್ಗಾ ಕ್ಯಾಂಪ, ಎರಡು ವರ್ಷ ಪ್ರದರ್ಶನ ಕಂಡಿತು. ಆ ಕಂಪನಿಯಲ್ಲಿ ಮೂರ್‍ನಾಲ್ಕು ವರ್ಷ ಸರ್ವಿಸ್ ಲಂಚಸಾಮ್ರಾಜ್ಯ, ಆಸ್ತಿಪಾಲು, ಹೆಣ್ಣುಮಗಳು. ಈ ನಾಟಕಗಳಲ್ಲಿ ನಾಯಕಿಯ ಪಾತ್ರದಲ್ಲಿ ಮಿಂಚಿದ ಈ ಕಲಾವಿದೆ ಗುಡಗೇರಿ ಕಂಪನಿಯಲ್ಲಿ ಶಾಶ್ವತವಾಗಿ ತನ್ನ ನೆಲೆಯನ್ನು ಕಂಡುಕೊಳ್ಳುತ್ತಾಳೆ. ಸುಮಾರು ಹದಿನೈದು ವರ್ಷಗಳ ತನಕ ಮುಖಕ್ಕೆ ಬಣ್ಣ ಒರೆಸಲೂ ಸಹ ಪುರುಸೊತ್ತಿಲ್ಲದ ಬೇಡಿಕೆಯ ಕಲಾವಿದೆಯಾಗಿ ಬೆಳೆಯುತ್ತಾಳೆ. ಸೂಳೀಮಗ, ಕಲಿಯುಗ ರಾಮ, ಹೈಬ್ರಿಡ್ ಹೆಣ್ಣು, ಚಿತ್ರಾಂಗದಾ, ಗೌಡ್ರಗಂಗಿ, ಹರಿಶ್ಚಂದ್ರ ಹೀಗೆ ಹಲವಾರು ನಾಟಕಗಳಲ್ಲಿ ನಾಯಕಿ ಪ್ರಧಾನವಾದಂತ ನಾಟಕಗಳಲ್ಲಿ ಕಾಲುಸೋಲುವತನಕ, ನಟನೆ ಮುಂದುವರಿಯುತ್ತದೆ.

ತದನಂತರ ಹವ್ಯಾಸಿಯ ಕಡೆ ಒಂದಿಷ್ಟು ಮುಖ ಮಾಡಿದ್ದುಂಟು. ರಕ್ತರಾತ್ರಿ, ಅಕ್ಷಯಾಂಬರ, ಕುರುಕ್ಷೇತ್ರ ಮುಂತಾದ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುತ್ತ ವೃತ್ತಿಗೆ ಚ್ಯುತಿಬಾರದಂತೆ ಇತ್ತಮಕ್ಕಳ ಶಿಕ್ಷಣಕ್ಕೂ ಅಡ್ಡಿಯಾಗದಂತೆ ಮೂರು ಮಕ್ಕಳಿಗೂ ಉನ್ನತ ಶಿಕ್ಷಣವನ್ನು ಕೊಟ್ಟು ತಮ್ಮ ಕಾಲ ಮೇಲೆ ತಾವು ನಿಲ್ಲುವಂತೆ ಮಾಡಿದ್ದಾರೆ. ರೇಣುಕಾ, ಪ್ರಾಥಮಿಕ ಶಾಲಾ ಶಿಕ್ಷಕಿ, ಸಂತೋಷಿ ಕನ್ನಡ ಪ್ರಾಧ್ಯಾಪಕಿ (ಇಲಕಲ್ ಸರಕಾರಿ ಡಿಗ್ರಿ ಕಾಲೇಜು) ಕಾಂಚನಾ (ಡಿಪ್ಲೋಮಾ ಇನ್ ಕಂಪ್ಯೂಟರ್) ಕಲಾವಿದರ ಬದುಕು ಅಲೆಮಾರಿಗಳ ಬದುಕು. ಹೀಗಾಗಿ ಬಹಳಷ್ಟು ಕಲಾವಿದರ ಮಕ್ಕಳು ಯೋಗ್ಯಶಿಕ್ಷಣ ಸಿಗದೇ ಅತಂತ್ರಸ್ಥಿತಿಯಲ್ಲಿ ಕಾಲವನ್ನು ಕಳೆಯಬೇಕಾಗುತ್ತದೆ. ಕಲಾವಿದರಿಗೂ ಅದೊಂದು ನೆಪ. ಈ ಶಾಂತಮ್ಮ ಮಾತ್ರ ಎಲ್ಲ ಅಡತಡೆಗಳ ನಡುವೆಯೂ ತನ್ನ ಬಣ್ಣದ ಬದುಕಿನ ಜೊತೆಗೆ ಮಕ್ಕಳ ಬದುಕನ್ನೂ ರೂಪಿಸಿದ್ದಾಳೆ. ಒಬ್ಬ ತಾಯಿಯಾಗಿ ತನ್ನ ಕರ್ತವ್ಯವನ್ನು ಪೂರೈಸಿದ್ದಾಳೆ. ಇದಕ್ಕಿಂತ ಸಂತೋಷ ಇನ್ಯಾವದಿದೆ. ಕಲೆಯನ್ನು ಗೌರವಿಸುವ ಮನಸ್ಸು ಆ ಮೂವರು ಹೆಣ್ಣುಮಕ್ಕಳಲ್ಲಿದೆ.

ಇತ್ತೀಚಿತ್ತಲಾಗಿ ಸ್ನೇಹರಂಗ, ಕಲಾಮಾಧ್ಯಮ ತಂಡದವರು ಆಡುವ ಹೊಸ ಅಲೆಯ ನಾಟಕಗಳಲ್ಲಿಯೂ ಪಾತ್ರಮಾಡಿದ್ದುಂಟು. ಆರವತ್ತೈದರ ಅಂಚಿನಲ್ಲಿರುವ ಶಾಂತಮ್ಮನವರಿಗೆ ವಯಸ್ಸು ನಟನೆಗೆ ಸಹಕರಿಸುತ್ತಿಲ್ಲ. ಮನಸ್ಸಿನಲ್ಲಿಯೇ ಬಣ್ಣದ ಕನಸುಗಳನ್ನು ಕಾಣಬೇಕಾಗಿದೆ.

ಆವತ್ತಿನ ನಾಟಕಗಳು ಸಾಹಿತ್ಯ, ಸಂಗೀತ ಪ್ರಧಾನವಾದಂತ ನಾಟಕಗಳಿದ್ದವು. ಇವತ್ತು ಅದ್ಯಾವುದೂ ಇಲ್ಲ. ನಮ್ಮ ಸಂಸ್ಕೃತಿಯನ್ನು ಬಿಂಬಿಸುವ ನಾಟಕಗಳು ಇಲ್ಲವೇ ಇಲ್ಲ ಎಂಬ ನೋವು ಆ ಹಿರಿಯ ಜೀವದ್ದು.

ಕೇಂದ್ರಸರಕಾರ, ರಾಜ್ಯಸರಕಾರದ ಎರಡೂ ಮಾಶಾಸನಗಳು ಆಗಿವೆ. ಆದರೂ ದುರುಪಯೋಗ ಜಾಸ್ತಿ ಆಗುತ್ತಲಿದೆ. ಒಳ್ಳೆಯ ಕಲಾವಿದರಿಗೆ ನ್ಯಾಯ ಸಿಗುತ್ತಿಲ್ಲ ಎಂಬ ಸಾಮಾಜಿಕ ಕಳಕಳಿ ಎದ್ದು ಕಾಣುತ್ತಿತ್ತು.

ರಾಜ್ಯೋತ್ಸವ ಪ್ರಶಸ್ತಿ ಹಾಗೂ ತಾಲೂಕು ಜಿಲ್ಲಾ ಮಟ್ಟದಲ್ಲಿ ಸಂಘಸಂಸ್ಥೆಗಳು ಕೊಡಲ್ಪಡುವ ಹಲವಾರು ಪ್ರಶಸ್ತಿಗಳನ್ನು ಪಡೆದ ಈ ಹಿರಿಯ ಜೀವ ಇಲಕಲ್‌ನಲ್ಲಿನೇ ನೆಮ್ಮದಿಯ ಬದುಕನ್ನು ಸಾಗಿಸುತ್ತಿದ್ದಾರೆ.[23]

---

[23] 23–01–2011 ಇಲಕಲ್‌ದಲ್ಲಿ ಸಂದರ್ಶನ ಮಾಡಿದ್ದು.

**ಸಚ್ಚಿದೇವಿ ನಾಗರಾಳ : (ಯೋಗಾಪುರ)**

ಬಿಜಾಪುರದ ಯೋಗಾಪುರದಲ್ಲಿ ನೆಲೆಸಿರುವ ಈ ಸಚ್ಚಿದೇವಿ ಲೋಲಮ್ಮನ ಅಕ್ಕ. ಅದಲ್ಲದೆ ಏಣಗಿ ಬಾಳಪ್ಪನವರ ಕಂಪನಿಯಲ್ಲಿ ನಟರಾಗಿ ದುಡಿದ ಲೋಕಾಪುರದ ರಂಗಪ್ಪ ನಾಗರಾಳ ಅವರ ಧರ್ಮಪತ್ನಿ.

ಸಚ್ಚಿದೇವಿಗೆ ಅವರ ತಂದೆನೆ ಗುರು. ಸಂಗೀತ, ನೃತ್ಯ ಎಲ್ಲವನ್ನು ಶಾಸ್ತ್ರೋಕ್ತವಾಗಿ ಇವರ ತಂದೆನೆ ಹೇಳಿಕೊಟ್ಟದ್ದು. ಹೀಗಾಗಿ ಇವಳು 5 ವರ್ಷದವಳಿದ್ದಾಗಲೇ ಬಣ್ಣದ ಬದುಕು ಇವಳನ್ನು ಕೈಬೀಸಿ ಕರೆಯಿತು. 'ಕರ್ನಾಟಕ ನಾಟಕ ಸಭಾ' ಶಟ್ಟರ ಕಂಪನಿಯಲ್ಲಿ ಕೃಷ್ಣನ ಪಾತ್ರದ ಮೂಲಕ ಇವಳ ಬಣ್ಣದ ಬದುಕು ಪ್ರಾರಂಭವಾಯ್ತು. ಮುಂದೆ ಗೋಕಾಕ ಬಸವಣ್ಣೆಪ್ಪ ನವರ ಕಂಪನಿಯಲ್ಲಿ ಇವರ ಇನ್ನೊಬ್ಬ ಅಕ್ಕ ಪ್ರೇಮಾ ಮತ್ತು ಸಚ್ಚಿದೇವಿ ಡ್ಯಾನ್ಸರ್ ಆಗಿ ಸೇರಿಕೊಂಡರು. ಇವರದೂ ಬಚ್ಚಾಸಾನಿ ಕುಟುಂಬದಂತೆ ದೊಡ್ಡ ಕುಟುಂಬ. ಇವರೂ ಏಳೂ ಜನ ಅಕ್ಕತಂಗಿಯರು. ಎಲ್ಲರೂ ರಂಗಭೂಮಿಗಾಗಿ ದುಡಿದವರೇ. ಬಸವಣೆಪ್ಪನವರ ಕಂಪನಿಯಿಂದ ಮುಂದೆ ಕೊಟ್ಟೂರ ಬಸಪ್ಪನವರ ಕಂಪನಿ ಡಾವಣಗೇರಿ ಇಲ್ಲಿಗೆ ಬಂದರು. ಅಲ್ಲಿ 3 ತಿಂಗಳ ಬಣ್ಣ ಹಚ್ಚಿದ ಸಚ್ಚಿದೇವಿ ಅರ್ಜುನಸಾ ನಾಕೋಡ ಅವರ ಕಂಪನಿಗೆ ಕಾಲಿಡುತ್ತಾರೆ. ಮೂಲತಃ ಇವರು ಬೆಂಗಳೂರಿನವರು. ಇಲ್ಲಿನ ಭಾಷೆ ನಡೆ ನುಡಿ ಎಲ್ಲವೂ ಹೊಸತು. ಆದರೆ ಅದನ್ನೆಲ್ಲವನ್ನು ಕಲಿಸಿದ ಗುರುಗಳೇ ಅರ್ಜುನಸಾ ನಾಕೋಡ ಅವರು ಎಂದು ಬಹಾಃಳ ಸಂತೋಷದಿಂದ ಹೇಳಿದರು. ಸಚ್ಚಿದೇವಿ ಸುಮಾರು 7–8 ವರ್ಷ ಆ ಕಂಪನಿಯಲ್ಲಿದ್ದರಂತೆ.

ಸೌಭಾಗ್ಯ ಲಕ್ಷ್ಮಿಯಲ್ಲಿ ಲಕ್ಷ್ಮಿಪಾತ್ರ, ನಾರೀಸಾಹಸದಲ್ಲಿ ರಾಣಿಪಾತ್ರ, ನಂಬಿಯಕ್ಕದಲ್ಲಿ 'ಶಿವಶರಣೆ ನಂಬಿಯಕ್ಕ' ಹೀಗೆ ಮುಂತಾದ ನಾಟಕಗಳಲ್ಲಿ ನಟಿಸಿ ಅಭಿನಯ ಕಲೆಯನ್ನು ಕರಗತ ಮಾಡಿಕೊಂಡಳು.

ಏಣಗಿ ಬಾಳಪ್ಪನವರ "ಕಲಾವೈಭವ ನಾಟ್ಯಸಂಘ" ದಲ್ಲಿ ಬಣ್ಣದ ಬದುಕು ಪ್ರಾರಂಭವಾಗುತ್ತದೆ. ಜೊತೆಗೆ ಬಾಳಪ್ಪನವರ ಸಹಾಯದಿಂದ ರಂಗಪ್ಪನವರ ಕೈಹಿಡಿದು ಬಾಳದೋಣಿಯನ್ನು ಸಾಗಿಸುತ್ತಾರೆ. ಆದರೆ ರಂಗಪ್ಪ ಕಂಪನಿ ಕಟ್ಟಿ ಹಾಳಾದರೂ ಇವರ ದಾಂಪತ್ಯಕ್ಕೆ ಮಾತ್ರ ಯಾವ ಅಡ್ಡಿಯೂ ಬರಲಿಲ್ಲ ಅಂಥ ಒಂದು ಅನ್ಯೋನ್ಯ ಸಂಸಾರ ಇವರದು. ತದನಂತರ ಬೆಳವಣಿಕಿ ಕಂಪನಿಗೆ ಆಗಮನ ಈ ಕಂಪನಿಯಲ್ಲಿ ಪುಷ್ಪಳಿ. ಸುನಂದಾ. ಸತಿಪತಿ. ಭವ್ಯ ಭಾರತಿ. ಕಂದಗಲ್ ಹನುಮಂತರಾಯರ ರಕ್ತರಾತ್ರಿ, ಚಿತ್ರಾಂಗದಾ. ಈ ಎಲ್ಲ ನಾಟಕಗಳಲ್ಲಿ ನಾಯಕಿಯಾಗಿ ಮಿಂಚಿದಳು.

ಕುಕನೂರು ರಹೆಮಾನವ್ವಳ ಕಂಪನಿಯಲ್ಲಿಯೂ ಒಂದು 6 ತಿಂಗಳು ಬಣ್ಣ ಹಚ್ಚಿದ ಸಚ್ಚಿದೇವಿ ಬಿ.ಆರ್. ಅರಿಶಿನಗುಡಿಯವರ ಕಂಪನಿಯಲ್ಲಿ "ಗರೀಬಿ ಹಟಾವೋ" "ಇಲ್ಲಿಗೆ ಬಂತು ಸಂಗಯ್ಯ" ಈ ನಾಟಕಗಗಳಲ್ಲಿ ನಾಯಕಿಯಾಗಿ ಅಭಿನಯಿಸುವುದರ ಜೊತೆಗೆ ಹೆಚ್ಚು ಕಮ್ಮಿ ಉತ್ತರ ಕರ್ನಾಟಕದ ಎಲ್ಲ ಕಂಪನಿಗಳಲ್ಲಿ ಬಣ್ಣಹಚ್ಚಿದ ಅನುಭವ ಈ ಸಚ್ಚಿದೇವಿಯದು.

ಕೊಡ್ಲಿ ವೀರಶೆಟ್ಟರ ಕಂಪನಿಯಲ್ಲಿಯೂ ಸಚ್ಚಿದೇವಿ ಬಹಳವರ್ಷ ದುಡಿದರು. ಇದೂ ಅವರ ತಂಗಿ ಗಂಡನ ಕಂಪನಿ. ""ವೀರಭದ್ರೇಶ್ವರ ನಾಟ್ಯ ಸಂಘ" (ಬೆಳವಣಕಿ) ಈ ಕಂಪನಿಯಲ್ಲಿ "ಹೆಣ್ಣಿನ ಜೀವನ" ನಾಟಕದಲ್ಲಿ ಸಚ್ಚಿದೇವಿಯದು ಲಕ್ಷ್ಮೀಪಾತ್ರ ಅಂದರೆ ವಿಲನ್ (ಅತ್ತೆ) ಆಗ ಕ್ಯಾಂಪ ಬಳ್ಳಾರಿಯಲ್ಲಿತ್ತು. ಜನ ಚಪ್ಪಲಿ ತೆಗೆದುಕೊಂಡು ಹೊಡೆದಿದ್ದರಂತೆ. ಆ ಲಕ್ಷ್ಮೀಯ ಪಾತ್ರ ಪ್ರೇಕ್ಷಕರನ್ನು ರೊಚ್ಚಿಗೆಬ್ಬಿಸಬೇಕಾದರೆ ಸಚ್ಚಿದೇವಿ ನಿಜವಾಗಿಯೂ ಆ ಪಾತ್ರಕ್ಕೆ ಜೀವತುಂಬಿದ್ದಾರೆ. ಇದು ಅವರ ಕೊಡುಗೆಯಲ್ಲದೇ ಇನ್ನೇನು?

ರಕ್ತರಾತ್ರಿಯಲ್ಲಿ ದ್ರೌಪದಿ ಪಾತ್ರ, ಮಹಾಂತೇಶಶಾಸ್ತ್ರಿಗಳ ಸತಿಪತಿ ನಾಟಕದಲ್ಲಿನ ಸುಶೀಲಾನ ಪಾತ್ರ ಹೆಚ್ಚು ಖುಷಿತಂದುಕೊಟ್ಟ ಪಾತ್ರ ಎನ್ನುತ್ತಾರೆ. ಪಾತ್ರಗಳೇನೋ ನಮಗೆ ಖುಷಿ ತಂದುಕೊಟ್ಟವೆ. ಸಮಾಜ, ಸರಕಾರ ನಮ್ಮನ್ನು ನೆಲಕ್ಕೆ ತುಳಿದಿದೆ ಆಗಿನ ಕಾಲದಲ್ಲಿ ಕಲೆಗೆ ಜನ ತುಂಬಾ ಗೌರವ ಕೊಡುತ್ತಿದ್ದರು. ನಿಮ್ಮ ಕಾಲ ಕೆಳಗೆ ಕುಳಿತು ನಾವು ನಾಟಕ ನೋಡುತ್ತೇವೆ ಎನ್ನುತ್ತಿದ್ದರು. ಈಗ ಕಲೇನ ದುಡ್ಡಿಗೆ ಮಾರಿಕೊಂಡುಬಿಟ್ಟದ್ದಾರೆ ಎಂಬ ನೋವು ಅವರಲ್ಲಿ ಎದ್ದುಕಾಣುತ್ತಿತ್ತು.

ಇವರಿಗೆ ಐದು ಜನ ಮಕ್ಕಳು ಮೂರು ಹೆಣ್ಣು, 2 ಗಂಡು. ಶಾರದಾ, ಮಮತಾ, ಮಂಗಳಾ, ಅರವಿಂದ, ಶಂಕರಪ್ಪ.

ತಾಯಿಯ ನಟನೆಯ ಗೀಳು ಮಕ್ಕಳಲ್ಲಿಯೂ ಮೊಮ್ಮಕ್ಕಳಲ್ಲಿಯೂ ಸಹಜವಾಗಿ ಹರಿದುಬಂದಿದೆ. ಮಮತಾಳ ಮಕ್ಕಳು ಗೀತಾ ಹಾಗೂ ಕುಮಾರ ಅಜ್ಜಿಯ ದಾರಿಯಲ್ಲಿಯೇ ಸಾಗಿದ್ದಾರೆ.

ಬಣ್ಣದ ಬದುಕಿನಿಂದ ದೂರ ಸರಿದು ಸುಮಾರು 25 ವರ್ಷಗಳಾದವು. ಈಗ ಮಗಳು ಮಮತಾಳ ದಯೆಯಿಂದ ನಾನು ಎರಡು ಹೊತ್ತು ಊಟ ಮಾಡುತ್ತಿದ್ದೇನೆ. ಯಾವ ರಾಜ್ಯಸರಕಾರದ ಕೇಂದ್ರ ಸರಕಾರದ ಮಾಶಾಶನಗಳೂ ನನಗೆ ಆಗಿಲ್ಲ. ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ ಇವರ ಪ್ರಶಸ್ತಿ ಒಂದನ್ನು ಬಿಟ್ಟರೆ ಬೇರೆ ಯಾವ ಪ್ರಶಸ್ತಿಗಳೂ ಇಲ್ಲ. ತಮ್ಮ ಊರು, ತಮ್ಮ ಭಾಷೆ, ತಮ್ಮ ಜನರನ್ನು ಬಿಟ್ಟು ಕಲೆಯನ್ನು ಮೆಚ್ಚಿಕೊಂಡು ಬಂದ ಹಿರಿಯ ಕಲಾವಿದೆ ಸಚ್ಚಿದೇವಿಯ ಬದುಕು ಹಸನಾಗಬೇಕಾದರೆ, ಈ ಇಳಿಹೊತ್ತಿನಲ್ಲಿ ನೆಮ್ಮದಿಯ ಬದುಕು ಸಾಗಿಸಬೇಕಾದರೆ ನಮ್ಮ ಘನ ಸರಕಾರ ಕಲಾವಿದರ ಮೇಲೆ ಒಂದಿಷ್ಟು ಕರುಣಾದೃಷ್ಟಿ ಬೀರಿದರೆ ಕಲೆ ಸಂಸ್ಕೃತಿ ಉಳಿಯಲು ಸಾಧ್ಯ.[24]

[24] 12-7-2009 ರಂದು ಬಿಜಾಪೂರದ ಯೋಗಾಪುರದಲ್ಲಿ ಸಂದರ್ಶನ ಮಾಡಿದ್ದು.

**ಥೆರೆಸಮ್ಮ ಡಿಸೋಜಾ :**

ಮೂಲತಃ ಇವರದು ದೊಡ್ಡ ಬಾಣಾವರ ಸ್ಟೇಶನ್ ಹತ್ತಿರ ಇರುವ ಬೊಮ್ಮನಹಳ್ಳಿ. ರೈತಾಪಿ ಕುಟುಂಬದಲ್ಲಿ ಬೆಳೆದು ಬಂದಂತ ಥೆರೆಸಮ್ಮ 1936 ಡಿಸೆಂಬರ್ 13 ರಂದು ಜನಿಸಿದರು. ಇವರು ಒಟ್ಟು 7 ಜನ ಅಕ್ಕ ತಂಗಿಯರು, ಒಬ್ಬ ತಮ್ಮ.

ಥೆರೆಸಮ್ಮನಿಗೆ ಐದು ಜನ ಮಕ್ಕಳು. ಅವರಲ್ಲಿ ಈಗಾಗಲೇ ಇಬ್ಬರು ಮಕ್ಕಳು ಬಣ್ಣದ ಬದುಕಿಗೆ ಮುಖಮಾಡಿದ್ದಾರೆ. ಹೆಲನ್ ಮೈಸೂರು, ಬಾಬು ಮೈಸೂರು, ಥೇರೆಸಮ್ಮ ಈ ಬಣ್ಣದ ಬದುಕಿಗೆ ತೆರೆದುಕೊಳ್ಳಲು ಮನೆಯ ಪರಿಸ್ಥಿತಿನೇ ಕಾರಣ. ಇವರ ಕೊನೆಯ ತಂಗಿ ಗುಬ್ಬಿ ವೀರಣ್ಣನವರ ಕಂಪನಿಯಲ್ಲಿ ಸೇರಿದಳು. ಆದರೆ ಥೆರೆಸಮ್ಮನ ನಟನೆ ಪ್ರಾರಂಭವಾದದ್ದು ಎಸ್. ಎನ್. ರಾಜನ್ ಅವರ ಅಮೇಚೂರ್ ಟ್ರೂಪ್‌ನಲ್ಲಿ "ಕೊಟ್ಟವನು ಕೆಟ್ಟ" ನಾಟಕ ಇದೇ ನಾಟಕಕ್ಕೆ ಮದ್ರಾಸಿನಲ್ಲಿ ಥೆರೆಸಮ್ಮನ ಪಾತ್ರಕ್ಕೆ ದ್ವಿತೀಯ ಬಹುಮಾನ ಸಿಕ್ಕಿತು. ಮೊದಲ ಪ್ರಯತ್ನದಲ್ಲೇ ಸೆಂಚುರಿಬಾರಿಸಿದಳು ಈ ಥೆರೆಸಮ್ಮ.

ಅಲ್ಲಿಂದ ಮುಂದೆ ಗುಬ್ಬಿ ಕಂಪನಿಗೆ ಸೇರ್ಪಡೆ. "ಗುಬ್ಬಿ ಕಂಪನಿಯಿಂದ ಎಂ.ಸಿ. ಮಾದೇವಸ್ವಾಮಿ ಕಂಪನಿ" ಮೈಸೂರು ಮಹಾರಾಜರ ಕೃಪಾಪೋಷಿತ ಕಂಪನಿ ಇದು. .ಇದರಲ್ಲೆಲ್ಲಾ ಪೌರಾಣಿಕ ನಾಟಕಗಳೇ ಹೆಚ್ಚು. ಅಲ್ಲಿಂದ ಎಚ್. ವಿ. ಯೋಗಾನರಸಿಂಹನವರ ಕಂಪನಿ ಹುಬ್ಬಳ್ಳಿಗೆ ಕ್ಯಾಂಪ ಮಾಡಿದಾಗ ಆ ಕಂಪನಿಯ ಆಶ್ರಯದಲ್ಲಿ ಜೀವನ ಸಾಗಿತು. ಇಲ್ಲಿ ಚಿರಂಜೀವಿ, ಕಳ್ಳಭಟ್ಟಿ, ದೇವದಾಸಿ ಹೀಗೆ ಹಲವಾರು ನಾಟಕಗಳಲ್ಲಿ ತಮ್ಮ ಶ್ರೇಷ್ಠ ಅಭಿನಯದಿಂದ ಪ್ರೇಕ್ಷಕರ ಮನಗೆದ್ದ ಈ ನಟಿ, ಯೋಗಾನರಸಿಂಹರ ಗರಡಿಯಲ್ಲಿ ಬೆಳೆಯತೊಡಗಿದಳು. ಈ ಕಲಾವಿದರ ಬದುಕೇ ಹೀಗೇ ಒಂದೆಡೆ ಒಂದೇ ಕಂಪನಿಯಲ್ಲಿ ಇರುವುದೇ ಅಪರೂಪ. ಅದೇ ರೀತಿ ಈ ನಟಿಯೂ ಕೂಡಾ ಯೋಗಾನರಸಿಂಹ ಕಂಪನಿಯಿಂದ ಮತ್ತೆ 1967ರಲ್ಲಿ ಬೆಳವಣಿಕೆ ಕಂಪನಿಗೆ ಬರುತ್ತಾಳೆ. ಸುಮಾರುಹತ್ತು ವರ್ಷದ ವರೆಗೆ ಆ ಕಂಪನಿಯಲ್ಲಿ ದುಡಿದು ನಂತರ ಸುಳ್ಯದ ದೇಸಾಯಿಯವರ ಕಂಪನಿಯಲ್ಲಿ ಎರಡು ಮೂರು ಕ್ಯಾಂಪ ಮಾಡಿದ ಥೆರೆಸಮ್ಮ ಅಷ್ಟೊತ್ತಿಗೆ ಒಂದು ತಂಡ ಕಟ್ಟುವಷ್ಟು ಪ್ರಬುದ್ಧಳಾಗಿರುತ್ತಾಳೆ. 1978ರಲ್ಲಿ "ನಟರಾಜ ನಾಟ್ಯ ಸಂಘ ಮೈಸೂರು" ಎಂಬ ಮಹಿಳಾ ಟ್ರೂಪ್ ಕಟ್ಟಿಕೊಂಡು ಅದರಿಂದ ಬಂದ ಆದಾಯದಲ್ಲಿನೆ ಜೆಂಟ್ಸ್ ಟ್ರೂಪ್ ಕೂಡಾ ಮಾಡಿಕೊಂಡು ತುಮಕೂರು, ಬೆಳಗಾಂವ, ಧಾರವಾಡ, ಹುಬ್ಬಳ್ಳಿ, ಅರಸಿಕೆರೆ, ಹಿರಿಯೂರು, ಚಿತ್ರದುರ್ಗ ಹೀಗೆ ಬಹಳಷ್ಟು ಕಡೆ ಈ ತಂಡ ಸಂಚರಿಸಿ ಉಡಿತುಂಬಿ ದುಡ್ಡು ಮಾಡಿಕೊಳ್ಳುತ್ತಿತ್ತು. ಉಮಾಶ್ರೀ ಇವರ ತಂಡದಲ್ಲಿನೇ ನಟನೇ ಮಾಡಲು ಪ್ರಾರಂಭಮಾಡಿದಳು ಸಿನೇಮಾ ನಟ, ನಟಿಯರನ್ನು ರಂಗಭೂಮಿಗೆ ಪರಿಚಯಿಸಿದವರೇ ಈ ಥೆರೆಸಮ್ಮ. ಮೊದಲು ಪ್ರಮಿಳಾ ಜೋಷಾಯ ಹಾಗೂ ಸುಂದರ ಕೃಷ್ಣ ಅರಸ ಅವರು ಬರುತ್ತಿದ್ದರು. ತದ ನಂತರ ಉಮಾಶ್ರೀ ಅವರು

ಬಂದರು. ಹೀಗೆ ನಟರಾಜ ನಾಟ್ಯ ಸಂಘ ಸುಮಾರು 4 ವರ್ಷಗಳ ತನಕ ನಡೆಸಿಕೊಂಡು ಬಂದರು. ಜೀವನ ಹೀಗೆ ಇರುತ್ತದೆ ಎಂದು ಹೇಳಲು ಬರುವುದಿಲ್ಲ. ಬೆಳಕಿನಲ್ಲಿ ಕತ್ತಲೆ ಅಡಗಿರುವಂತೆ, ಸುಖದ ಹಿಂದೇನೆ ಕಷ್ಟಗಳು ಅಡಗಿರುವದು ಸಹಜ. ಅದರಂತೆ ಇವರ ಜೀವನದಲ್ಲಿಯೂ ಸಾಕಷ್ಟು ತೊಂದರೆಗಳು, ಸಮಸ್ಯೆಗಳು ಎದುರಾದವು. ನಾನು ಬಿದ್ದದ್ದು ಧಾರವಾಡದಲ್ಲಿನೇ ನನ್ನ ಮಕ್ಕಳಿಂದಲೇ ನನ್ನ ಜೀವನ ಹಾಳಾಯ್ತು. ಆದರೂ ರಂಗಭೂಮಿ ನನಗೆ ತುತ್ತು ಅನ್ನಕೊಟ್ಟಿದೆ. ರಂಗಭೂಮಿನೇ ನನ್ನ ಉಸಿರು ಎನ್ನುವ ಥೆರಸಮ್ಮ ರತ್ನಮಾಂಗಲ್ಯ, ಗೌಡ್ರಗದ್ಲ, ಹಸಿರುಬಳೆ, ಚನ್ನಪ್ಪ ಚನ್ನಗೌಡ, ಮುದುಕನ ಮದುವೆ, ಹೀಗೆ ಹಲವಾರು ನಾಟಕಗಳಲ್ಲಿ ಮನೋಜ್ಞ ಅಭಿನಯ ಇವರದು. ಹುಬ್ಬಳ್ಳಿಯಲ್ಲಿ ಮಹಿಳಾ ಟ್ರೂಪ್ ಹುಟ್ಟಿದ್ದೇ ಇವರಿಂದ. ಇದೊಂದು ಇವರ ವಿಶೇಷತೆಯೆಂದೇ ಹೇಳಬೇಕು.

ಬಾಗಲಕೋಟೆಯಲ್ಲಿ ರತ್ನಮಾಂಗಲ್ಯ ನಾಟಕದ ಛಾಯಾನ ಪಾತ್ರಕ್ಕೆ ಪ್ರೇಕ್ಷಕರಿಂದ ಚಪ್ಪಲಿ ಏಟುಬಿದ್ದದ್ದು (ಮೈದುನನ್ನೇ ಬಲಾತ್ಕರಿಸಲು ಹೋದ ಸನ್ನಿವೇಶ). ಅವಳ ಅದ್ಭುತ ಅಭಿನಯಕ್ಕೆ ಇದಕ್ಕಿಂತ ಇನ್ಯಾವ ಸಾಕ್ಷಿಬೇಕು.

'ಕುರುಬನಿಂದ ಕುಬೇರನಾದ' ನಾಟಕದಲ್ಲಿನ ದೃಶ್ಯ ಇನ್ನೂ ಹಸಿಯಾಗಿದೆ ಎನ್ನುತ್ತಾರೆ. ಕಂಪನಿಯ ಮಾಲೀಕರೆ ಉದ್ದೇಶಪೂರ್ವಕವಾಗಿ ಹೊಡೆಸಿದ್ದರಂತೆ. ಹೀಗೆ ಥೆರೆಸಮ್ಮ ತನ್ನ ಬದುಕಿನ 76 ವಸಂತಗಳ ಸಿಹಿ ಕಹಿಯನ್ನು ಮೆಲುಕುಹಾಕುತ್ತ ಆವತ್ತು ರಂಗಭೂಮಿಯ ಬಗ್ಗೆ ಜನರಿಗೆ ಗೌರವವಿತ್ತು. ಅಲ್ಲದೆ ಕಲಾವಿದರ ಸಂಖ್ಯೆಯೂ ಆವತ್ತು ಕಡಿಮೆ ಇತ್ತು. ಎನ್ನುವ ಥೆರೆಸಮ್ಮನಿಗೆ ರಾಜ್ಯ ಹಾಗೂ ಕೇಂದ್ರದ ಎರಡೂ ಮಾಶಾಸನಗಳು ಆಗಿವೆ. ಈಗ ಹುಬ್ಬಳ್ಳಿಯ ಬಾಲಾಜಿ ನಗರದಲ್ಲಿ ಮಗಳು ಹೆಲೆನ್ ಹಾಗೂ ಮೊಮ್ಮಕ್ಕಳೊಂದಿಗೆ ನೆಮ್ಮದಿಯ ದಿನಗಳನ್ನು ಕಳೆಯುತ್ತಿದ್ದಾಳೆ.[25]

### ಮಾಲತಿಶ್ರೀ ಮೈಸೂರು :

ದಿನಾಂಕ : 27-11-2008 ರಂದು ಬೆಂಗಳೂರಿನ ರಾಜಾಜಿನಗರದಲ್ಲಿರುವ ಮಾಲತಿಶ್ರೀ ಅವರ ಮನೆಗೆ ಹೋದಾಗ ಅವರ ಉಪಚಾರ, ಅವರ ಮಾತುಗಳನ್ನು ಕೇಳಿದಾಗ ಅಲ್ಲೊಂದು ಮಾತೃ ಹೃದಯವನ್ನು ಕಂಡೆ.

ಕಾಫಿ ಕುಡಿದು ಮಾತಿಗಿಳಿದಾಗ ಮಾಲತಿಶ್ರೀ ತಮ್ಮ ಬದುಕನ್ನು ತೆರೆದಿಟ್ಟದ್ದು ಹೀಗೆ. ಮೂಲತಃ ಇವರುಮೈಸೂರಿನವರು ಕೆಂಪೇಗೌಡ, ಸಿದ್ಧಮ್ಮ ದಂಪತಿಗಳಿಗೆ ಇವರು 8 ಜನ ಮಕ್ಕಳು. ಅವರಲ್ಲಿ ಮೂವರು ತೀರಿಹೋದರು. ಇವರದು ಆಗರ್ಭ ಶ್ರೀಮಂತ ಮನೆತನವೂ ಅಲ್ಲ, ತೀರ ಬಡಕುಟುಂಬವೂ

[25] 10-7-2010 ರಂದು ಹುಬ್ಬಳ್ಳಿಯ ಬಾಲಾಜಿನಗರದಲ್ಲಿ ಭೇಟಿಯಾದದ್ದು.

ಅಲ್ಲ. ತಕ್ಕಮಟ್ಟಿಗೆ ತಾವೂ ಚನ್ನಾಗಿದ್ದು ಇನ್ನೊಬ್ಬರನ್ನು ಚೆನ್ನಾಗಿ ನೋಡಿಕೊಳ್ಳುವಂತಹ ಒಂದು ಸಂತೃಪ್ತ ಕುಟುಂಬ ಇವರದಾಗಿತ್ತು. ಮನೆಯಲ್ಲಿ ಎಮ್ಮೆಗಳನ್ನು ಸಾಕಿದ್ದರಿಂದ ಹಾಲು ಹೈನಕ್ಕೆ ಯಾವ ಕೊರತೆಯೂ ಇರಲಿಲ್ಲ. ಇವರಮ್ಮ ಸಿದ್ಧಮ್ಮ ಒಬ್ಬ ಸ್ಪುರದ್ರೂಪಿ ಹೆಣ್ಣುಮಗಳು ಮೇಲಾಗಿ ಕೊಡುಗೈದಾನಿ ಮನೆಗೆ ಯಾರೇ ಬರಲಿ ಅವರ ಮನಸ್ಸಿಗೆ ನೋವಾಗದಂತೆ ಅವರ ಇಷ್ಟಕ್ಕೆ ವಿರುದ್ಧವಾಗದಂತೆ ನಡೆದುಕೊಳ್ಳುವ ಮೃದುಸ್ವಭಾವ ಅವಳದು. ಆದರೆ ಇದ್ದಕ್ಕಿದ್ದಂತೆ ಇವರ ಕುಟುಂಬದ ಮೇಲೆ ಅದ್ಯಾರ ಕಣ್ಣು ಬಿತ್ತೋ? ಏನೋ ಮುಂದೆ ಒಂದು ಹೊತ್ತಿನ ಊಟಕ್ಕೂ ಪರದಾಡುವಂತ ಪರಿಸ್ಥಿತಿ ಬಂದೊದಗಿತು.

ಮಾಲತಿಶ್ರೀ ಹುಟ್ಟಿದ ಮೇಲೇನೇ ಇವರ ಮನೆಯ ಪರಿಸ್ಥಿತಿ ಒಮ್ಮಿಂದೊಮ್ಮೆಲೆ ಬದಲಾಯಿತಂತೆ. ಎಲ್ಲರೂ ಇವಳ ಕಾಲಗುಣದಿಂದಲೇ ಹೀಗಾಯಿತು ಎಂದು ಮಾತಾಡಿಕೊಳ್ಳುತ್ತಿದ್ದರು. ಆದರೆ ಇವರ ತಾಯಿ ಮಾತ್ರ ಮಾಲತಿಯನ್ನು ಪ್ರೀತಿಯಿಂದಲೇ ಕಾಣುತ್ತಿದ್ದರು. ಶಾಲೆಗೆ ಹೋದರೂ ಓದಿಗಿಂತ ಇವಳಿಗೆ ನೃತ್ಯ, ಹಾಡು, ಇದರಲ್ಲಿನೇ ಆಸಕ್ತಿ. ಅದರಲ್ಲೂ ಯಾವದಾದರೂ ನಾಟಕ ಕಂಪನಿ ಊರಿಗೆ ಬಂದರೆ ಸಾಕು; ಪ್ರಚಾರಕ್ಕಾಗಿ ಊರಲ್ಲಿ ತಿರುಗುವ ಕಾರಿನ ಹಿಂದೆ ಓಡಿದ್ದೆ ಓಡಿದ್ದು. "ಬೆಳೆಯುವ ಸಿರಿ ಮೊಳಕೆಯಲ್ಲಿ" ಎಂಬಂತೆ 6-7 ವರ್ಷದವಳಿದ್ದಾಗಲೇ ಈ ಮಾಲತಿಶ್ರೀಗೆ ಬಣ್ಣದ ಗೀಳು ಅಂಟಿಕೊಂಡಿತ್ತು.

ಮೊದಲೇ ಇವರ ಕುಟುಂಬ ಬಿರುಗಾಳಿಗೆ ಸಿಕ್ಕು ನಲುಗಿತ್ತು. ಅಂಥದರಲ್ಲಿ ತಂದೆಯ ಸಾವು, ಅಣ್ಣ ದೇಶಾಂತರ ಹೋದದ್ದು, ತಾಯಿ ಸಿದ್ಧಮ್ಮಳಿಗೆ ಬರಸಿಡಿಲೆರಗಿದಂತಾಯ್ತು. ಆದರೂ ಬಳ್ಳಿಗೆ ಕಾಯಿಭಾರ ಅಲ್ಲ, ಹೆತ್ತತಾಯಿ ಕಷ್ಟಪಟ್ಟು ಮಕ್ಕಳನ್ನು ಸಾಕಿಸಲುಹಿದ್ದಳು. ಪತಿಯ ಸಾವು, ಮಗ ಮನೆಬಿಟ್ಟು ಹೋದ ನೋವಿನಿಂದ, ತಾಯಿಯೂ ಕೊನೆಯುಸಿರೆಳೆದಾಗ ಈ ಮಕ್ಕಳು ಬೀದಿಗೆ ಬರಬೇಕಾಯ್ತು.

ಮಾಲತಿಗೆ ಮೊದಲಿನಿಂದಲೂ ಸಂಗೀತ, ನೃತ್ಯದಲ್ಲಿ ಆಸಕ್ತಿ ಇತ್ತೆಂದು ಹೇಳಿದೆನಲ್ಲ; ಆಪತ್ಕಾಲದಲ್ಲಿ ಬಹುಶಃ ಅದೇ ಅವಳ ಸಹಾಯಕ್ಕೆ ಬಂತು. ಬಸವರಾಜ ಎನ್ನುವವರು ಇವರ ಕುಟುಂಬಕ್ಕೆ ಆಪ್ತರು. ಅವರು ಈ ಮಾಲತಿಗೆ ಕೇಳಿದರು ನಿನ್ನನ್ನುನಾಟಕ ಕಂಪನಿಗೆ ಸೇರಿಸ್ತಿನಿ ಹೋಗ್ತಿಯಾ? ಎಂದಾಗ ರೋಗಿ ಬಯಸಿದ್ದು ಅದೇ, ವೈದ್ಯರೂ ಹೇಳಿದ್ದು ಅದೇ, ತಕ್ಷಣ ಹೂಂ, ಎಂದು ಬಿಟ್ಟಳು ಮಾಲತಿ. ನಿರ್ಗತಿಕರಿಗೆ, ಅಸಹಾಯಕರಿಗೆ ರಂಗಭೂಮಿ ಒಂದು ಆಶ್ರಯತಾಣವಾಗಿತ್ತು. ಇಲ್ಲಿಂದ ಇವಳ ಬಣ್ಣದ ಬದುಕು ಪ್ರಾರಂಭವಾಯ್ತು. ಶ್ರೀಕಂಠಸ್ವಾಮಿಗಳಿಗೂ ಇವಳಂಥ ಕಲಾವಿದೆಯ ಅವಶ್ಯಕತೆಯಿತ್ತು. ಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವನ ಜೊತೆಗಾರನ ಪಾತ್ರ, ರಾಮಾಯಣದಲ್ಲಿ

ಕೋತಿಯ ಪಾತ್ರ, ಹೀಗೆ ಶ್ರೀಕಂಠಶಾಸ್ತ್ರಿಗಳ ಕಂಪನಿಯಲ್ಲಿ ಬಾಲಕಲಾವಿದೆಯಾಗಿ ಬೆಳೆದಳು. ಆದರೂ ತುತ್ತಿನ ಚೀಲವನ್ನು ತುಂಬಿಕೊಳ್ಳಲು ಪರದಾಡಬೇಕಾಯ್ತು. ಈ ಮಧ್ಯ ಅಣ್ಣನ ಒತ್ತಾಯಕ್ಕೆ ಮಣಿದು ಮದುವೆ, ಗಂಡ, ಎಂಬ ಶಬ್ದದ ಅರ್ಥ ತಿಳಿಯುವ ಮೊದಲೇ ಈ ಹನ್ನೊಂದರ ಮಾಲತಿಶ್ರೀ ಸಂಸಾರದ ಬಂದನಕ್ಕೆ ಸಿಲುಕಿದಳು. ಸಾಕಷ್ಟು ಹಿಂಸೆಯನ್ನು ಅನುಭವಿಸಿ ಇನ್ನೇನಿದ್ದರೂ ತನ್ನ ಭವಿಷ್ಯ ರಂಗಭೂಮಿಯಲ್ಲಿಯೇ ಎಂಬುದನ್ನು ಅರಿತ ಮಾಲತಿ ಅಕ್ಕನನ್ನು ಕರೆದುಕೊಂಡು ಹಾವೇರಿಗೆ ಹೊರಡುತ್ತಾಳೆ. ಕಾರಣ ಅದೆಷ್ಟೋ ಕಲಾವಿದರನ್ನು ಸೃಷ್ಟಿಮಾಡುವ ಕಾರ್ಖಾನೆ ಅಲ್ಲಿತ್ತು. ಅದೇ ಗೋಕಾಕ ಕಂಪನಿ ಅಲ್ಲಿ ಬೇರೆ ಯಾವ ಪಾತ್ರಗಳೂ ಖಾಲಿ ಇರದ ಕಾರಣ ನೃತ್ಯಗಾರ್ತಿಯಾಗಿ ಸೇರಿಕೊಂಡಳು. ಮಾಲತಿಗೆ ಪಾತ್ರ ಮಾಡುವ ಹುಚ್ಚು. ಪ್ರಕಾಶ ಕಡಪಟ್ಟಿಯವರು ಈ ಗಾಜಿನಗೊಂಬೆಯಂತ ಹುಡುಗಿಯನ್ನು ನೋಡಿ ನಮ್ಮ ಕಂಪನಿಗೆ ಬರುತ್ತಿಯಾ ಎಂದು ಕೇಳಿದರು. ಆದರೆ ಗೋಕಾಕ ಕಂಪನಿಯ ಬಾಂಧವ್ಯವೇ ಬೇರೆ. ಅಲ್ಲಿ ಏನಿದ್ದರೂ ತಂದೆ ಮಕ್ಕಳ ಸಂಬಂಧ ಮನೆಮಗಳಂತೆ ಇದ್ದ ಮಾಲತಿಗೆ ಕಂಪನಿ ಬಿಡಲು ಮನಸ್ಸಾಗಲಿಲ್ಲ. ಪ್ರಬುದ್ಧ ನಟಿಯಾಗಬೇಕಾದರೆ ಬೇರೆ ಕಂಪನಿಗೆ ಹೋಗುವುದೂ ಅನಿವಾರ್ಯವಾಗಿತ್ತು. ಆದರೂ ಗೋಕಾಕ ಕಂಪನಿ ಅವಳ ನಟನೆಗೆ ಒಂದು ಬುನಾದಿಯಾಗಿತ್ತು.

ಅದೂ 1977ರ ಸಮಯ ಇರಬಹುದು. ಮಾಲತಿಶ್ರೀ ಬಿ.ಆರ್. ಅರಿಸಿನಗೋಡಿಯವರ 'ಹೊಳೆಹುಚ್ಚೇಶ್ವರ ನಾಟ್ಯ ಸಂಘ ಕಮತಗಿ" ಈ ಕಂಪನಿ ಸೇರಿ ಮಾಲೀಕರೆ ಬರೆದ 'ಗರಿಬಿ ಹಟಾವೋ" ನಾಟಕದಲ್ಲಿ ಕಾರ್ಮಿಕನ ತಂಗಿಯ ಪಾತ್ರವನ್ನು ಕೊಟ್ಟರು. ಆದಾದ ಮೇಲೆ "ಬಡವರೂ ನಗಬೇಕು" ಇದೂ ಕೂಡಾ ಬಿ.ಆರ್. ಅವರು ಬರೆದ ನಾಟಕ. ಅದರಲ್ಲಿ 'ಲಕ್ಷ್ಮಿ' ಎಂಬ ಹಾಸ್ಯಪಾತ್ರ ನೀಡಿದರು. ಅರಿಶಿನಗೋಡಿಯವರ ಕಂಪನಿಗೆ ಕಾಲಿಟ್ಟಮೇಲೆ ಬಿಡುವಿಲ್ಲದ ತುಂಬಾ ಬೇಡಿಕೆಯ ನಟಿಯಾದಳು. ಇವಳ ಚಲುವಿಕೆಗೆ ಮಾರುಹೋಗಿಯೋ ಅಥವಾ ನಟನೆಗೆ ಮಾರುಹೋಗಿಯೋ ಬಿ. ಆರ್. ಅರಿಶಿನಗುಡಿಯವರು ಇವಳನ್ನು ತಾರಾಪತ್ನಿಯಾಗಿ ಸ್ವೀಕರಿಸುತ್ತಾರೆ. ಸುಮಾರು 30 ವರ್ಷ ಆ ಅರಿಶಿನಗುಡಿಯವರ ಕಂಪನಿಯಲ್ಲಿಯೇ ಮಾಲತಿಯ ಬಣ್ಣದ ಬದುಕು ವರ್ಣರಂಜಿತವಾಗಿ ಸಾಗುತ್ತದೆ. ಅರಿಶಿನಗುಡಿಯವರ ತಾರಾ ಪತ್ನಿಯಾಗಿ ವೈಚಾರಿಕ ಚಿಂತನೆಯ, ಸಾಮಾಜಿಕ ಕಳಕಳಿಯ ಮಾಲತಿ ಕಂಪನಿಯ ಒಂದು ಆಸ್ತಿಯಾಗುತ್ತಾಳೆ. 40 ವರ್ಷದಿಂದ ಸುದೀರ್ಘವಾಗಿನಡೆದು ಬಂದ ಅರಿಶಿನಗುಡಿ ಕಂಪನಿಗೆ ಇದ್ದಕ್ಕಿದ್ದಂತೆ ಶನಿಕಾಟ ಪ್ರಾರಂಭವಾದಾಗ ಅದರಲ್ಲೂ ಮೂರು ಕಂಪನಿಯ ಮಾಲೀಕ ಜಿ.ಆರ್. ಅವರು ಕಂಗಾಲಾದಾಗ ಶಾಲಾ, ಕಾಲೇಜು ಮಕ್ಕಳಿಗೆ ಟಿಕೆಟ್ ಹಾಕಿ ಬೆನ್‌ಫಿಟ್ ಶೋ ಮಾಡಿ ಎಷ್ಟೋ ಸಲ ಮುಗಳುಗುವ ಕಂಪನಿಯನ್ನು ಎತ್ತಿ ಹಿಡಿಯುತ್ತಾಳೆ ಈ ಕಲಾವಿದೆ.

ಬಿ.ಆರ್ ಅರಿಶಿನಗುಡಿಯವರ ಅಣ್ಣ ಆರ್.ಆರ್. ಅರಿಶಿನ ಗುಡಿಯವರು ಮುದ್ದೇಬಿಹಾಳದಲ್ಲಿ ಒಂದು ಕ್ಯಾಂಪಹಾಕಿದಾಗ, ಒಂದು ಘಟನೆ ನಡೆಯಿತು. ಸಿನೇಮಾ ಕಲಾವಿದನ ವರ್ತನೆಯಿಂದ ರೊಚ್ಚಿಗೆದ್ದ ಜನ ಬಡಿಯಲು ಮುಂದಾದರು. ಆಗ (ಬಸ್ ಕಂಡೆಕ್ಟರ್ ನಾಟಕ) ಮಾಲತಿಶ್ರೀ ಮುಂದಾಗಿ ತಗೊಳ್ಳಿ ಮೊದಲು ನನ್ನನ್ನು ಹೊಡೆಯಿರಿ ಎಂದು ಮುಂದಾದಾಗ ಜನ ತಪ್ಪಾಯಿತು ಅಕ್ಕಾವರೆ ಎಂದು ಹಿಂದೆ ಸರಿದರಂತೆ. ಒಬ್ಬ ನಟಿಯ ಮೇಲೆ ಪ್ರೇಕ್ಷಕರು ಇಟ್ಟಂತ ಅಭಿಮಾನ ಜೊತೆಗೆ ವಿಕೋಪಕ್ಕೆ ಹೋಗುವ ಘಟನೆಯನ್ನು ಶಾಂತವಾಗಿ ಬಗೆಹರಿಸಿದ ಅವಳ ಸಮಯ ಪ್ರಜ್ಞೆಯನ್ನು ನಾವು ಮೆಚ್ಚಲೇಬೇಕು.

"ನನ್ನ ಗಂಡನ ಹೆಂಡತಿ' ಎಂಬ ನಾಟಕವನ್ನು "ಹಳ್ಳಿ ಹುಡ್ಗಿ ಪ್ಯಾಟಗೆ ಬಂದಿತ್ತ" ಎಂಬ ಹೆಸರಿನಲ್ಲಿ ಆಡುತ್ತಿದ್ದರು. ಬಾಲ್ಯವಿವಾಹ ಪದ್ಧತಿ ಹೊಡೆದೊಡಿಸಬೇಕು. ಸ್ವೇಚ್ಛಾಚಾರಿಗಳಾಗಿ ಬದುಕುವದಕ್ಕಿಂತ ಸಂಯಮದಿಂದ ಬದುಕಬೇಕೆಂಬ ಸಂದೇಶ ಈ ನಾಟಕದಲ್ಲಿತ್ತು. ಶಾಲಾಮಕ್ಕಳಿಗೂ ಶಿಕ್ಷಕರಿಗೂ, ಸಂಬಂಧಪಟ್ಟ ಮೇಲಾಧಿಕಾರಿಗಳಿಗೂ ಈ ನಾಟಕ ತುಂಬಾ ಹಿಡಿಸಿತು. ಒಬ್ಬ ಹೆಣ್ಣು ಮಗಳಾಗಿ ಕೇವಲ ನಟನೆಗೆ ಗಮನ ಕೊಡದೆ ಕಂಪನಿಯ ಏಳು ಬೀಳುಗಳಿಗೂ ಈ ಮಾಲತಿಶ್ರೀ ಹೆಗಲು ಕೊಡುತ್ತಾಳೆ.

ಮಳೆಗಾಲ ಪ್ರಾರಂಭವಾದರೆ ಇವರಿಗೆ ತೊಂದರೆ ತಪ್ಪಿದ್ದಲ್ಲ. ಥೇಟರಿನಲ್ಲಿ ನಿಂತ ನೀರನ್ನು ಆಳು ಮಕ್ಕಳ ಜೊತೆಗೆ ತಾವೂ ಬಳಿದು ಚೆಲ್ಲುತ್ತಿದ್ದರಂತೆ. ಒಬ್ಬ ಕಂಪನಿ ಮಾಲೀಕರ ತಾರಾಪತ್ನಿ ಎಂಬ ಅಹಂಮಿಲ್ಲದ ಮಹಿಳೆ ಮಾಲತಿಶ್ರೀ. ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ 'ಭೂಮಿ ತೂಕದ ಹೆಣ್ಣು' ಬಹಳಷ್ಟು ಹೆಸರು ಮಾಡಿತ್ತು. ಸುನಂದಾ ಕಡಪಟ್ಟಿ ಹಾಗೂ ಪ್ರಕಾಶಕಡಪಟ್ಟಿಯವರೊಂದಿಗೆ ಮಗಳ ಪಾತ್ರದಲ್ಲಿ ವಾದ ಮಾಡುತ್ತಿದ್ದ ರೀತಿಗೆ ಪ್ರೇಕ್ಷಕರಿಂದ ಕೇಕೆ, ಚಪ್ಪಾಳೆ ಸೀಟಿ ಕೇಳಿ ಮೂಲತ ತನ್ನೆ ತಾನು ಮರೆತು ನಟನೆಯಲ್ಲಿ ಪರವಶಳಾಗುತ್ತಿದ್ದಳಂತೆ.

ಗಂಗಾವತಿಯಲ್ಲಿ 'ಗರೀಬಿ ಹಟಾವೋ' ನಾಟಕ ಎರಡನೂರಕ್ಕೂ ಮಿಕ್ಕಿ ಹೆಚ್ಚು ಪ್ರದರ್ಶನ ನಡೆಯಿತು. ಅದರಲ್ಲಿ ಮಾಲತಿಶ್ರೀ ಕಮಲಾನ ಪಾತ್ರದಲ್ಲಿ ಪ್ರೇಕ್ಷಕರ ಹೃದಯಕ್ಕೆ ಲಗ್ಗೆ ಇಟ್ಟಿದ್ದಳು. ಕಾಲೇಜೊಂದರಲ್ಲಿ ಕಲಾವಿದರನ್ನು ಸತ್ಕರಿಸುವ ಸಮಾರಂಭವನ್ನು ಇಟ್ಟುಕೊಂಡಿದ್ದರು. ಅದರಲ್ಲಿ ಒಬ್ಬ ವಿದ್ಯಾರ್ಥಿನಿ ನಾನೇನಾದರೂ ಗಂಡು ಆಗಿದ್ದರೆ ಕಮಲಾನನ್ನು ಹೊತ್ತುಕೊಂಡು ಹೋಗುತ್ತಿದ್ದೆ ಎಂದಳಂತೆ. ಮಹಾವಿದ್ಯಾಲಯದ ಪ್ರಾಚಾರ್ಯರೂ ಅದಕ್ಕೆ ಧ್ವನಿಗೂಡಿಸಿದರು. ಮಾಲತಿ ಹಾಗೂ ಅಬ್ಬಾಸ್ ಅಲಿ ಅವರ ನಟನೆಗೆ ನಮ್ಮ ಮಹಾವಿದ್ಯಾಲಯದ ಹುಡುಗರು ಹುಚ್ಚು ಹಿಡಿಸಿಕೊಂಡಿದ್ದಾರೆ ಎಂದರಂತೆ ಒಬ್ಬ ಒಳ್ಳೇಯ ನಟಿ ಎನ್ನುವುದಕ್ಕೆ ಇದಕ್ಕಿಂತ ಇನ್ನಾವ ಪುರಾವೆ ಬೇಕು. ರಂಗಭೂಮಿಗೆ ಇವಳು ಕೊಟ್ಟಂತ ಕೊಡುಗೆ ಸಣ್ಣದೇನಲ್ಲ.

ಇವತ್ತು ಕಿರುತೆರೆಯಲ್ಲಿ, ಚಲನಚಿತ್ರಗಳಲ್ಲಿ ಅಭಿನಯಿಸುತ್ತಿದ್ದರೂ ರಂಗಭೂಮಿಯಲ್ಲಿಯ ನೆಮ್ಮದಿ ಇಲ್ಲಿಲ್ಲವೆನ್ನುತ್ತಾರೆ. 'ಮೊಗ್ಗಿನ ಜಡೆ' ಚಿತ್ರದಲ್ಲಿ ಉತ್ತಮ ತಾಯಿಯ ಪಾತ್ರಕ್ಕೆ ಪ್ರಶಸ್ತಿ ಸಿಕ್ಕಿದೆ.

ನಾಟಕದವರು ಅಂದತಕ್ಷಣ ಎಷ್ಟೋ ಸಲ ಬಾಡಿಗೆಗೆ ಮನೆ ಕೊಡುತ್ತಿರಲಿಲ್ಲ. ತಿರಸ್ಕಾರದಿಂದ ನೋಡುವವರೇ ಹೆಚ್ಚು. ನಂತರ ಬಾಂಧವ್ಯ ಬೆಳೆದು ನಾವು ಒಳ್ಳೆಯವರು ಎಂಬುದು ಗೊತ್ತಾದಾಗ 'ಉಡಿ ತುಂಬಿ' ಕಳುಹಿಸಿದ ಉದಾಹರಣೆಗಳು ಉಂಟು. ಸ್ವತಃ ಇವರ ಅಕ್ಕನ ಮಗಳ ಮದುವೆಗೆ ಇವರ ಒಡಹುಟ್ಟಿದ ಅಕ್ಕನೇ ಮದುವೆಗೆ ಬರುವುದು ಬೇಡ. ಇಲ್ಲಿ ಎಲ್ಲರೂ ಕೇಳಿದರೆ ಏನು ಹೇಳುವುದು ಎಂದಳಂತೆ. ಸ್ವಂತ ಅಕ್ಕನೆ ಹೀಗೆ ಹೇಳಿದಾಗ ಇನ್ನು ಸಮಾಜ ಇವರನ್ನು ಹೇಗೆ ನೋಡಿರಬಹುದು. ಹೆಪ್ಪಿಟ್ಟ ಹಾಲಿನಂತೆ ಎಲ್ಲವನ್ನು ಒಳಗಿಟ್ಟುಕೊಂಡು ತೆರೆಯಮೇಲೆ ಮತ್ತೆ ನಗಲೇಬೇಕು. ಇದು ಇವರ ಬದುಕು. ಕಲೆಗೆ ಎಂಥ ಶಕ್ತಿ ಇದೆಯಲ್ಲವೇ? ಅದು ಎಲ್ಲವನ್ನು ಮರೆಸುತ್ತದೆ.

ಉತ್ತರ ಕರ್ನಾಟಕದ ರಂಗಭೂಮಿ, ಅಲ್ಲಿಯ ಜನ ನನಗೆ ಜೀವನ ಕೊಟ್ಟಿದೆ. ಅವನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲವೆನ್ನುತ್ತಾರೆ: ಮನಸ್ಸಿನಲ್ಲಿ ಹಟ ಇರಬೇಕು. ಶ್ರಮದಿಂದ ಮುಂದುವರಿಯಬೇಕು. ಏಳು ಬೀಳು ಇದ್ದೆ ಇರುತ್ತೆ ಛಲ ಬಿಡಬಾರದು ಎಂಬುದು ಇವರ ಆಶಯ. ಅಷ್ಟೇ ಅಲ್ಲ ಶಾಲಾ ಪಠ್ಯಪುಸ್ತಕದಲ್ಲಿ ರಂಗಭೂಮಿ, ರಂಗಭೂಮಿ ಕಲಾವಿದರ ಕುರಿತು ಪಾಠಗಳು ಬರಬೇಕು ಎಂಬ ಬೇಡಿಕೆ ಇವರದು. ಇವತ್ತು ಇವಳು ಕಿರುತೆರೆ ಚಲನಚಿತ್ರಗಳಲ್ಲಿ ಮಿಂಚಲು ರಂಗಭೂಮಿಯೇ ಇವರಿಗೆ ಮೆಟ್ಟಿಲು.[26]

**ಅನ್ನಪೂರ್ಣ ಸಾಗರ :**

ದಿನಾಂಕ 8–7–09 ರಂದು ಬೆಂಗಳೂರಿನ ಕಮಲನಗರದಲ್ಲಿರುವ ಅನ್ನಪೂರ್ಣ ಸಾಗರ ಅವರ ಮನೆಗೆ ನಾನು, ನಂದಾರಾಣೀ ಕಲ್ಕತ್ತಾ ಅವರು ಹೋದಾಗ ಮದ್ಯಾಹ್ನದಿಂದ ಕಾದು ಕಾದು ಸುಸ್ತಾದ ಅನ್ನಪೂರ್ಣಮ್ಮನವರ ಮುಖದಲ್ಲಿ ಹುಸಿಕೋಪ ಎದ್ದು ಕಾಣುತ್ತಿತ್ತು.

ಹಾಸಿ ಹೊತ್ತು ಕೊಳ್ಳುವಂತ ಬಡತನ. ಬಡತನಕ್ಕೆ ಮಕ್ಕಳು ಜಾಸ್ತಿ. ಇವರು ಏಳು ಜನ ಮಕ್ಕಳು. ಅಪ್ಪ ಅಮ್ಮನಿಗೆ ಸಂಸಾರದ ನೊಗ ಹೊರುವುದು ಕಷ್ಟವಾದಾಗ ಹಿರಿಯ ಮಗಳು ಈ ಅನ್ನಪೂರ್ಣ 7ನೇ ಇಯತ್ತೆಯಲ್ಲಿದ್ದಾಗ ಇನ್ನೊಬ್ಬರ ಮನೆಯ ಕಸ, ಮುಸುರೆ ಮಾಡಿ ಈಗಲೋ ಆಗಲೋ ಮುಳುಗುವ ಸಂಸಾರಕ್ಕೆ ಒಂದಿಷ್ಟು ಆಸರೆಯಾಗುತ್ತಾಳೆ. ಓರಗೆಯ ಗೆಳತಿಯರು ಉಂಡು, ಉಟ್ಟು, ನಕ್ಕು ನಲಿದರೆ ಇವಳದು ಹಾಗಲ್ಲ. ಒಂದುಪವಾಸ, ಎರಡುಪವಾಸ, ಹೊಟ್ಟೆಗೆ ತಣ್ಣೀರೆ ಗತಿ. ಆದರೆ ಓದುವ

[26] 27–11–2008 ರಂದು ಬೆಂಗಳೂರಿನ ರಾಜಾಜಿನಗರದಲ್ಲಿ ಸಂದರ್ಶನ ಮಾಡಿದ್ದು.

ಉತ್ಸಾಹ ಕಡಿಮೆಯಾಗಲಿಲ್ಲ. ಓದಿ ಡಾಕ್ಟರಳಾಗಬೇಕೆಂಬ ಕನಸು ನನಸಾಗಲಿಲ್ಲ. ಹಾಗಂತ ಅವಳೇನೂ ದಡ್ಡಿಯಲ್ಲ. ಬಡತನ ಅದಕ್ಕೆ ಅಡ್ಡಿಪಡಿಸಿತು. ಆದರೂ ಎಸ್.ಎಸ್.ಎಲ್.ಸಿ. ವರೆಗೆ ಶಿಕ್ಷಣ ಪೂರೈಸಿದ ಅನ್ನಪೂರ್ಣಳಿಗೆ ಜವಾಬ್ದಾರಿಗಳು ಹೆಚ್ಚಾದವು. ವಯಸ್ಸಿಗೆ ಸಹಜವಾದ ಆಸೆಗಳು ಚಿಗುರತೊಡಗಿದವು. ಬದುಕುವುದಕ್ಕೆ ಯಾವುದಾದರೂ ಒಂದು ದಾರಿ ಹುಡುಕುವುದು ಅನಿವಾರ್ಯವಾಗಿತ್ತು. ವಯಸ್ಸಿಗೆ ತಕ್ಕ ರೂಪ ಅವಳಿಗೊಂದು ಆಸ್ತಿಯಾಗಿತ್ತು. ನಟನೆ ಅವಳಿಗೇನೂ ರಕ್ತಗತವಾಗಿ ಬಂದದ್ದಲ್ಲ ನಟನೆಯ ಗಂಧವೂ ಅವಳಿಗಿರಲಿಲ್ಲ. ಆದರೆ ಏಳನೇಯ ಇಯತ್ತೆಯಲ್ಲಿರುವಾಗ ಕಳ್ಳಭಟ್ಟಿ ನಾಟಕದಲ್ಲಿ ಪಾತ್ರಮಾಡಿದ್ದುಂಟು.

ಮುಂದೆ ಎಸ್.ಎಸ್.ಎಲ್.ಸಿ.ಗೆ ಬಂದಾಗ ಇವರ ಕೇರಿಯ ಹುಡುಗರು "ವಿನೋಬಾ ನಗರ ಕಲಾ ಸಂಘ" ಎಂಬ ಸಂಘವನ್ನು ಕಟ್ಟಿಕೊಂಡು ಏನಾದರೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದರು. ಪುಡಾರಿ ಪರಂದಾಮಯ್ಯ" ಎನ್ನುವ ನಾಟಕದಲ್ಲಿ ಇವರಿಗೆ ಪದ್ಮಳ ಪಾತ್ರ ಮಾಡಲು ಆಹ್ವಾನಿಸಿದರು. ಇವರು ರಂಗ ತಾಲೀಮು ಮಾಡುತ್ತಿರುವಾಗ ಚಿತ್ರನಟ ಸುಧೀರವರು ಬಂದಿದ್ದರು. ಅವರೂ ಸಾಗರದವರೇ ಇವರ ಅದ್ಭುತ ನಟನೆಯನ್ನು ನೋಡಿ ಮೆಚ್ಚಿ ಸುಧೀರವರು ನಾಟಕ ಕಂಪನಿಗೆ ಬರುವಿರಾ ಎಂದಾಗ "ತುತ್ತು ಅನ್ನಕ್ಕಾಗಿ ತಿರುಗುವ ಭಿಕ್ಷುಕನಿಗೆ ಮೃಷ್ಟಾನ್ನ ಸಿಕ್ಕಷ್ಟು ಸಂತೋಷವಾಯ್ತು" ಮೊದಲು ನಾಟಕದಲ್ಲಿ ಪಾತ್ರ ಮಾಡಿದರೆ ಆಮ್ಯಾಲೆ ಚಿತ್ರರಂಗಕ್ಕೆ ಸಹಜವಾಗಿಯೇ ನಾನು ಜಂಪಾಗಬಹುದು ಎಂಬ ಆಶೆ ಮೊಳಕೆಯೊಡೆಯಿತು. ತಾಯಿಯನ್ನು ಒಪ್ಪಿಸಿ, (ಬಡತನವಿದ್ದರೂ ಮಗಳು ಬಣ್ಣ ಹಚ್ಚುವುದು ಅವರಿಗೆ ಇಷ್ಟವಿರಲಿಲ್ಲ) ಬಣ್ಣದ ಬದುಕಿಗೆ ಪಾದಾರ್ಪಣೆ ಮಾಡಿಯೇ ಬಿಟ್ಟಳು ಅನ್ನಪೂರ್ಣಾ.

1973ರಲ್ಲಿ ಸುಧೀರ ಅವರ ಪ್ರಯತ್ನದಿಂದ ಇವಳ ಆಶೇ ಕೈಗೂಡಿತು. ಆಗ ಸುಧೀರ ಅವರು "ಶಾರದಾ ಸಂಗೀತ ನಾಟಕ ಮಂಡಳಿ" ಗೋಕಾಕ ಕಂಪನಿಯಲ್ಲಿ ನಟಿಸುತ್ತಿದ್ದರು. ಕಂಪನಿ ದಾವಣಗೇರಿಯಲ್ಲಿ ಕ್ಯಾಂಪ ಹಾಕಿತ್ತು. ಅದೇ ಕಂಪನಿಯಲ್ಲಿ ಚಿಕ್ಕಮುಟ್ಟ ಪಾತ್ರಗಳನ್ನು ಮಾಡುವ ಅವಕಾಶ ಒದಗಿಬಂತು. ಮೊದಲ ಸಲವೇ ಗೋಕಾಕ ಕಂಪನಿಯಲ್ಲಿ ನಟಿಸುವ ಅವಕಾಶ ಸಿಕ್ಕಿದ್ದು ಇವರ ಭಾಗ್ಯ ಮೂರು ತಿಂಗಳ ತನಕ ನಟನೆಯ ಪಾಠ ಕಲಿತ ಅನ್ನಪೂರ್ಣ ಅಲ್ಲಿಂದ ಕಾಕನೂರ ಎಲ್ಲಪ್ಪನವರ "ಮಹಾಕೋಟೇಶ್ವರ ನಾಟ್ಯಸಂಘ" ಕಾಕನೂರ ಇಲ್ಲಿ ಕೆಲವು ದಿನ ನಟನೆಯ ಪರಿಪಾಕದಲ್ಲಿ ಮಿಂದು 1975ರಲ್ಲಿ ಮತ್ತೆ ಗೋಕಾಕ ಕಂಪನಿಗೆ ಮರಳಿ ಬಂದರು. ಬದುಕು ಕಟ್ಟಿಕೊಟ್ಟ ಗೋಕಾಕ ಕಂಪನಿಯನ್ನು ಹೇಗೆ ತಾನೇ ಮರೆಯಲು ಸಾಧ್ಯ? ಮಹಾಂತೇಶ ಶಾಸ್ತ್ರಿಗಳ ರೂಪವತಿ, ಗುಳಿಗಿ ಗುಂಡಮ್ಮ, ಸುಖದ ಸುಪ್ಪತ್ತಿಗೆ, ಗುರುಪುತ್ರಿ, ಬಂಜೆ ತೊಟ್ಟಿಲು, ಗಂಡಸಮಾನ ಹೀಗೆ ಹತ್ತು ಹಲವು ನಾಟಕಗಳಲ್ಲಿ

ನಾಯಕಿಯಾಗಿ ಒಂದೊಂದೆ ಮೆಟ್ಟಲನ್ನು ಏರತೊಡಗಿದಳು. ಸಂಪತ್ತಿಗೆ ಸವಾಲ್‌ದಲ್ಲಿ ಪಾರ್ವತಿಯ ಪಾತ್ರ, ರತ್ನ ಮಾಂಗಲ್ಯದಲ್ಲಿ ಶಕೀಲಾನ ಪಾತ್ರ, ಸುಖದ ಸುಪ್ಪತ್ತಿಗೆಯಲ್ಲಿ ಶೈಲಾ, ಬಂಜೆತೊಟ್ಟಿಲದಲ್ಲಿ ಮಾಲತಿಪಾತ್ರ ಹೀಗೆ 1979ರ ವರೆಗೆ ಗೋಕಾಕ ಕಂಪನಿಯ ಒಡನಾಟದಲ್ಲಿ ತನ್ನದೇ ಆದ ಛಾಪನ್ನು ಒತ್ತಿದಳು.

ತದನಂತರ ಸುಳ್ಯದ ದೇಸಾಯಿಯವರ ಕಂಪನಿಯಲ್ಲಿ ಸಿಂಧೂರ ಲಕ್ಷ್ಮಣ, ಚಿತ್ರಾಂಗದಾ, ವರನೋಡಿ ಹೆಣ್ಣುಕೊಡು, ಕಿತ್ತೂರ ಚೆನ್ನಮ್ಮ, ಹೀಗೆ ಹತ್ತು ಹಲವು ನಾಟಕಗಳಲ್ಲಿ ನಟಿಸಿದ ಅನ್ನಪೂರ್ಣ ವರನೋಡಿ ಹೆಣ್ಣುಕೊಡು, ನಾಟಕದಲ್ಲಿ ಶೈಲಾನ ಪಾತ್ರ ಹೆಚ್ಚು ಖುಷಿಯನ್ನು ತಂದುಕೊಟ್ಟಿತಂತೆ. ಜತ್ತಿ ಕ್ಯಾಂಪದಲ್ಲಿ ಈ ನಾಟಕ ಪ್ರದರ್ಶನಗೊಂಡಿತು. ಆ ಊರಿನ ಜನ ಯಾರೂ ಇವರನ್ನು ಅನ್ನಪೂರ್ಣ ಎಂದು ಕರೆಯುತ್ತಿರಲಿಲ್ಲವಂತೆ ಎಲ್ಲರೂ ಶೈಲಾ ಅಂತಾನೆ ಕರೀತಿದ್ರು ಎಂದು ಹೆಮ್ಮೆಯಿಂದ ಹೇಳುತ್ತಾರೆ. ಸುಳ್ಯದ ದೇಸಾಯಿಯವರ ಕಂಪನಿಯ ನಂತರ ಬಿ.ಆರ್. ಅರಿಶಿನಗುಡಿಯವರ ಕಂಪನಿಯಲ್ಲಿ ತಿಂಗಳಿಗೆ 750 ರೂ. ಸಂಬಳಕ್ಕೆ ದುಡಿಮೆ ಮುಂದುವರೆಯಿತು. ಶೆಟ್ಟಿಯ ಹಾರಾಟ ಚಂದ್ರಿಯ ಚಲ್ಲಾಟ, ಗರೀಬಿ ಹಟಾವೋ, ಬಸ್ ಕಂಡಕ್ಟರ್, ಸೈನಿಕ ಸಹೋದರಿ, ನಾಟಕಗಳಲ್ಲಿ ನಟಿಸಿ ಮಾಲಿಕರ ಜೊತೆಗೆ ಮನಸ್ತಾಪದಿಂದ ಕಂಪನಿ ಬಿಡುವ ಪ್ರಸಂಗ ಬಂತು.

1979ರಲ್ಲಿ ಹುಬ್ಬಳ್ಳಿಗೆ ಷಟಲ್ ಆದ ಮೇಲೆ ಬದುಕಿನ ಬಂಡಿಯನ್ನು ಎಳೆಯುವದಕ್ಕಾಗಿ ಅಮೆಚೂರ ಕಂಪನಿಯ ಮೊರೆಹೋಗಬೇಕಾಯ್ತು. ಬಹುಶಃ ವೃತ್ತಿರಂಗಭೂಮಿ ಕೊಟ್ಟ ನೆಮ್ಮದಿ ಆ ಹವ್ಯಾಸಿ ರಂಗಭೂಮಿಯಿಂದ ದೊರಕಲಿಲ್ಲವೇನೋ ಮತ್ತೆ ಮರಳಿ 1986ರಲ್ಲಿ ಎನ್. ಬಸವರಾಜ ಅವರ ಗುಡಗೇರಿ ಕಂಪನಿಯಲ್ಲಿ ಗೌಡ್ರಗಂಗಿ, ಸತ್ಯಸತ್ತಿತು, ಛಲತೀರಿತು, ದುಡ್ಡಿನದರ್ಪ, ಮದುವೆಯಾಗದ ವಿಧವೆ, ಹೆಣ್ಣಿನ ಜೀವನ, ನಾಟಕದ ನಟನೆಯ ಮೂಲಕ ಇನ್ನಷ್ಟು ಬೆಳಕಿಗೆ ಬಂದ ಅನ್ನಪೂರ್ಣ 'ಗೌಡ್ರಗಂಗಿ' ನಾಟಕದಲ್ಲಿ ಗಂಗಿಯ ಪಾತ್ರ ಇವರಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟಿತು. ವಿಜಾಪೂರದಲ್ಲಿ ಈ ಗೌಡ್ರಗಂಗಿ ನಾಟಕ 79 ಪ್ರಯೋಗಗಳನ್ನು ಕಂಡಿತು.

ನಾಧೇಕೃತ 'ಎಚ್ಚರ ತಂಗಿ ಎಚ್ಚರ' ನಾಟಕದಲ್ಲಿನ ಗೋಧಾವರಿ ಪಾತ್ರಕ್ಕೆ ಉತ್ತರ ಕರ್ನಾಟಕದಾದ್ಯಂತ ಇವರನ್ನು ಬುಕ್ ಮಾಡುತ್ತಿದ್ದರು. ಕರ್ನಾಟಕ ಕಲಾವೈಭವ ನಾಟ್ಯ ಸಂಘ ಬೆಂಗಳೂರು, ಸ್ವಾಮಿ ಸಮರ್ಥ ನಾಟ್ಯಸಂಘ ಅಕ್ಕಲಕೋಟೆ, ಕುಮಾರೇಶ್ವರ ನಾಟ್ಯ ಸಂಘ ಹಾನಗಲ್ಲ, ತೋಂಟದಾರ್ಯ ನಾಟ್ಯಸಂಘ ಮಂಡಲಗೇರಿ ಹೀಗೆ ಹಲವು ಕಂಪನಿಗಳು ಗೋಧಾವರಿ ಪಾತ್ರಕ್ಕೆಂದು ಇವರನ್ನೆ ಕರೆಯಿಸಿಕೊಳ್ಳುತ್ತಾರೆ. ಈ ಕಲಾವಿದೆಯ ಅದ್ಭುತ ನಟನೆಯೇ ಅದಕ್ಕೆ ಕಾರಣ.

ಗುಲಬರ್ಗಾದಲ್ಲಿ ಈ "ಎಚ್ಚರ ತಂಗಿ ಎಚ್ಚರ" ನಾಟಕ 700 ಪ್ರಯೋಗ ಬಂಪರ್ ಹೊಡೆಯಿತು. ಈ ನಾಟಕದಲ್ಲಿ ಅನ್ನಪೂರ್ಣ ಗೋಧಾವರಿ ಪಾತ್ರದಲ್ಲಿ ರಂಗದ ಮೇಲೆ ಬಂದತಕ್ಷಣ, ದಿನವೂ ಒಬ್ಬ ಪ್ರೇಕ್ಷಕ "ಬಂದಳು ನೋಡಿ ಹಲಕಟ್ಟರಂಡೆ" ಎಂದು ಬಯ್ಯುತ್ತಿದ್ದನಂತೆ. ಕುಳಿತ ಪ್ರೇಕ್ಷಕ ಇಂಥ ಅವಾಚ್ಯ ಶಬ್ದ ಪ್ರಯೋಗ ಮಾಡಬೇಕಾದರೆ ಆ ಪಾತ್ರ ಅವನನ್ನು ರೊಚ್ಚಿಗೆಬ್ಬಿಸಿದ್ದು ನಿಜ. ಆ ಪಾತ್ರ ರೊಚ್ಚಿಗೆಬ್ಬಿಸಬೇಕಾದರೆ ಆ ನಟಿಯ ಅದ್ಭುತ ನಟನೆ, ಅವಳ ಶ್ರಮ, ಶ್ರದ್ಧೆ, ಅವಳ ನಟನೆಗೆ ಸಂದ ಗೌರವವಲ್ಲದೆ ಮತ್ತೇನೂ ಅಲ್ಲ. ಆದರೆ ಅನ್ನಪೂರ್ಣಾಳ ಮನಸ್ಸಿಗೆ ಬೇಸರವಾಗಿ ಪರದೆಯ ಹಿಂದುಗಡೆ ಹೋಗಿ ಅತ್ತಿದ್ದು ಉಂಟು. ಆದರೂ ಒಬ್ಬ ಶ್ರೇಷ್ಠ ಕಲಾವಿದೆಗೆ ಸಿಕ್ಕ ಮಾನದಂಡ. ಆ ವ್ಯಕ್ತಿಯ ಬೈಗುಳಗಳ ಸುರಿಮಳೆ, ಎಂದರೆ ತಪ್ಪಾಗಲಿಕ್ಕಿಲ್ಲ.

ಹೀಗೆ ಜೀವನದಲ್ಲಿ ತಗ್ಗು ದಿನ್ನೆಗಳನ್ನು ಏರುತ್ತ ಇಳಿಯುತ್ತ ಈಗ ಒಂದಿಷ್ಟು ನೆಮ್ಮದಿಯಾಗಿ ಉಸಿರಾಡುತ್ತ ಆಗಾಗ ಟಿ.ವಿ. ಸೀರಿಯಲ್‌ನಲ್ಲಿ ಅಭಿನಯಿಸುತ್ತಿದ್ದರೂ, ವೃತ್ತಿರಂಗಭೂಮಿಯನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲವೆನ್ನುತ್ತಾರೆ ಅನ್ನಪೂರ್ಣ. ಯಾಕೆಂದರೆ ಈ ವೃತ್ತಿರಂಗಭೂಮಿ ನನಗೆ ಅನ್ನಕೊಟ್ಟಿದೆ ಅದನ್ನು ನಾನು ಹೇಗೆ ಮರೆಯಲಿ? ಮೇಲೆ ಏರಿದ ಮೇಲೆ ನಿಚ್ಚಣಿಕೆಯನ್ನು ಕಾಲಿಂದ ಒದೆಯುವ ಜಾಯಮಾನದವಳಲ್ಲ ಎಂಬುದು ಅವಳ ನಡೆನುಡಿಯಿಂದ ಗೊತ್ತಾಗದೆ ಇರಲಿಲ್ಲ.

ರಾಜ್ಯ ಸರಕಾರದ ಮಾಶಾಸನ ಆಗಿದೆ. ಕೇಂದ್ರ ಸರಕಾರದ್ದು ಆಗಬೇಕಾಗಿದೆ 2005ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಸಿಕ್ಕಿದೆ.[27]

**ನಂದಾ ಜಯರಾಜ ಗೋಕಾಕ :**

ಬಾಗಲಕೋಟೆಯ ನವನಗರದ ಜ್ಯೋತಿ ಕಾಲನಿಯಲ್ಲಿ ವಾಸವಾಗಿರುವ ನಂದಾ ಗೋಕಾಕ ಅವರ ಮನೆಗೆ ಹೋದಾಗ ಬಹಾಽಳ ಸಂತೋಷದಿಂದ ಆ ಜೋಡಿ ನಮ್ಮನ್ನು ಸ್ವಾಗತಿಸಿತು.

ಹಿಂದಿನ ದಿನ ತಾನೇ 'ಆದರ್ಶ ಜೋಡಿ ದಂಪತಿಗಳ ಸನ್ಮಾನ'ಕ್ಕೆ ಒಳಗಾದ ಆ ಕಲಾವಿದೆಯ ಮೊಗದಲ್ಲಿ ಇನ್ನೂ ಸಂತೋಷ ಆರಿರಲಿಲ್ಲ.

ಕಲಾವಿದರನ್ನು ಸೃಷ್ಟಿಮಾಡುವ ಕಾರ್ಖಾನೆಯೆಂದೇ ಹೆಸರಾಗಿತ್ತು ಗೋಕಾಕ ಕಂಪನಿ. ಆ ಕಂಪನಿಯ ಮಾಲೀಕರಾದ ಬಸವಣ್ಣೆಪ್ಪನವರ ಮಗ ಈ ಜಯರಾಜ. ಇವರ ಧರ್ಮ ಪತ್ನಿ ಈ ಹೆಸರಾಂತ ನಟಿ ನಂದಾ ಗೋಕಾಕ.

---

27 8-7-2009 ರಂದು ಬೆಂಗಳೂರಿನ ಕಮಲನಗರದಲ್ಲಿ ಸಂದರ್ಶನ ಮಾಡಿದ್ದು.

ತಾಯಿ ತಾರಾಬಾಯಿ ಶಾಲಾ ಶಿಕ್ಷಕಿಯಾಗಿದ್ದಳು. ಸಿಡುಕು ಸ್ವಭಾವ ತನ್ನ ಮುಂಗೋಪಿತನದಿಂದ ತನ್ನ ಸಂಸಾರವನ್ನು ತಾನೇ ಹಾಳುಮಾಡಿಕೊಂಡಳೇನೋ? ಜಯಮ್ಮ, ಶೈಲಮ್ಮ, ನಂದಮ್ಮ ಈ ಮೂವರು ಸಹೋದರಿಯರು ಬೀದಿಗೆ ಬರಬೇಕಾಯ್ತು. ಸಮುದ್ರ ತನ್ನ ಗರ್ಭದಲ್ಲಿ ಏನೆಲ್ಲವನ್ನು ಹುದುಗಿಸಿಕೊಂಡಿರುತ್ತದೆ. ಮೇಲುನೋಟಕ್ಕೆ ಮತ್ತೆ ಏನೂ ಅರಿಯದಂತೆ ಶಾಂತವಾಗಿಯೇ ಇರುತ್ತದೆ. ಹಾಗೆಯೇ ತಾಯಿಯಿಂದ ದೂರಾದ ಈ ಮಕ್ಕಳು ಅನಾಥರಾಗಿ ಅಲೆದಾಡುತ್ತಿರುವಾಗ ರಂಗಭೂಮಿ ಅವರಿಗೆ ಆಶ್ರಯನೀಡಿತು. ಅಕ್ಕಂದಿರ ದಾರಿಯಲ್ಲಿಯೇ ಈ ನಂದಾ ಕೂಡಾ ಹೆಜ್ಜೆಹಾಕಿದಳು.

ಒಳ್ಳೇಯ ಶಿಕ್ಷಣ ಪಡೆಯಬೇಕು. ಓದಿ ಮುಂದಕ್ಕೆ ಬರಬೇಕು. ಎಂಬ ಈ ಹುಡುಗಿಯ ಆಶೆ ಕೈಗೂಡಲಿಲ್ಲ. ಓದಿನಲ್ಲಿ ಮುಂದಿದ್ದ ಚುರುಕಾದ ನಂದಾ 8ನೇ ಇಯತ್ತಿಗೆ ಶಾಲೆಗೆ ಗುಡ್ ಬೈ ಹೇಳಬೇಕಾಯ್ತು. ಬಡತನ, ತಾಯಿಯಿದ್ದರೂ ಇಲ್ಲದ ಅನಾಥ ಪ್ರಜ್ಞೆ ಇವೆಲ್ಲವುಗಳ ನಡುವೆಯೂ ಏನಾದರೂ ಸಾಧಿಸುವ ಛಲ ಅವಳಲ್ಲಿತ್ತು. ಬದುಕಿನ ಬಂಡಿಯನ್ನು ಎಳೆಯಲು ಬಣ್ಣಹಚ್ಚುವುದು ಅನಿವಾರ್ಯವಾಯ್ತು. ತನ್ನ ಎಂಟನೆಯ ವಯಸ್ಸಿನಲ್ಲಿಯೇ ಗೋಕಾಕ ಕಂಪನಿಯಲ್ಲಿ 'ಗುಳಗಿ ಗುಂಡಮ್ಮ' ನಾಟಕದಲ್ಲಿ 'ಶಶಿಕಾಂತ' ಎನ್ನುವ ಬಾಲ ಪಾತ್ರದ ಮೂಲಕ ಇವಳ ಬಣ್ಣದ ಬದುಕು ಪ್ರಾರಂಭವಾಯಿತು. ಹಾಗೇ ಓದು ಕೂಡಾ ಮುಂದುವರಿಸಿದ್ದಳು.

1976 ರಿಂದ 1987 ರವರೆಗೆ ಒಂದು ದಶಕಕ್ಕಿಂತಲೂ ಹೆಚ್ಚಿಗೆ ಈ ಗೋಕಾಕ ಕಂಪನಿಯಲ್ಲಿ ಬಣ್ಣ ಹಚ್ಚಿದ ಅನುಭವ ಇವರದು. ಮುಂದೆ ಈ ಗೋಕಾಕ ಕಂಪನಿ ಮೂಡಲಗಿಗೆ ಕ್ಯಾಂಪ ಹಾಕಿದಾಗ 'ರತ್ನ ಮಾಂಗಲ್ಯ' ನಾಟಕದ 'ಮಾಳವ್ವ'ನ ಪಾತ್ರವನ್ನು ಬೇರೊಬ್ಬ ಹುಡುಗಿಗೆ ಮಾಡಲು ಹೇಳಿದ್ದರು ಆ ಹುಡುಗಿಗೆ ಸರಿಯಾಗಿ ಆ ಡೈಲಾಗು ಹೇಳಲು ಬರಲಿಲ್ಲ. ಅಲ್ಲೇ ಆ ರಂಗತಾಲೀಮನ್ನು ನೋಡುತ್ತ ಕುಳಿತ ಈ ನಂದಾ ಆ ಡೈಲಾಗನ್ನು ಸರಾಗವಾಗಿ ಹೇಳಿದಾಗ ಆ ಮಾಳವ್ವನ ಪಾತ್ರಕ್ಕೆ ಆವತ್ತೆ ಆಯ್ಕೆಮಾಡಿಬಿಟ್ಟರು. ಗೋಕಾಕ ಬಸವಣ್ಣೆಪ್ಪನವರ ಕಂಪನಿ ಎಂದರೆ ಉತ್ತರ ಕರ್ನಾಟಕದಲ್ಲಿನೇ ಆ ಕಾಲಕ್ಕೆ ಒಳ್ಳೇಯ ಪ್ರಸಿದ್ಧಿಯನ್ನು ಪಡೆದ ಕಂಪನಿ. ಅರ್ಹತೆ ಇದ್ದವರು ಮಾತ್ರ ಅಲ್ಲಿ ಬದುಕಲು ಸಾಧ್ಯವಿತ್ತು. ನಂದಾಗೆ ಆ ಯೋಗ್ಯತೆ ಇದೆ ಎಂಬುದು ಖಾತ್ರಿಯಾಯ್ತು. ಸರಿಯಾಗಿ ಮಾತು ಹೇಳಲು ಬರದೇ ಇದ್ದಾಗ ಅಥವಾ ಆ ಪಾತ್ರಮಾಡುವ ಸಂಬಂಧಪಟ್ಟ ನಟಿಯರು ಬರದೇ ಇದ್ದಾಗ ಅಂಥ ಅವಕಾಶಗಳನ್ನು ತನ್ನದನ್ನಾಗಿ ಮಾಡಿಕೊಂಡು ಇಷ್ಟು ಎತ್ತರಕ್ಕೆ ಬೆಳೆದು ನಿಂತಳು ಈ ಕಲಾವಿದೆ.

ಗೋಕಾಕ ಬಸವಣ್ಣೆಪ್ಪನವರ ಕ್ಯಾಂಪ ಮಹಾಲಿಂಗಪುರದಲ್ಲಿ ಹಾಕಿತ್ತು. ಅಲ್ಲಿ 'ಗುಳಗಿ ಗುಂಡಮ್ಮ' ನಾಟಕ ನಡೆದಿತ್ತು. ಛಾಯಮ್ಮ ಎಂಬ ನಟಿ ಒಬ್ಬ ಮುದುಕಿಯ ಪಾತ್ರವನ್ನು ಮಾಡುತ್ತಿದ್ದಳು. ಅನಿವಾರ್ಯ ಕಾರಣಗಳಿಂದ ಅವಳಿಗೆ ಆವತ್ತು ಬರಲಿಕ್ಕೆ ಆಗಲಿಲ್ಲ. ಅವಳು ಇಲ್ಲ ಅಂದರೆ ನಾಟಕವೂ ಇಲ್ಲ. ಆ

ಪಾತ್ರವನ್ನು ಈ ಹದಿನೈದು ವರ್ಷದ ಹುಡುಗಿ ನಂದಾಳಿಂದ ಮಾಡಿಸಿದರು. ಹದಿನೈದರ ಹರೆಯದ ಈ ಹುಡುಗಿ 85 ವರ್ಷದ ಮುದುಕಿಯ ಪಾತ್ರ ಮಾಡಿ ಎಲ್ಲರ ಮೆಚ್ಚುಗೆಗೆ ಪಾತ್ರಳಾದಳು. ಅಷ್ಟೇ ಅಲ್ಲ ನಾಟಕ ನಿಲ್ಲುವ ಹಂತದಲ್ಲಿದ್ದಾಗ ಅದಕ್ಕೆ ಚಾಲನೆಯನ್ನು ನೀಡಿದಳು. ಗೋಕಾಕ ಕಂಪನಿಯ ಒಂದು ವಿಶೇಷತೆ ಎಂದರೆ ಯಾರೂ ಯಾವಾಗಲೂ ಒಂದೇ ಪಾತ್ರಕ್ಕೆ ಬ್ರ್ಯಾಂಡ ಆಗ್ತಾ ಇರಲಿಲ್ಲ. ಮುಂದೆ 'ವರನೋಡಿ ಹೆಣ್ಣು ಕೊಡು' ಈ ನಾಟಕದಲ್ಲಿ ಶೈಲಾನ ಪಾತ್ರ ಹೆಚ್ಚು ಖುಷಿಯನ್ನು ತಂದುಕೊಟ್ಟಿತು. ಚಿಕ್ಕ ಸೊಸೆ, ಬದುಕು ಬಂಗಾರವಾಯ್ತು. ಹೀಗೆ ಹಲವಾರು ನಾಟಕಗಳಲ್ಲಿ ಒಳ್ಳೆಯ ಹೆಸರನ್ನು ಗಿಟ್ಟಿಸಿದರು.

1979 ರಲ್ಲಿ ಗೋಕಾಕ ಕಂಪನಿಯ ಮಾಲೀಕರಾದ ಬಸವಣ್ಣೆಪ್ಪನವರ ಮಗ ಜಯಣ್ಣನವರನ್ನು ಪ್ರೀತಿಸಿ ಮದುವೆಯಾದರು. ಆದರೆ 1983 ರಲ್ಲಿ ಜಯಣ್ಣನಿಗೆ ಮನೆಯವರ ಒತ್ತಾಯದಿಂದ ಮತ್ತೊಂದು ಮದುವೆಯನ್ನು ಮಾಡಿದರು.ತಾನು ಮೊದಲಿನ ಹೆಂಡತಿ ಎಂಬುದನ್ನು ಮುಚ್ಚಿಟ್ಟು ತಾನೆ ಆ ಮದುವೆಯನ್ನು ಮಾಡಲು ಸಹಾಯಮಾಡಿದಳು. ಅದೊಂದು ನಾಟಕವನ್ನೆ ಮಾಡಬೇಕಾಯ್ತು.ಅವಳಲ್ಲಿರುವ ಸಹನಶೀಲತೆ, ತ್ಯಾಗ ಅದನ್ನು ಶಬ್ದದಲ್ಲಿ ಹಿಡಿದಿಡಲು ಸಾಧ್ಯವಿಲ್ಲ. 10-07-2009 ರಂದು ಬಾಗಲಕೋಟೆಯಲ್ಲಿ ಪ್ರೇಮಾ ಬದಾಮಿಯವರ ಮುಂದಾಳತ್ವದಲ್ಲಿ ನಡೆದ ಆದರ್ಶ ರಂಗ ಜೋಡಿ ಸನ್ಮಾನ ನಡೆಯಿತು. ಈ ಒಂದು ಜೋಡಿಯು ಪ್ರಶಸ್ತಿ ಪಡೆದದ್ದನ್ನು ನೋಡಿ ಹೃದಯತುಂಬಿ ಬಂತು.

1987ರ ಗೋಕಾಕ ಕಂಪನಿಯನ್ನು ಬಿಟ್ಟು ಮಗಳು ಹೇಮಲತಾಗೋಸ್ಕರವಾಗಿ ಅಮೆಚೂರ ಮಾಡತೊಡಗಿದರು. ಮುಂದೆ ಸುಳ್ಯದ ದೇಸಾಯಿ ಕಂಪನಿಯಲ್ಲಿ ದಿನಕ್ಕೆ 75 ರೂಪಾಯಿ ಸಂಬಳದೊಂದಿಗೆ ಬಣ್ಣಹಚ್ಚತೊಡಗಿದರು. ಈ ಕಂಪನಿಯಲ್ಲಿ 'ಮುದುಕನ ಮದುವೆ' ನಾಟಕ ಚೆನ್ನಾಗಿ ಓಡಿತು.

ಒಂದು ದಶಕಕ್ಕಿಂತಲೂ ಹೆಚ್ಚು ಗೋಕಾಕ ಕಂಪನಿಯಲ್ಲಿ ಬಣ್ಣ ಹಚ್ಚಿದ್ದು ವ್ಯರ್ಥವಾಗಲಿಲ್ಲ. ಅದೊಂದು ಇವರಿಗೆ ಪ್ಲಸ್ ಪಾಯಿಂಟಾಯ್ತು. ಅಂಥ ದೊಡ್ಡ ಕಂಪನಿಯಲ್ಲಿ ಸರ್ವಿಸ್ ಮಾಡಿದ ಹೆಗ್ಗಳಿಕೆಯಿಂದ ಈ ನಟಿ ಒಂದಿಷ್ಟು ಗೆಲುವಾಗಿದ್ದಳು. ಬೇರೆ ಕಂಪನಿಯವರು ಬಂದು ಇವರನ್ನು ಬುಕ್ ಮಾಡತೊಡಗಿದರು.

"ಶಿವಪಾರ್ವತಿ ನಾಟ್ಯಸಂಘ ಜೇವಾಪೂರ" ಈ ಕಂಪನಿಯಲ್ಲಿ 3 ವರ್ಷ ಬಣ್ಣಹಚ್ಚಿದ ನಂದಾ ಸುಳ್ಯದ ದೇಸಾಯಿಯವರಲ್ಲಿ ಒಂದು ವರ್ಷದ ಅನುಭವ ಮುಂದೆ ಆರ್.ಆರ್.ಅರಿಶಿನಗೋಡಿಯವರ ಕಂಪನಿಯಲ್ಲಿ 4 ವರ್ಷದ ಅನುಭವವಿರುವ ಈ ನಂದಾಳದು ಬಿಡುವಿಲ್ಲದ ಬದುಕು. ಓದಬೇಕು ಯಾವುದಾದರೂ ನೌಕರಿ ಮಾಡಬೇಕು ಎಂಬ ಕನಸು ಕನಸಾಗಿಯೇ ಉಳಿಯಿತೋ? ಅಥವಾ

ಹೆತ್ತತಾಯಿಯಿಂದಲೇ ಆ ಕನಸು ಒಡೆದು ಚೂರಾಯಿತೋ? ಒಟ್ಟನಲ್ಲಿ ಅರಳಿ ಘಮಘಮಿಸಬೇಕಾದ ಹೂ ಬಾಡಿದರೂ ಇನ್ನೊಂದರಲ್ಲಿ ತನ್ನ ಸಾಫಲ್ಯವನ್ನು ಪಡೆಯಿತು. ಮಗಳ ಜೀವನ ಉದ್ಧಾರ ಮಾಡದ ಆ ತಾಯಿ ಮುಂದೆ ಮೊಮ್ಮಗಳ ಜೀವನಕ್ಕಾದರೂ ಸ್ಫೂರ್ತಿಯ ಸೆಲೆಯಾಗಿ ನಿಂತಳು. ಅವ್ವನ ಬಗ್ಗೆ ಮನದಲ್ಲಿ ಕಿಂಚಿತ್ತು ದ್ವೇಷವಿಲ್ಲ.ನನ್ನ ಮಗಳಿಗಾದರೂ ಒಂದು ಒಳ್ಳೇಯ ಶಿಕ್ಷಣವನ್ನು ಕೊಡಿಸಿ ಅವಳು ತನ್ನ ಕಾಲಮೇಲೆ ನಿಲ್ಲುವಂತೆ ಮಾಡಿದಳಲ್ಲ ಎಂಬ ಹೆಮ್ಮೆ ಈ ನಂದಾಳಿಗೆ. ಮಗಳು ಹೇಮಲತಾ ಇವತ್ತು ಪ್ರಾಥಮಿಕ ಶಾಲೆಯ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಳೆ. ಮಗಳು ಈ ವೃತ್ತಿಗೆ ಬರುವುದು ಬೇಡ. ಈ ಬಣ್ಣದ ಬದುಕು ನನ್ನಿಂದಲೇ ಮುಕ್ತಾಯವಾಗಲಿ ಎಂಬ ಬಲವಾದ ಆಶೆ ಇವಳದು.

ತನ್ನ ತಪ್ಪನ್ನು ಒಪ್ಪಿಕೊಳ್ಳುವ ಪ್ರಾಮಾಣಿಕ ಮನಸು ಇವಳದು. 'ಸಂಪತ್ತಿಗೆ ಸವಾಲ್' ನಾಟಕದಲ್ಲಿ ಲಕ್ಷ್ಮೀಯ ಪಾತ್ರ ಅದೊಂದು ಗಯ್ಯಾಳಿ ಪಾತ್ರ ಎಷ್ಟೇ ಪ್ರಯತ್ನ ಪಟ್ಟರೂ ಆ ಪಾತ್ರವನ್ನು ನನ್ನಿಂದ ಮಾಡಲು ಆಗಲೇ ಇಲ್ಲ. ಅದನ್ನು ಅಂಬುಜಮ್ಮ ಮಾಡುತ್ತಿದ್ದರು. ಎಂದು ನಯವಾಗಿ ಒಪ್ಪಿಕೊಳ್ಳುವ ಮಗುವಿನಂತ ಮನಸ್ಸು ಇವರದು. ಜೇವಾಪೂರ ಕಂಪನಿಯಲ್ಲಿದ್ದಾಗ "ನನ್ನವರು ನನ್ನ ಹಡೆದವರು" ನಾಟಕದಲ್ಲಿ ನಂದಾನ ಪಾತ್ರ ತೊದಲು ಪಾತ್ರ, ಆ ಕಂಪನಿಗೆ ತುಂಬಾ ಒಳ್ಳೇಯ ಹೆಸರನ್ನು ಒಳ್ಳೇಯ ಕಲೆಕ್ಷನ್ ತಂದು ಕೊಟ್ಟ ಪಾತ್ರ.

ಆರ್.ಆರ್.ಅರಿಶಿನಗೋಡಿಯವರು ಕಾಮಿಡಿ ಪಾತ್ರಕ್ಕೆ ಎಲ್ಲೇ ಇದ್ದರೂ ಇವರನ್ನೇ ಕರೆಯಿಸಿಕೊಳ್ಳುತ್ತಿದ್ದರಂತೆ. ಒಬ್ಬ ನಟಿಗೆ ಇದಕ್ಕಿಂತ ಇನ್ನೇನುಬೇಕು?

ನನಗೆ ನನ್ನ ಗಂಡನೇ ಗುರು. ಹಾಗೂ ಒಳ್ಳೇಯ ಫ್ರೆಂಡ ಕೂಡಾ ಎಂದು ಹೆಮ್ಮೆಯಿಂದ ಹೇಳುವ ನಂದಾ, ಜಯರಾಜ ಅವರ ಬಾಳಸಂಗಾತಿಯಾಗಿ, ನಟಿಯಾಗಿ, ತಾಯಿಯಾಗಿ, ಒಬ್ಬ ಗೃಹಿಣಿಯಾಗಿ ಪರಿಪೂರ್ಣ ಮಹಿಳೆಯಾಗಿ ಬದುಕಿನ ಬಂಡಿಯನ್ನು ಸಾಗಿಸುತ್ತಿದ್ದಾರೆ.[28]

**ಪ್ರೇಮಾ ಬಾದಾಮಿ :**

ಐತಿಹಾಸಿಕ ನಗರ, ಶಿಲ್ಪಕಲೆಯ ತವರೂರು ಚಾಲುಕ್ಯರ ನಾಡಾದ ಬಾದಾಮಿಯಲ್ಲಿ 1962 ರಲ್ಲಿ ಜನನ. ಕನ್ನಡ ವೃತ್ತಿ ರಂಗಭೂಮಿ ಕಂಡ ಅಪರೂಪದ ಕಲಾವಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಈಕೆ ಅಪ್ರಿಯವಾದ ಕ್ಷೇತ್ರದಲ್ಲೇ ಕಾಲಿಟ್ಟರೂ ಕೂಡಾ ಸಾಧಿಸಿದ ಸಾಧನೆ ಹೆಮ್ಮೆಪಡುವಂತದ್ದು.

ಹೊಟ್ಟೆಪಾಡಿಗೋ ಬಣ್ಣದ ಬೆಡಗಿನ ಥಳಕು ಬೆಳಕಿನ ಲೋಕಕ್ಕೋ ಮರುಳಾಗಿ ಈ ಕ್ಷೇತ್ರಕ್ಕೆ ಬಂದವರು ಅನೇಕರಿರಬಹುದು. ಇಲ್ಲ ರಂಗಭೂಮಿಯ ಯಾವುದೋ ನಟನನ್ನು ಮೆಚ್ಚಿ ಅವನ ಹಿಂದೆ

[28] 11-7-2009 ರಂದು ಬಾಗಲಕೋಟೆಯಲ್ಲಿ ಸಂದರ್ಶನ ಮಾಡಿದ್ದು.

ಹೋಗಿ ನಟಿಯರಾದವರೂ ಇರಬಹುದು. ಇಂಥವರಿಂದ ಹೆಚ್ಚಿನ ಸಾಧನೆಯ ನಿರೀಕ್ಷೆಯೂ ತಪ್ಪಾಗಬಹುದು. ಆದರೆ ಪ್ರೇಮಾ ಬದಾಮಿ ಒಬ್ಬ ನಟಿಯಾಗಿ, ನಾಟಕ ನಿರ್ದೇಶಕಳಾಗಿ, ಕವಿಯತ್ರಿಯಾಗಿ, ಲೇಖಕಿಯಾಗಿ (ನಾಟಕ ರಚನೆ) ನನ್ನ ಮೇಲೆ ಛಾಪು ಒತ್ತಿದ್ದಾರೆ.

ಮೂಲತಃ ಇವಳದು ಕಲಾವಿದರ ಮನೆತನ. ತಾಯಿ ಪದ್ಮಾವತಿ ರಂಗಭೂಮಿ ಕಲಾವಿದೆ. ತಾಯಿಯಿಂದ ಸಹಜ ಅಭಿನಯ ಇವಳಿಗೆ ಬಳುವಳಿಯಾಗಿ ಬಂದಿರಲೂ ಬಹುದು. ಪ್ರತಿಯೊಬ್ಬರಿಗೂ ಒಂದು ಕನಸು, ಗುರಿ ಎನ್ನುವುದು ಇದ್ದೇ ಇರುತ್ತದೆ. ಅದರಂತೆ ಪ್ರೇಮಾಳಿಗೂ ಚೆನ್ನಾಗಿ ಓದಬೇಕೆಂಬ ಅದಮ್ಯ ಆಸೆ, ಆದರೆ ನಾವು ಅಂದುಕೊಂಡಂತೆ ನಡೆದರೆ ಅದಕ್ಕೆ ಬದುಕು ಯಾಕೆ ಎನ್ನಬೇಕು? ತಾಯಿ ಪದ್ಮಾವತಿ ರಂಗತಾಲೀಮು ಮಾಡುತ್ತಿರಬೇಕಾರೆ ಅವಳ ಹಿಂದೆ ಮುಂದೆ ಓಡಾಡುವ ಈ ಮರಿ ಜಿಂಕೆಯ ಮೇಲೆ ಕಂಪನಿ ಮಾಲೀಕರ ದೃಷ್ಟಿಬಿದ್ದು, ತಾಯಿಯ ಒತ್ತಾಯಕ್ಕೆ ಮಣಿದು, ಅನಿವಾರ್ಯವಾಗಿ ರಂಗಭೂಮಿಗೆ ಬಂದಂತ ಪ್ರೇಮಾಳಿಗೆ ಅದು ಬೇಡವಾದ ವೃತ್ತಿಯಾಗಿದ್ದರೂ ಅದರಲ್ಲೇ ಸಂತೋಷವನ್ನು ಕಂಡಿದ್ದಾಳೆ. "ಸಿಗದೇ ಇರುವ ವಸ್ತುವಿಗಾಗಿ ಕೊರಗುವದಕ್ಕಿಂತ, ಇದ್ದುದರಲ್ಲಿಯೇ ತೃಪ್ತಿಯನ್ನು ಪಡೆಯಬೇಕೆಂಬ ಹಟ ಇವಳದು.

8ನೇ ತರಗತಿಯಲ್ಲಿ ಓದುವಾಗ ಅಂದರೆ 1978ರಿಂದ ಬಣ್ಣದ ಬದುಕಿಗೆ ಮುಖಮಾಡಿದ ಈಕೆ ಹಿಂತಿರುಗಿ ನೋಡಿಲ್ಲ. ಮೊದಮೊದಲು ಬಳ್ಳಾರಿ ಜಿಲ್ಲೆಯ ಸಿರಿಗೆರೆಯ ನಾಗನಗೌಡ ಮಾಸ್ತರ್‌ರ ಅಣ್ಣತಂಗಿ ನಾಟಕದಲ್ಲಿ ನಟನೆ, ಹಾಗೂ ಹವ್ಯಾಸಿ ರಂಗಚಟುವಟಿಕೆಯಲ್ಲಿ ತೊಡಗಿಸಿಕೊಂಡ ಪ್ರೇಮಾ 1982ರ ಹೊತ್ತಿಗೆ ಪಿ.ಬಿ. ದುತ್ತರಗಿ ಅವರ ಪ್ರಭಾವಕ್ಕೆ ಒಳಗಾಗಿ ಅವರ ಮಾರ್ಗದರ್ಶನದಲ್ಲಿ ರಂಗಭೂಮಿಗಾಗಿ ಸತತ ದುಡಿಮೆ. ಪಿ.ಬಿ. ಧುತ್ತರಗಿ ಅವರನಾಟಕ ಕಂಪನಿಯಲ್ಲಿ ನಾಯಕಿಯಾಗಿ ಅಭಿನಯಿಸಿದ ನಾಟಕಗಳು ಮಲಮಗಳು, ತಾಯಿಕರಳು, ಸುಖದ ಸುಪ್ಪತ್ತಿಗೆ, ಸಿಂಧೂರ ಲಕ್ಷ್ಮಣ, ಅರಿಶಿನಕುಂಕುಮ ಈ ಎಲ್ಲ ನಾಟಕಗಳಿಗೆ ಸರೋಜಮ್ಮ ದುತ್ತರಗಿ ಅವರೇ ನಿರ್ದೇಶಕರು. ಇವರ ಗರಡಿಯಲ್ಲಿ ಪಳಗಿದ ಪ್ರೇಮಾಳಿಗೆ ನಟನೆ ನೀರು ಕುಡಿದಷ್ಟೇ ಸರಳವಾಯ್ತು.

ಇದಾದ ನಂತರ ಧಾರವಾಡ ಬಸವರಾಜಪ್ಪನವರ ಕಂಪನಿ, ಹಲವಾರು ಒಳ್ಳೆಯ ಕಂಪನಿಗಳಲ್ಲಿ ಇದೂ ಒಂದು ಕಂಪನಿ. ಇಲ್ಲಿ ಸ್ವಲ್ಪದಿನ ಬಣ್ಣಹಚ್ಚಿದ ಪ್ರೇಮಾ. ಸಂಗಮೇಶ್ವರ ನಾಟ್ಯಸಂಘ ಗುಡಗೇರಿ (ಮಾಲೀಕರು ಎನ್. ಬಸವರಾಜ) ಈ ಕಂಪನಿಯಲ್ಲಿ ನಾಯಕಿಯಾಗಿ ಮೆಚ್ಚುಗೆ ಗಳಿಸಿದ ನಾಟಕಗಳೆಂದರೆ, ರೈತನ ಮಕ್ಕಳು, ದುಡ್ಡಿನ ದರ್ಪ, ಸತ್ಯಸತ್ತಿತು, ವಿಧಿಯ ಕೈವಾಡ, ಸುಶಿಕ್ಷಿತರು, ಎಚ್ಚರ ತಂಗಿ ಎಚ್ಚರ. ಸತ್ಯಸತ್ತಿತು ಈ ನಾಟಕದಲ್ಲಿ 'ಆಶಾ'ನ ಪಾತ್ರ ಹೆಚ್ಚು ಖುಷಿ ತಂದು ಕೊಟ್ಟ ಪಾತ್ರ

ಎನ್ನುತ್ತಾರೆ ಪ್ರೇಮಾ. ಹುಬ್ಬಳ್ಳಿಯಲ್ಲಿ ಮಾರುತಿ ನಾಟ್ಯಸಂಘವನ್ನು ಪ್ರಾರಂಭಿಸಿ ಅದರ ಮೂಲಕ ಸ್ವರಚಿತ ನಾಟಕಗಳನ್ನು ಪ್ರದರ್ಶಿಸಿದ್ದಲ್ಲದೆ ನಿರ್ದೇಶನ ಕೂಡ ಅವರದೇ. ಅದೇ ರೀತಿ ಬಾಗಲಕೋಟೆಯಲ್ಲಿ 1999ರಲ್ಲಿ 'ಭಾಗ್ಯವಂತಿ ನಾಟ್ಯಸಂಘ" ಪ್ರಾರಂಭಿಸಿ ಪ್ರದರ್ಶಿಸಿದ ನಾಟಕಗಳು 'ಪ್ರೇಮಶಿಕ್ಷೆ,' ಕುಂಕುಮ ತಂದ ಕೈಲಾಸ, ಎಲ್ಲೋ ಜೋಗಪ್ಪ ನಿನ್ನ ಅರಮನೆ, ಇವು ಇವರೇ ರಚಿಸಿದ ನಾಟಕಗಳು. ನಾಟಕ ರಚನೆಯ ಜೊತೆಗೆ ಕಾವ್ಯಕಟ್ಟುವ ಕಲೆಯನ್ನೂ ಇವರು ಚೆನ್ನಾಗಿ ಕರಗತ ಮಾಡಿಕೊಂಡಿದ್ದಾರೆ. ಮೂರು ಕವನಸಂಕಲನಗಳು ಹೊರಬಂದಿವೆ. 1) ಸ್ನೇಹ ಸಂಗಾತಿ, 2) ಮೈತ್ರಿ, 3) ಅಂತರಂಗದ ಅಲೆಗಳು.

ನಟನೆ, ಬರವಣಿಗೆಯ ಜೊತೆಜೊತೆಯಲ್ಲಿನೇ ಸಾಮಾಜಿಕ ಚಟುವಟಿಕೆಯಲ್ಲಿಯೂ ತನ್ನನ್ನು ಗುರುತಿಸಿಕೊಂಡಿದ್ದಾಳೆ ಪ್ರೇಮಾ. ದಿನಾಂಕ : 10-7-2009 ರಂದು ಭಾಗ್ಯವಂತಿ ನಾಟ್ಯಸಂಘ ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಸಂಯೋಗದಲ್ಲಿ ಬಾಗಲಕೋಟೆಯಲ್ಲಿ ಐದು ಆದರ್ಶ ರಂಗಜೋಡಿಗಳಿಗೆ (ದಂಪತಿ) ಸನ್ಮಾನವನ್ನು ಇಟ್ಟುಕೊಂಡಿದ್ದು. ಒಂದಿಲ್ಲೊಂದು ಕಾರ್ಯದಲ್ಲಿ ಸದಾ ಚಟುವಟಿಕೆಯಿಂದ ಇರುವ ಪ್ರೇಮಾಳಿಗೆ ರಂಗಪ್ರೇಮಿಗಳಿಂದ ಪ್ರಶಸ್ತಿಪತ್ರ, ಅಭಿನಂದನ ಪತ್ರ, ಅಭಿನಯ ಸರಸ್ವತಿ, ಅಭಿನಯ ಚತುರೆ, ಕಲಾಪ್ರವೀಣೆ ಎಂಬ ಬಿರುದಾವಳಿಗಳನ್ನು ಪಡೆಯುವಷ್ಟರ ಮಟ್ಟಿಗೆ ಬೆಳೆದು ನಿಂತಿದ್ದಾಳೆ. ಜೊತೆಗೆ 2003ರಲ್ಲಿ ಕರ್ನಾಟಕ ನಾಟಕ ಅಕಾಡಮಿ ಸದಸ್ಯತ್ವದ ಜೊತೆಗೆ 2005ರಲ್ಲಿ ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಬಾಚಿಕೊಂಡಿದ್ದಾಳೆ. ಅಷ್ಟೇ ಅಲ್ಲ, ಕರ್ನಾಟಕದ ಅತ್ಯಂತ ಪ್ರತಿಷ್ಠಿತ ಪ್ರಶಸ್ತಿಯಾದ ಗುಬ್ಬಿ ವೀರಣ್ಣ ಪ್ರಶಸ್ತಿಗೆ, ಆಯ್ಕೆ ಸಮಿತಿಯ ಸದಸ್ಯಳನ್ನಾಗಿ ಕರ್ನಾಟಕ ಸರಕಾರ ಈಕೆಯನ್ನು ನೇಮಿಸಿದ್ದು, ಈಕೆ ಬೆಳೆದ ಎತ್ತರವನ್ನು ಗುರುತಿಸಬಹುದು.

ಸದಾ ನಾಟಕದ ಗುಂಗಿನಲ್ಲಿಯೇ ಓಡಾಡುವ ಪ್ರೇಮಾ ದೂರದರ್ಶನದ ಧಾರಾವಾಹಿಯ ನಟಿಯಾಗಿಯೂ ಮಿಂಚಿದವರು. "ವೃತ್ತಿರಂಗಭೂಮಿಯ ನಟಿಯರಲ್ಲೇ ಪ್ರೇಮಾ ಭಿನ್ನರಾಗಿ ಕಾಣುತ್ತಾರೆ." ಎಂದು ಹೇಳಿದವರು ಬೇರೆಯಾರೂ ಅಲ್ಲ, ಹಿರಿಯ ಸಾಹಿತಿ ಡಾ. ಬಾಳಾಸಾಹೇಬ ಲೋಕಾಪೂರ ಅವರು.

ಸಂಗೀತದ ಅಲಾಪನೆ, ಗೆಜ್ಜೆಯ ನಾದದೊಂದಿಗೆ ಬೆಳೆದು ಬಂದ ಪ್ರೇಮಾ ಬಿ.ಎ. ದ್ವಿತೀಯ ವರ್ಷಕ್ಕೆ ಓದಿಗೆ ಗುಡ್‌ಬಾಯ್ ಹೇಳಿ ತಾನೊಬ್ಬ ಒಳ್ಳೆಯ ಕಲಾವಿದೆಯಾಗಬೇಕು "ಗೆಜ್ಜೆ ಕಟ್ಟಿದವರೆಲ್ಲ ಲಜ್ಜೆಗೇಡಿಗಳಲ್ಲ" ಎಂಬ ಮಾತು ಅಕ್ಷರಶಃ ನಿಜಮಾಡಿ ಸಾಧಿಸಿ ತೋರಿಸಿದ ಛಲಗಾರ್ತಿ. ಆದಾಗ್ಯೂ ಮುಳ್ಳಿನ ನಡುವೆ ಸುಂದರ ಗುಲಾಬಿಯಂತೆ ಅವಳ ಬದುಕು ಅರಳಿದೆ. ಅರಳಿದೆ ಎನ್ನುವುದಕ್ಕಿಂತ ಅರಳಿಸಿಕೊಂಡಿದ್ದಾಳೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಅಹಂಮಿಕೆ, ಗತ್ತು, ದರ್ಪ ಇಲ್ಲದ ಸರಳ ಸಜ್ಜನಿಕೆಯ ಬಿಚ್ಚುಮನಸ್ಸಿನ ಪ್ರೇಮಾಳಿಗೆ ರಂಗಭೂಮಿಗೆ ಸಂಬಂಧಪಟ್ಟಂತೆ ಮಹಿಳೆಯರಿಗೆ ಸಂಬಂಧಪಟ್ಟಂತೆ ಕೆಲವೊಂದು ಪ್ರಶ್ನೆಗಳನ್ನು ಕೇಳಿದಾಗ, ಮಾಧ್ಯಮಗಳು ರಂಗಭೂಮಿಯ ಮೇಲೆ ಪ್ರಹಾರ ಮಾಡಿದ್ದು ನಿಜ. ಇತ್ತೀಚಿನ ದಿನಗಳಲ್ಲಿ ಮತ್ತೆ ರಂಗಭೂಮಿಯ ಬಗ್ಗೆ ಜನರಲ್ಲಿ ಆಸಕ್ತಿ ಮೂಡುತ್ತಿದೆ. ರಂಗಪರಿಕರದಲ್ಲಿ ತಾಂತ್ರಿಕತೆಯಲ್ಲಿ, ನಾಟಕದ ಕಥೆಯಲ್ಲಿ ಬದಲಾವಣೆ ಬೇಕು. ವೇಷಭೂಷಣದಲ್ಲಿ ಬದಲಾವಣೆ ಆದರೆ ಸಾಲದು ಎನ್ನುತ್ತಾರೆ.

ಗಂಡ, ಮನೆ, ಮಕ್ಕಳು ಅದೇ ಅವಳ ಜಗತ್ತಲ್ಲ, ಅದನ್ನು ಮೀರಿಯೂ ಆಕೆಗೆ ಇನ್ನೊಂದು ಜಗತ್ತಿದೆ. ಅಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು, ಮುಂದೆ ಬರಲು ಮಹಿಳೆ ಪ್ರಯತ್ನ ಮಾಡಬೇಕು ಎಂಬ ಸ್ತ್ರೀಪರ ಕಾಳಜಿಯೂ ಇವರಲ್ಲಿದೆ.

ಸಧ್ಯ ಪ್ರೇಮಾ ಧಾರವಾಡದ ವಿವೇಕಾನಂದ ನಗರದಲ್ಲಿ ರಜತ ಅಪಾರ್ಟಮೆಂಟ್ಸ್‌ನಲ್ಲಿ ಮಗ ಚಂದನನೊಂದಿಗೆ ವಾಸವಾಗಿದ್ದಾರೆ.[29]

**ರಾಜಮ್ಮ ಹೆಗ್ಡೆ :**

ಸಣ್ಣಪ್ಪ ಹಾಗೂ ಲಲಿತಮ್ಮ ದಂಪತಿಗಳಿಗೆ ಹುಟ್ಟಿದ ಮಗುವೇ ಈ ರಾಜಮ್ಮ. ಮೂಲತಃ ಇವರದು ಹಾವೇರಿ, ತಂದೆ-ತಾಯಿ ಕೂಡಾ ಕಲಾವಿದರೇ. ಆದರೆ ಈ ರಾಜಮ್ಮ ಅನಿವಾರ್ಯವಾಗಿ ರಂಗಭೂಮಿಗೆ ಬಂದವರು.

ಬಾಲ್ಯದಲ್ಲಿಯೇ ತಾಯಿಯನ್ನು ಕಳೆದು ಕೊಂಡ ರಾಜಮ್ಮ ಸೋದರತ್ತೆ ಜಾನಕಿಬಾಯಿಯ ಮೂಲಕ ಈ ವೃತ್ತಿಗೆ ಬರಬೇಕಾಯ್ತು. ಸೋದರತ್ತೆ ಜಾನಕಿಬಾಯಿಯೂ ಕೂಡಾ ಒಬ್ಬ ರಂಗಭೂಮಿ ಕಲಾವಿದೆ.

8ನೇ ವರ್ಷದಿಂದಲೇ ಬಣ್ಣದ ಬದುಕು ಪ್ರಾರಂಭವಾಯಿತು. ಶಾರದಾ ಸಂಗೀತ ನಾಟಕ ಮಂಡಳಿ ಗೋಕಾಕ ಕಂಪನಿಯಲ್ಲಿ 'ಗುಳಗಿ ಗುಂಡಮ್ಮ' ನಾಟಕದಲ್ಲಿ ಶಂಕರನ ಪಾತ್ರಕ್ಕೆ (ಬಾಲಪಾತ್ರ) ಬಣ್ಣಹಚ್ಚಿದ್ದು.

ಶಿವಲಿಂಗ ಶಾಸ್ತ್ರಿ ಕಂಪನಿಯಲ್ಲಿ ರೇಣುಕಾ ಮಹಾತ್ಮೆ, ಹರಿಶ್ಚಂದ್ರ, ಗಂಡನ ಆಜ್ಞೆ ಹೀಗೆ ಹಲವಾರು ನಾಟಕಗಳಲ್ಲಿ ನಟಿಸುತ್ತ 4 ವರ್ಷ ದುಡಿದಳು.

---

[29] 20-10-2009 ರಂದು ಸಂದರ್ಶನ ಮಾಡಿದ್ದು ಧಾರವಾಡದಲ್ಲಿ.

ಈ ನಡುವೆ ಅಮೆಚೂರಿನಲ್ಲಿ ನಟಿಸುತ್ತ 1981 ರಿಂದ 1989ರವರೆಗೆ ಸುಮಾರು ಹತ್ತುವರ್ಷ ಗುಡಗೇರಿ ಕಂಪನಿಯಲ್ಲಿ ಕಲಿಯುಗದ ರಾಮ, ಸತ್ಯಸತ್ತಿತ್ತು, ವಿಧಿಯ ಕೈವಾಡ, ಮದುವೆಯಾಗದ ವಿಧವೆ, ರೈತನ ಮಕ್ಕಳು, ಹೆಣ್ಣು ಉರಿಗಣ್ಣು, ಹಲವಾರು ನಾಟಕಗಳಲ್ಲಿ ಹಾಸ್ಯ, ನಾಯಕಿ, ವಿಲನ್ ಆಗಿ ಮಿಂಚಿದಳು.

ಪಾತ್ರಧಾರಿಗಳ ಬದುಕೇ ಅತಂತ್ರ ಇವರಿಗೊಂದು ಶಾಶ್ವತ ನೆಲೆ ಎಂಬುದಿಲ್ಲ. ಮಾಲೀಕರಿಗೂ ಇವರಿಗೂ ಏನಾದರೂ ಮನಸ್ತಾಪ ಉಂಟಾದರೆ ಈ ಕಂಪನಿ ಅಲ್ಲ ಮತ್ತೊಂದು ಕಂಪನಿಗೆ ಹೋಗುವುದು ಅನಿವಾರ್ಯ ಮತ್ತೆ ಲಕ್ಷ್ಮೇಶ್ವರದ ಪುರಾಣಿಕಮಠ ಕಂಪನಿಯಲ್ಲಿ ಹತ್ತು ತಿಂಗಳ ಅನುಭವ 1991 ರಲ್ಲಿ ಅರಿಶಿನಗೋಡಿಯವರ  ಕಂಪನಿಯಲ್ಲಿ ಭೂಮಿ ತೂಕದ ಹೆಣ್ಣು, ಬಸ್‌ಕಂಡಕ್ಟರ್, ಗೌರಿ ಹೋದಳು ಗಂಗೆ ಬಂದಳು ಈ ನಾಟಕದಲ್ಲಿ ನಾಯಕಿಯ ಪಾತ್ರದಲ್ಲಿ ಕಾಣಿಸಿದ ರಾಜಮ್ಮ 1995 ರಲ್ಲಿ "ಗುರು ಕುಮಾರೇಶ್ವರ ನಾಟ್ಯಸಂಘ" ಹಾನಗಲ್ ಇವರ ಕಂಪನಿಯಲ್ಲಿ (ಎಲ್. ಫ಼. ಶೇಖ) 2003 ರಿಂದ 2009 ರವರೆಗೆ ಗುಲಬರ್ಗಾದಲ್ಲಿ ಸತತವಾಗಿ 5 ವರ್ಷದ ವರೆಗೆ ಕಂಪನಿ ನಡೆಸಿದರು. ಆ ಕಂಪನಿಯಲ್ಲಿ ಹೆಚ್ಚು ಜವಾಬ್ದಾರಿಯ ವಿಲನ್ ಪಾತ್ರ 'ಗೋಧಾವರಿ' ಪಾತ್ರ, ಒಳ್ಳೇಯ ಹೆಸರನ್ನು ಖುಷಿಯನ್ನು ತಂದು ಕೊಟ್ಟ ಪಾತ್ರ ಎನ್ನುತ್ತಾರೆ ರಾಜಮ್ಮ. 2007ರಲ್ಲಿ ನಾಟಕ ಅಕಾಡಮಿ ಪ್ರಶಸ್ತಿ ಸಿಕ್ಕಿದೆ.

ಆಗ ಕಲೆಗೆ ಬೆಲೆಯಿತ್ತು ಈಗಿಲ್ಲ. ಮಕ್ಕಳ ಜವಾಬ್ದಾರಿ ಇದ್ದಕಾರಣ ಮತ್ತೆ ನಾಟಕ ಮಾಡಲು ಆಗುತ್ತಿಲ್ಲ ಎಂದು ರಾಜಮ್ಮ ಹೇಳಿದರೆ, ವೈಚಾರಿಕ ಮನೋಭಾವದ ಅವರ ಪತಿ ಶ್ರೀಧರ ಹೆಗ್ಡೆ ಹೇಳಿದ್ದು ಹೀಗೆ, ರಂಗಭೂಮಿ ನಿಂತ ನೀರಾಗಿದೆ. ಹೊಸ ನೀರು ಬರಬೇಕು. ಅನಿವಾರ್ಯವಾಗಿ ಈ ಕ್ಷೇತ್ರಕ್ಕೆ ಬಂದವರೇ ಹೆಚ್ಚು ಜನ. ಆಸಕ್ತಿಯಿಂದ ಅಲ್ಲ. ಈ ವೃತ್ತಿಗೆ ಭದ್ರತೆ ಇಲ್ಲ ಎಂಬ ವಿಷಾದ ಅವರ ಮಾತಿನಲ್ಲಿ ಕಂಡು ಬಂದಿತು.[30]

**ಮಾಲಾ ಕುಂದಾಪೂರ :**

ರಾಜಕುಮಾರರ ಜೊತೆಗೆ ನಟಿಸಿದ ಮೊದಲ ನಟಿ ಎಂಬ ಹೆಗ್ಗಳಿಕೆಗೆ ಪಾತ್ರಳಾದ ಸುಮಿತ್ರಮ್ಮ ಕುಂದಾಪೂರ ಅವರ ಇಬ್ಬರು ಹೆಣ್ಣು ಮಕ್ಕಳಲ್ಲಿ (ಮಾಲಾ, ಪ್ರಮಿಲ್ಲಾ) ಈ ಮಾಲಾ ಒಬ್ಬಳು. ತಾಯಿಯ ಪ್ರೇರಣೆಯೇ ಇವಳು ರಂಗಭೂಮಿಗೆ ಬರಲು ಕಾರಣವಾಯಿತು.ಮಾಲಾ 9ನೇ ಕ್ಲಾಸಿನಲ್ಲಿ ಓದುತ್ತಿರುವಾಗಲೇ ಬಣ್ಣದ ಬದುಕಿಗೆ ಮಾರು ಹೋದಳು ಆದಾಗ್ಯೂ ಬಿ.ಎ.ಎರಡನೇ ವರ್ಷದವರೆಗೆ

---

[30] 12-7-2009 ರಂದು ಬಿಜಾಪೂರದ (ಯೋಗಾಪೂರ) ದಲ್ಲಿ ಸಂದರ್ಶನ ಮಾಡಿದ್ದು.

ಶಿಕ್ಷಣವನ್ನು ಮುಂದುವರೆಸಿದಳು. 'ವಿಜಯ ಮಾಲಾ ನಾಟ್ಯಸಂಘ' ಕಂಪನಿಯಲ್ಲಿಯೇ ಮಾಲಾ ಬಣ್ಣಹಚ್ಚಿದ್ದೊಂದು ವಿಶೇಷ. ನಂತರ ಗುಡಗೇರಿ ಕಂಪನಿಯಿಂದ ಪ್ರಾರಂಭವಾದ ಇವಳ ನಟನೆ ಹುಚ್ಚೇಶ್ವರ ನಾಟ್ಯಸಂಘ ಕಮತಗಿ, ಚಿತ್ತರಗಿ ಕಂಪನಿ, ಕೆ.ಬಿ.ಆರ್ ಡ್ರಾಮಾ ಕಂಪನಿಯಲ್ಲಿ ನಿರಂತರವಾಗಿ ಗೌಡ್ರಗಂಗಿ, ದುಡ್ಡಿನ ದರ್ಪ, ತಾಯಿಕರಳು, ಹೀಗೆ ಹತ್ತು ಹಲವು ನಾಟಕಗಳಲ್ಲಿ ನಟಿಸಿ ಜನರಮೆಚ್ಚುಗೆಯನ್ನು ಗಳಿಸಿದ್ದಾಳೆ. ಕಂಪನಿನಾಟಕಗಳಲ್ಲಿ ನಟಿಸುವುದರ ಜೊತೆಗೆ ಅಮೆಚೂರ (ಗ್ರಾಮೀಣ ನಾಟಕ) ನಲ್ಲಿ ನಟಿಸಿ ಅಭಿನಯ ಚತುರೆ ಎಂಬ ಬಿರುದಿಗೆ ಪಾತ್ರಳಾಗಿದ್ದಾಳೆ. ರೇಶ್ಮಾ ಹಾಗೂ ಸರ್ಪರಾಜ ಇಬ್ಬರು ಮಕ್ಕಳು ಅವರೇನೂ ಈ ವೃತ್ತಿಗೆ ಬಂದಿಲ್ಲ. ಮಗಳು ರೇಶ್ಮಾಳಿಗೆ ಒಳ್ಳೇಯ ಮನೆಯನ್ನು ನೋಡಿ ಮದುವೆಮಾಡಿಕೊಟ್ಟಿದ್ದಾಳೆ. ರಂಗಭೂಮಿ ಕಲಾವಿದರಿಗೆ ಇರಲಿಕ್ಕೆ ಒಂದು ಸೂರು ಮಕ್ಕಳಿಗೆ ಒಂದಿಷ್ಟು ಒಳ್ಳೇಯ ಶಿಕ್ಷಣ ಸಿಗಬೇಕು ಎಂಬುದು ಅವಳ ಆಶಯ. 17–1–09 ರಂದು ಮಾಲಾ ಅವರನ್ನು ಭೇಟಿಯಾದಾಗ ತಮ್ಮ ಮನಸನ್ನು ತೆರೆದಿಟ್ಟದ್ದು ಹೀಗೆ.[31]

## ನಂದಾರಾಣಿ ಕಲ್ಕತ್ತಾ :

ಮದರ್ ಥೆರೆಸಾ, ರವೀಂದ್ರನಾಥ ಟ್ಯಾಗೋರರಂಥ ಹಲವಾರು ಮಹನೀಯರಿಗೆ ಆಶ್ರಯ ನೀಡಿದ ಜನನಿಬಿಡವಾದ ಕಲ್ಕತ್ತೆಯಂಥ ದೊಡ್ಡ ನಗರದಲ್ಲಿ 18–5–1942ರಲ್ಲಿ ಪ್ರೊ. ನನ್ನಿ ಗೋಪಾಲ ಹಾಗೂ ವಿಕ್ಟೋರಿಯಾ ಘೋಷ ದಂಪತಿಗಳ 5 ಜನ ಮಕ್ಕಳಲ್ಲಿ ಈ ನಂದಾರಾಣಿಯೂ ಒಬ್ಬಳು. (ರಾಜೇಶ್ವರಿ ರಾಜಕುಮಾರಾ, ರಾಜದುಲ್ಹಾರಿ, ರಾಜನಂದಿನಿ, ನಂದಾರಾಣಿ).

ನಂದಾರಾಣಿಯ ತಂದೆ ವೃತ್ತಿಯಿಂದ ವೈದ್ಯರಾಗಿದ್ದರು. ಜೊತೆಗೆ ಜಾದೂ ತಂಡವನ್ನು ಕಟ್ಟಿಕೊಂಡು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಸಂಚರಿಸುವಾಗ ಮೂರನೇಯ ತರಗತಿಯಲ್ಲಿದ್ದ ಈ ಪುಟ್ಟಪೋರಿ ಆ ತಂಡದಲ್ಲಿ ಅಕ್ಕಂದಿರ ಜೊತೆಗೂಡಿ ನೃತ್ಯಪ್ರದರ್ಶನವನ್ನು ನೀಡುತ್ತಿದ್ದಳು. 1953ರಲ್ಲಿ ಬೆಂಗಳೂರಿನ ರೀಗಲ್ ಮತ್ತು ನ್ಯೂ ಎಂಪಾಯರ್ ಥಿಯೇಟರ್‌ನಲ್ಲಿ ನೃತ್ಯವನ್ನು ಮಾಡಿ ಜನಮಚ್ಚುಗೆಯನ್ನು ಗಳಿಸಿದಳು. ಹೀಗೆ ಜಾದೂ ತಂಡವನ್ನು ಕಟ್ಟಿಕೊಂಡಂತ ನನ್ನಿ ಗೋಪಾಲ ಅವರು ದೇಶದ ಮೂಲೆಮೂಲೆಯಲ್ಲಿ ತಮ್ಮ ವಿದ್ಯೆಯನ್ನು ಪ್ರದರ್ಶಿಸುತ್ತ ಕರ್ನಾಟಕದ ಹುಬ್ಬಳ್ಳಿಗೆ ಬಂದರು. ತಂದೆ ಯಾವದೋ ರೋಗಕ್ಕೆ ತುತ್ತಾಗಿ ಮರಣಹೊಂದಿದಾಗ ಈ ಕುಟುಂಬಕ್ಕೆ ಆಕಾಶವೇ ಕಳಚಿ ಮೈಮೇಲೆ ಬಿದ್ದಂತಾಯಿತು. ತುತ್ತಿನ ಚೀಲಕ್ಕಾಗಿ ಬದುಕಿನ ಬಂಡಿ ಎಳೆಯಲೇಬೇಕು. ತಾಯಿ ವಿಕ್ಟೋರಿಯಾ ಘೋಷ ತನ್ನ 5 ಮಕ್ಕಳನ್ನು ಕಟ್ಟಿಕೊಂಡು ಶಾಲಾ ಪ್ರೋಗ್ರಾಮ್ ಮಾಡತೊಡಗಿದಳು.

---

[31] 17–1–2009 ರಂದು ಹುಬ್ಬಳ್ಳಿಯಲ್ಲಿ ಸಂದರ್ಶನ

ಬದುಕು ದುಸ್ತರವಾದಾಗ ಜೀವನೋಪಾಯಕ್ಕಾಗಿ ಬೀದಿಯಲ್ಲಿ ತನ್ನ ಅಕ್ಕಂದಿರ ಜೊತೆಗೆ ನೃತ್ಯವನ್ನು ಮಾಡುತ್ತ ಜನರ ಪ್ರೀತಿಗೆ ಪಾತ್ರವಾದಳು ನಂದಾರಾಣಿ. ದೇಶ, ಭಾಷೆ ಗೊತ್ತಿಲ್ಲದ ನಾಡಿನಲ್ಲಿ ಬದುಕುವುದು ಅಷ್ಟು ಸುಲಭದ ಕೆಲಸವಲ್ಲ. ಇವರ ಭಾಷೆ ಬಂಗಾಳಿ ಆದರೆ ಕಲೆಗೆ ದೇಶ, ಭಾಷೆಯ ಗೊಡವೆ ಇಲ್ಲ. ಎಲ್ಲವನ್ನು ಮೆಟ್ಟಿನಿಲ್ಲುವ ಶಕ್ತಿ ಆ ಕಲೆಗಿದೆ. ಹೀಗಾಗಿ ಈ ಕುಟುಂಬಕ್ಕೆ ದೇಶ, ಭಾಷೆ ಅಡ್ಡಿಯಾಗಲೇ ಇಲ್ಲ. ಪ್ರತಿಭೆಗೆ ಬೆಲೆ ಇದೆ ಎನ್ನುವುದಕ್ಕೆ ನಂದಾರಾಣಿನೇ ಒಂದು ಒಳ್ಳೆಯ ಉದಾಹರಣೆ. ಬೀದಿಯಲ್ಲಿ ಇವಳು ಮಾಡುತ್ತಿದ್ದ ನೃತ್ಯವನ್ನು ನೋಡಿ ಮೈಸೂರಿನಲ್ಲಿ ನ್ಯಾಮತಿ ಶಾಂತಪ್ಪನವರು ತಮ್ಮ ಕಂಪನಿಯಲ್ಲಿ ನೃತ್ಯಮಾಡಲು ಅಹ್ವಾನಿಸಿದರು. ಹೀಗೆ ತನ್ನ ಯೋಗ್ಯತೆಯ ಮೇಲೆ ರಂಗಭೂಮಿಯ ಪ್ರವೇಶ ಮಾಡಿದ ಈ ಬಂಗಾಳಿ ಬೆಡಗಿ ನಾಡಿನ ಅನೇಕ ಹೆಸರಾಂತ ಕಂಪನಿಗಳಲ್ಲಿ ಪಾತ್ರಮಾಡಿ ಸೈ ಎನಿಸಿಕೊಂಡಳು. ಇವಳ ಕನ್ನಡ ಭಾಷೆಯನ್ನು ತಿದ್ದಿ ತೀಡಿದವರು ಎಲಿವಾಳ ಸಿದ್ದಯ್ಯನವರು.

ಸಂಗೀತ, ನೃತ್ಯ, ನಟನೆ ಇವಳಿಗೆ ದೈವದತ್ತವಾಗಿ ಒಲಿದು ಬಂದಿತ್ತು. ಶ್ರೀ ಅಮರೇಶ್ವರ ನಾಟ್ಯಸಂಘ ಬೆಳವಣಕಿ, ವೀರಭದ್ರೇಶ್ವರ ನಾಟ್ಯ ಸಂಘ ಕೊಡ್ಲಿ, ವೀರೇಶ್ವರ ನಾಟ್ಯಸಂಘ ಪಡೆಸೂರು, ವಿರೇಶ್ವರ ನಾಟ್ಯ ಸಂಘ ಗದಗ, ಮಲ್ಲಿಕಾರ್ಜುನ ನಾಟ್ಯ ಸಂಘ ಸುಳ್ಯ, ಹೀಗೆ ಹತ್ತು ಹಲವು ಕಂಪನಿಗಳಲ್ಲಿ ನಟಿಸುತ್ತ ಉತ್ತರ ಕರ್ನಾಟಕದಾದ್ಯಂತ ತನ್ನ ನಟನೆ ಹಾಗೂ ನೃತ್ಯದ ರಸದೌತಣವನ್ನು ಉಣಬಡಿಸಿದವಳು ನಂದಾರಾಣಿ. ಇದಲ್ಲದೆ ಕೆಲವೊಂದು ನಾಟಕದಲ್ಲಿನ ಆ ಪಾತ್ರಕ್ಕೆ ಇವಳೇ ಬೇಕು. ಕೊರವಂಜಿ ನಾಟಕದಲ್ಲಿ (ಕೊರವಂಜಿ ಪಾತ್ರ) ಹಡೆದವ್ವ ನಾಟಕದಲ್ಲಿ ಲಂಬಾಣಿ (ಲಾಲಿಪಾತ್ರ) ಅಷ್ಟೇ ಅಲ್ಲ ರಾಮಪೂರ ಹಾಗೂ ಹರಪನಳ್ಳಿಯವರು ಇವರ ದೀಪದ ನೃತ್ಯವನ್ನು ನೊಡಲು ತುದಿಗಾಲಮೇಲೆ ನಿಂತಿರುತ್ತಾರಂತೆ.

1985 ರಲ್ಲಿ "ಗುರು ಪಂಚಾಕ್ಷರಿ ವಿಜಯ ನಾಟ್ಯ ಸಂಘ ಹುಬ್ಬಳ್ಳಿ" ಈ ಕಂಪನಿಯನ್ನು ಹತ್ತು ವರ್ಷದ ವರೆಗೆ ನಡೆಸಿಕೊಂಡು ಬಂದಿದ್ದಾಳೆ. ಈಗಲೂ ಅದನ್ನು ಕಾಂಟ್ರ್ಯಾಕ್ಟಕೊಡುವುದಾಗಿ ಹೇಳಿದರು.

ಕಂಪನಿ ಕಟ್ಟಿದ ಮೇಲೆ ಸಾಕಷ್ಟು ಏಳು ಬೀಳುಗಳನ್ನು ಅನುಭವಿಸಿದ್ದಾಳೆ. ಎಂ. ಕೆ. ಹುಬ್ಬಳ್ಳಿಯಲ್ಲಿ ಜನರೇಟರ್ ಬಂದ ಆದಾಗ, ಇನ್ನೊಂದು ಸಲ ಒಂದು ನಾಟಕಕ್ಕೆ ಸುಧೀರ ಅವರನ್ನು ಬುಕ್ ಮಾಡಿದ್ದು ಅವರು ಬರದೇ ಇದ್ದಾಗ, ಗೋಕಾಕ ಫಾಲ್ಸ್‌ನಲ್ಲಿ ಬಸ್‌ಹಮಾಲ ನಾಟಕಕ್ಕೆ ಉಮಾಶ್ರೀ ಕೈಕೊಟ್ಟಾಗ ಪ್ರೇಕ್ಷಕರೆಲ್ಲ ರೊಚ್ಚಿಗೆದ್ದದ್ದು, ಹೀಗೆ ಒಂದೇ ಎರಡೇ ಸಮಸ್ಯೆಗಳು ದುತ್ತೆಂದು ಎದುರಾದಾಗ ಧೈರ್ಯಗುಂದದೆ ಕಂಪನಿಯನ್ನು ಉಳಿಸಿಕೊಂಡು ಬಂದ ದಿಟ್ಟೆ ಈ ನಂದಾರಾಣಿ.

ಪಾತ್ರ ಖುಷಿಕೊಟ್ಟಿದೆ ಆದರೆ ಬದುಕು ನನಗೆ ಖುಷಿಕೊಟ್ಟಿಲ್ಲ ಎನ್ನುತ್ತಾರೆ. ಮುಖಕ್ಕೆ ಬಣ್ಣ ಹಚ್ಚಿದ ಇವಳ ಬದುಕನ್ನು ಬಿಚ್ಚಿಡಲಿಕ್ಕೂ ಆಗ್ತಾ ಇಲ್ಲ. ಮುಚ್ಚಿಡಲಿಕ್ಕೂ ಆಗ್ತಾ ಇಲ್ಲ. ಇವರ ಪತಿ ಕಮಲ್‌ರಾಜ

ತಬಲಾ, ಡೋಲಕ್, ಕಾಂಗೋ ವಾದಕರಾಗಿದ್ದರು. ಸಪ್ತಸ್ವರಗಿಂತ ಅಪಸ್ವರ ಹೆಚ್ಚಾದಾಗ ಖಾಸಗಿ ಬದುಕು ಬೇಸರವಾಗಿರಬಹುದು.

ನಿಷ್ಕಪಟ, ನಿರ್ಮಲ ಮನಸ್ಸಿನ ನಂದಾರಾಣಿ ಕಲ್ಕತ್ತಾ ಅವರನ್ನು ದಿನಾಂಕ : 8-7-09 ರಂದು ಬೆಂಗಳೂರಿನ 8ನೇ ಮೈಲಿಗಲ್ಲು ಈ ಏರಿಯಾದಲ್ಲಿ ವಾಸವಾಗಿರುವ ಅವರನ್ನು ಭೇಟಿಯಾದಾಗ ಇನ್ನೂ ಆ ಲವಲವಿಕೆ, ಉತ್ಸಾಹ ಕುಗ್ಗಿಲ್ಲ. 60ರ ಅಂಚಿನಲ್ಲಿರುವ ನಂದಾ ಈಗಲೂ ದೀಪದ ನೃತ್ಯ ಮಾಡುತ್ತಾರಂತೆ.

ಕಲ್ಕತ್ತೆಯಲ್ಲಿ ಇವಳು ಜನ್ಮ ಪಡೆದಿದ್ದರೂ ಬೆಳೆದದ್ದು ಮಾತ್ರ ನಮ್ಮ ಮನೆಯ ಮಗಳಾಗಿ. ತನ್ನ ನಾಡು ನುಡಿಯನ್ನು ಮರೆತು ನಮ್ಮ ನಾಡು ನುಡಿಯನ್ನು ಉಳಿಸಿ ಬೆಳೆಸಿದ ಹೆಮ್ಮೆಯ ನಟ ನಂದಾರಾಣಿ.[32]

## ಹೆಲನ್ ಮೈಸೂರು :

ಗುಬ್ಬಿ ಕಂಪನಿಯಿಂದ ತನ್ನ ವೃತ್ತಿ ಬದುಕನ್ನು ಪ್ರಾರಂಭಮಾಡಿದ ಖ್ಯಾತ ನಟಿ ಥೆರೆಸಮ್ಮ ಡಿಸೋಜರ ಪುತ್ರಿ ಈ ಹೆಲನ್ ಮೈಸೂರು. 1964ರಲ್ಲಿ ಹುಟ್ಟಿದ ಹೆಲನ್ ಇವಳ ತಾಯಿಗೇನೋ ಬಣ್ಣದ ಬದುಕು ಅನಿವಾರ್ಯವಾಗಿತ್ತು. ಹಾಗಾಗಿ ಅವಳು ಈ ವೃತ್ತಿಯನ್ನು ಆಯ್ಕೆಮಾಡಿಕೊಂಡಳು. ಆದರೆ ಈ ಹುಡುಗಿಗೆ ಮಾತ್ರ ಇದು ಬೇಡವಾದ ಕ್ಷೇತ್ರವಾಗಿತ್ತು. ಚೆನ್ನಾಗಿ ಓದಿ ಯಾವದಾದರೊಂದು ಸರಕಾರಿ ಕೆಲಸವನ್ನು ಮಾಡಬೇಕೆಂಬ ಮಹದಾಸೆ ಅವಳದಾಗಿತ್ತು. ವಿಧಿಲಿಖಿತ ಅದನ್ನು ಯಾರಿಂದ ತಪ್ಪಿಸಲು ಸಾಧ್ಯ? ಹೀಗಾಗಿ ಒಲ್ಲದ ಮನಸ್ಸಿನಿಂದ ಅನಿವಾರ್ಯವಾಗಿ ಹೆಲನ್ ಈ ಫೀಲ್ಡ್‌ಗೆ ಬರಬೇಕಾಯ್ತು.

ಸುಳ್ಯದ ದೇಸಾಯಿಯವರ ಕಂಪನಿಯಲ್ಲಿ ಜಿ. ವಿ. ಶಾರದಾ, ಥೇರೆಸಮ್ಮ, ಕಲ್ಪನ, ಒಟ್ಟಾಗಿ ಪಾತ್ರ ಮಾಡುತ್ತಿದ್ದರು. ಈ ಪುಟ್ಟಪೋರಿ ಅವರ ಹಿಂದ್ಹಿಂದೆ ಓಡಾಡಿಕೊಂಡು ಇರುತ್ತಿದ್ದಳು. ಮೆಲ್ಲನೆ ತಾನೂ ಅವರಂತೆ ಕುಣಿದು ಕುಪ್ಪಳಿಸಬೇಕೆಂಬ ಸಹಜ ಆಶೆ ಮೊಳಕೆಒಡೆಯಿತು. 'ಮಹಿಳಾ ಟ್ರೂಪ್' ನಲ್ಲಿ ಇವಳು ಡ್ಯಾನ್ಸರ್ ಆಗಿ ಸೇರ್ಪಡೆಯಾದಳು. ಅಲ್ಲಿಂದ ಇವಳ ಭಾಗ್ಯದ ಬಾಗಿಲು ತೆರೆಯಿತು. "ಮನೆಮಗಳು." ನಾಟಕದಲ್ಲಿ ಇವಳಿಗಾಗಿನೇ ಒಂದು ಡ್ಯಾನ್ಸ ಸೀನ್ ಸೃಷ್ಟಿಸಿದ್ದರು. ಇಷ್ಟವಿಲ್ಲದ ಕ್ಷೇತ್ರದಲ್ಲಿ ದಿನದಿಂದ ದಿನಕ್ಕೆ ಮಿಂಚತೊಡಗಿದಳು. ಅದಲ್ಲದೆ ಇವಳ ಮನದಾಸೆಯನ್ನು ಅರಿತುಕೊಂಡ ಚಿತ್ರನಟಿ ಕಲ್ಪನಾ ಈ ಪೋರಿಯ ಕನಸುಗಳಿಗೆ ನೀರೆರೆದರು. ಉತ್ತರ ಕರ್ನಾಟಕದಲ್ಲಿ ಹೆಲನ್ ಮೈಸೂರು ಎಂಬಹೆಸರು ಏನಾದರೂ ಬೆಳಕಿಗೆ ಬಂದಿದ್ದರೆ ಅದೂ ಮಿನುಗುತಾರೆ ಕಲ್ಪನಾ ಅವರಿಂದ. ಎಂದು ಹೆಮ್ಮೆಯಿಂದ ಹೇಳುತ್ತಾರೆ ಕಲಾವಿದೆ ಹೆಲನ್.

---

[32] 8-7-2009 ರಂದು ಬೆಂಗಳೂರಿನಲ್ಲಿ ಸಂದರ್ಶನ ಮಾಡಿದ್ದು

ಎಲೆಮರೆಯ ಕಾಯಿಯಂತೆ ಇವಳು ಶ್ರೇಯಸ್ಸಿನ ಮೆಟ್ಟಿಲನ್ನು ಏರಬೇಕಾದರೆ ಇನ್ನೊಂದು ಕಾಣದ ಕೈ ಇವಳ ಹಿಂದಿದೆ. ಅವರೇ ಸಯ್ಯದ ಮಾಸ್ತರ. ಇವರೊಬ್ಬ ಉತ್ತರ ಕರ್ನಾಟಕದ ಬ್ರಹ್ಮ ಎಂದು ಸ್ಮರಿಸಿಕೊಳ್ಳುತ್ತಾಳೆ ಹೆಲನ್. ಸಂಗೀತದ ಒಂದೊಂದು ಸ್ವರಗಳನ್ನು ಹೇಳಿ ತಿದ್ದಿತೀಡಿದವರನ್ನು ಹೇಗೆ ಮರೆಯಲು ಸಾಧ್ಯ? ಉತ್ತರ ಕರ್ನಾಟಕದಲ್ಲಿ ರಿಕಾರ್ಡ ಡ್ಯಾನ್ಸ ಶುರು ಆದದ್ದೆ ಹೆಲನ್ ಅವರಿಂದ ಆಮೇಲೆ ಇವಳು ಹಾಸ್ಯಪಾತ್ರದಲ್ಲಿ ಮಿಂಚತೊಡಗಿದಳು. ಕೆ.ಬಿ.ಆರ್., ಗುಡಗೇರಿ, ಕಮತಗಿ, ಹೀಗೆ ಹಲವಾರು ಕಂಪನಿಗಳಲ್ಲಿ ಹಾಸ್ಯ ಪಾತ್ರಗಳನ್ನು ಮಾಡಿ ಸೈ ಎನಿಸಿಕೊಂಡಿದ್ದುಂಟು. ಕಿವುಡ ಮಾಡಿದ ಕಿತಾಪತಿಯಲ್ಲಿ 'ತಾಯವ್ವನ' ಪಾತ್ರ 'ಖಾನಾವಳಿ ಚನ್ನಿ' ಈ ನಾಟಕದಲ್ಲಿನ ಚನ್ನಿಯ ಪಾತ್ರವನ್ನು ಇವಳೇ ಮಾಡಬೇಕು. ಇವಳ ಸಲುವಾಗಿನೇ ಒಮ್ಮೊಮ್ಮೆ ಮೂರು ಮೂರು ಶೋಗಳು ನಡೆದಿವೆ. ಹಾಸ್ಯಕ್ಕೆ ಹೇಳುಮಾಡಿಸಿದ ಕಲಾವಿದೆ ಈ ಹೆಲನ್.

ಪ್ರವಾಹದ ವಿರುದ್ಧ ಈಸುತ್ತ ರಂಗಭೂಮಿಯಲ್ಲಿ ಒಂದು ನೆಲೆಯನ್ನು ಕಂಡುಕೊಂಡಿದ್ದಾರೆ. ಒಂದೊಂದು ಸಲ ಹೆಸರೂ ಕೂಡ ಶತ್ರು ಆಗುತ್ತದೆ. ಮುಂದೆ ಹೋಗುವವರನ್ನು ಕಾಲಿಡಿದು ಹಿಂದಕ್ಕೆ ಜಗ್ಗುವುದಕ್ಕೂ ಹೇಸದ ಹೀನ ಜನ ನಮ್ಮ ನಿಮ್ಮ ನಡುವೆ ಇದ್ದಾರೆ. ಮೇಕಪ್‌ನಲ್ಲಿ ಏನೋ ಬೆರೆಸಿ ಮುಖವೆಲ್ಲ ಕಪ್ಪಾಗುವಂತೆ ಮಾಡಿದ ಜೀವಂತ ಉದಾಹರಣೆ ಇನ್ನೂ ಹಸಿಯಾಗಿದೆ. ಯಾಕೆಂದರೆ ಅವರ ಮುಖ ನೋಡಿದರೆ ಗೊತ್ತಾಗುತ್ತದೆ. ಆದರೂ ಇದನ್ನೆಲ್ಲವನ್ನು ಎದುರಿಸಿಯೂ ಕೂಡಾ ಇವತ್ತು ಒಬ್ಬ ಬಹುಬೇಡಿಕೆಯ ನಟಿಯಾಗಿದ್ದಾಳೆ. ಎರಡು ಮಕ್ಕಳ ತಾಯಿಯಾಗಿದ್ದರೂ ಇನ್ನೂ ಗ್ಲಾಮರ್ ಮಾಸಿಲ್ಲ.

ಸುಮಾರು 500 ಆಡಿಯೋ ವಿಡಿಯೋ ಕ್ಯಾಸೆಟ್‌ಗಳಾಗಿವೆ. ಉತ್ತರ ಕರ್ನಾಟಕದ ಜನ ಇವರ ಅಭಿನಯ, ನೃತ್ಯಕ್ಕೆ ಮನಸೋತಿದ್ದಾರೆ. ಒಂದು ಕಾಲಕ್ಕೆ ಮಾಲಿಕರಿಂದ ಕಲಾವಿದರಿಗೆ ಕಿರಿಕಿರಿಯಾಗುತ್ತಿತ್ತು. ಆದರೆ ಇವತ್ತು ಕಲಾವಿದರಿಂದ ಮಾಲೀಕರಿಗೆ ಕಿರಿಕಿರಿಯಾಗುತ್ತಿದೆ. ಹೀಗಾಗಿ ಎಷ್ಟೋ ಕಂಪನಿಗಳು ಇವತ್ತು ಕ್ಲೋಜ್ ಆಗುವ ಹಂತಕ್ಕೆ ಬಂದಿವೆ ಎಂಬ ವಿಷಾದ ಇವರ ಧ್ವನಿಯಲ್ಲಿತ್ತು.[33]

## ಸರೋಜಮ್ಮ ಚಿತ್ತರಗಿ :

ಬಾಗಲಕೋಟೆ ಜಿಲ್ಲೆಯ ಇಲಕಲ್ ಗ್ರಾಮದ ಇನ್ನೊಂದು ರಂಗಕುಸುಮ ಸರೋಜಮ್ಮ ಚಿತ್ತರಗಿ. ಇವಳ ಮೊದಲಿನ ಹೆಸರು ಚಂದ್ರಕಲಾ. ಎಲ್ಲರ ಬದುಕಿನ ಕಥೆ ಒಂದಾದರೆ ಇವಳದೇ ಬೇರೆ. ಯಾರ್‍ಯಾರೋ ಯಾವದೋ ಕಾರಣಕ್ಕೆ ಮನೆಬಿಟ್ಟು ಓಡಿ ಹೋದರೆ, ಇವಳು ಕಲೆಯನ್ನು ಹುಡುಕಿಕೊಂಡು ರಂಗನಟಿಯಾಗುವ ಆಸೆಯಿಂದ ಮನೆಬಿಟ್ಟು ಹೋದವಳು. ಇವರದೇನೂ ಕಲಾವಿದರ ಮನೆತನವಲ್ಲ.

[33] 10-7-2010 ರಂದು ಸಂದರ್ಶನ ಮಾಡಿದ್ದು (ಬಾಲಾಜಿನಗರ ಹುಬ್ಬಳ್ಳಿಯಲ್ಲಿ)

15 ವರ್ಷದವಳಿದ್ದಾಗ ಮನೆಯಲ್ಲಿನ ಹತ್ತು ತೊಲಿ ಬಂಗಾರ ಹತ್ತು ಸಾವಿರ ರೂಪಾಯಿ ತೆಗೆದುಕೊಂಡು ಗೆಳತಿಯರ ಜೊತೆಗೂಡಿ ದಾವಣಗೇರಿಗೆ ಹೋದಳು. ಅಲ್ಲಿ ಚಿತ್ತರಗಿ ಕಂಪನಿಯನ್ನು ಸೇರಿದಳು. ಆಗಿನ ಕಾಲಕ್ಕೆ ಹತ್ತು ತೋಲಿ ಬಂಗಾರ ಹತ್ತು ಸಾವಿರ ರೂಪಾಯಿ ಅದೇನೂ ಸಣ್ಣ ಮೊತ್ತವಲ್ಲ. ಒಂದೆಡೆ ದುಡ್ಡು ಬಂಗಾರ ಕಳೆದುಕೊಂಡ ಸಂಕಟ, ಇನ್ನೊಂದೆಡೆ ಮನೆತನದ ಮರ್ಯಾದೆಯನ್ನು ಬೀದಿಪಾಲು ಮಾಡಿದಳಲ್ಲ ಎಂಬ ಸಿಟ್ಟು, ನಮಗೊಬ್ಬ ಮಗಳಿದ್ದಳು ಎಂಬುದನ್ನೇ ಮರೆತರು. ರಂಗಭೂಮಿಗಾಗಿ ಮನೆಯವರನ್ನು ಅಪಾರ ಬಂಧುಬಳಗವನ್ನು ಎಲ್ಲ ಸಂಬಂಧಗಳ ಕೊಂಡಿಯನ್ನು ಕಳಚಿಕೊಂಡ ನತದೃಷ್ಟ ಹೆಣ್ಣು ಈ ಸರೋಜಮ್ಮ. ಹಿಂದಿನದನ್ನು ಮರೆತು ಈಗಲಾದರೂ ಅವರ ಮನೆಯವರು ಇವಳನ್ನು ಸ್ವೀಕರಿಸಬಹುದಿತ್ತು. ಒಂದೇ ಊರಿನಲ್ಲಿದ್ದರೂ ಅವರ್ಯಾರೋ? ತಾವ್ಯಾರೋ? ಇದ್ದೊಬ್ಬ ಮಗನ ಕೂಡ ಬದುಕನ್ನು ಸಾಗಿಸಿರುವ ಸರೋಜಮ್ಮ ಈ ಸ್ಥಿತಿಗೆ ಬರಲು ರಂಗಭೂಮಿನೆ. ಕಲೆಯ ಬೆನ್ನು ಹತ್ತಿದ್ದೇ ತಪ್ಪಾಯಿತೇನೋ? ಮನೆಬಿಟ್ಟು ಹೋದಮೇಲೆ ಅವಳ ಮನದಾಸೆಯೇನೋ ನೆರವೇರಿತು. ಆದರೆ ನೆಮ್ಮದಿ ಮಾತ್ರ ಸಿಗಲಿಲ್ಲ.

ಮನೆಯಿಂದ ಹೋದಮೇಲೆ ಚಿತ್ತರಗಿ ಕಂಪನಿಯಲ್ಲಿ 25 ವರ್ಷ ನಟನೆಯ ಅನುಭವ ಹೊಂದಿದ ಸರೋಜಮ್ಮ ಅರಿಶಿನಗೂಡಿಯವರ ಕಂಪನಿಯಲ್ಲಿ 35 ವರ್ಷ ಬಣ್ಣಹಚ್ಚಿದ ಅನುಭವ, ಬದುಕು ಬಂಗಾರವಾಯ್ತು, ಹೂವಿನ ಅಂಗಡಿ, ಭಾಗ್ಯಬಂತು ಬುದ್ಧಿಹೋಯ್ತು ಹೀಗೆ ಹಲವಾರು ನಾಟಕಗಳು ಇವಳಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟವು. ಖಳನಾಯಕಿಯ ಪಾತ್ರಗಳನ್ನು ಇವಳು ಮಾಡುತ್ತಿದ್ದಳು. ಶಿವಕುಮಾರ ಕಂದಿಗನೂರು ಅವರನ್ನು ಬಾಳಸಂಗಾತಿಯನ್ನಾಗಿ ಪಡೆದ ಸರೋಜಮ್ಮಳಿಗೆ ಆಕಾಶ ಮೂರೇ ಗೇಣು ಇತ್ತು. ಆದರೆ ಇತ್ತಿತ್ತಲಾಗಿ ಸರೋಜಮ್ಮಳಿಗೆ ಮಾನಸಿಕ ವೇದನೆ ಕಾಡುತ್ತಲಿದೆ. ಸರ್ವಿಸ್ ಕಂಪನಿ ಬಿಟ್ಟು ಬಂದಮೇಲೆ ಕೆಲವು ವರ್ಷ ಅಮೆಚೂರ ಅನುಭವ. ಇತ್ತಿತ್ತಾಗಿ ಲೇಡಿಜ್ ಟ್ರೂಪ್ಸನಲ್ಲಿ ನಟನೆ, ಎರಡು ಸಲ ಹೃದಯಾಘಾತಕ್ಕೆ ಒಳಗಾದರೂ ಇನ್ನೂ ಬಣ್ಣ ಹಚ್ಚುವದನ್ನು ಬಿಟ್ಟಿಲ್ಲ. "ನಾ ಬಣ್ಣದ ಮಗಳು' ಎಂದು ಬಹಾsಳ ಅಭಿಮಾನದಿಂದ ಹೇಳಿಕೊಳ್ಳುತ್ತಾಳೆ. ನಟನೆಯ ಹುಚ್ಚು, ಹುಮ್ಮಸ್ಸು ಕುಂದಿಲ್ಲ. "ಖಾಲಿ ಕುಂತ್ರ ತಲೀನ ಕೆಟ್ಟಂಗ ಆಗತೈತಿ" ಎನ್ನುವ ಸರೋಜಮ್ಮ ಬಣ್ಣದ ಸಲುವಾಗಿ ಮನೆಬಿಟ್ಟು ಹೋದವಳು ಹಡೆದ ಆರೆ ದಿನಕ್ಕೆ ಬಣ್ಣಹಚ್ಚಿದವಳು. ಇವಳಿಂದ ರಂಗಭೂಮಿಗೆ ಕಂಪನಿ ಮಾಲೀಕರಿಗೆ ಒಳ್ಳೆಯ ಹೆಸರು. ರೊಕ್ಕ ಬಂತೇನೋ? ಆದರೆ ಇವಳಿಗೆ ಸಿಕ್ಕಿದ್ದೇನು? ಇವಳ ಜೀವನ ಮಾತ್ರ ವರ್ಣರಂಜಿತವಾಗಲಿಲ್ಲ.[34]

---

[34] 15–5–2009 ರಂದು ಇಲಕಲ್ಲಿನಲ್ಲಿ ಸಂದರ್ಶನ ಮಾಡಿದ್ದು.

**ಎಚ್. ಬಿ. ಸರೋಜಮ್ಮ (ಹುಬ್ಬಳ್ಳಿ) :**

ಹಗರಿ ಬೊಮ್ಮನಹಳ್ಳಿ ಸರೋಜಮ್ಮ ಎಂದೇ ಪ್ರಸಿದ್ಧಿ ಪಡೆದಿರುವ ಇವರು ಹುಟ್ಟಿದ್ದು ನಂಜನಗೂಡಿನಲ್ಲಿ. ತಂದೆ ಸರಾಫಿ ವೃತ್ತಿಯನ್ನು ಮಾಡುತ್ತಿದ್ದರು. ಇವರದೇನು ಕಲಾವಿದರ ಕುಟುಂಬ ಅಲ್ಲ. 5ನೇ ಇಯತ್ತೆ ಶಿಕ್ಷಣ.

ಈ ಬಣ್ಣದ ಬದುಕಿಗೆ ಹೀಗೆಯೇ ಅನೀರಿಕ್ಷಿತವಾಗಿ ಬರುವ ಒಂದು ಪ್ರಸಂಗ ನಡೆಯಿತು. ಮಂಡ್ಯದಲ್ಲಿ ಇವರ ಪಕ್ಕದ ಮನೆಯಲ್ಲಿ ಜಿ.ಪಿ.ಶಾಸ್ತ್ರೀ ಅವರ ಕುಟುಂಬ ವಾಸವಾಗಿತ್ತು. ಅಂದರೆ ಚಿತ್ರತಾರೆ ಶೃತಿಯವರ ತಾಯಿ ರಾಧಾ ರುಕ್ಮಿಣಿಯರು ಅವರಿಗೆ ಕಲೆ ರಕ್ತಗತವಾಗಿ ಬಂದಿತ್ತು. ಜಿ.ವಿ.ಶಾಸ್ತ್ರಿಯವರು ಇಹಲೋಕದ ಯಾತ್ರೆ ಮುಗಿಸಿದ ಮೇಲೆ ಅವರು ಗುಬ್ಬಿ ಕಂಪನಿಯನ್ನು ಆಶ್ರಯಿಸಬೇಕಾಯಿತು.

ಆವಾಗಾವಾಗ ರಾಧಾ ರುಕ್ಮಿಣಿಯರು ಕಾರಿನಲ್ಲಿ ಠೀವಿಯಿಂದ ಅಡ್ಡಾಡುವದನ್ನು ನೋಡಿದ ಸರೋಜಮ್ಮ ಅವರ ಬಾಹ್ಯ ಬದುಕಿಗೆ ಆಕರ್ಷಿತರಾಗಿ ನಾಟಕದಲ್ಲಿ ಪಾತ್ರಮಾಡಿದರೆ ತಾನೂ ಹೀಗಿಯೇ ಕಾರಿನಲ್ಲಿ ಓಡಾಡಬಹುದಲ್ಲ; ಎಂಬ ಆಶೆ ಮೊಳಕೆಯೊಡೆಯಿತು. ಮೇರಿಯೆಂಬ ಅನುಭವಸ್ಥ ಹೆಣ್ಣು ಮಗಳು ಈ ವೃತ್ತಿಗೆ ಬರಬೇಡಿ ಎಂದು ಹೇಳಿದರೂ ಕೇಳದೆ ತನ್ನ ಕನಸನ್ನು ಸಾಕ್ಷಾತ್ಕಾರಗೊಳಿಸಲು ಬಣ್ಣದ ಬದುಕಿಗೆ ಧುಮುಕಿಯೇ ಬಿಟ್ಟಳು. ಪರದೆಯ ಮುಂದಿನ ಬದುಕನ್ನು ನೋಡಿದ ನಮಗೆ ಪರದೆಯ ಹಿಂದುಗಡೆ ಏನಿರುತ್ತೆ ಎಂಬುದು ಗೊತ್ತಿರುವದಿಲ್ಲ. ಬದುಕನ್ನು ಒಂದೇ ಮಗ್ಗುಲಿನಿಂದ ನೋಡಿದವರಿಗೆ ಅವರ ಬಾಳಿನಲ್ಲಿ ಸಿಹಿಗಿಂತ ಕಹಿಯನ್ನು ಹೆಚ್ಚು ಅನುಭವಿಸಬೇಕಾಗುತ್ತದೆಯೋ ಏನೋ?

ಬಣ್ಣದ ಬದುಕಿಗೆ ಸೋತ ಸರೋಜಮ್ಮ ಕೊನೆಗೆ ಹಟದಿಂದ ಮನೆಯಲ್ಲಿ ಹೇಳದೆ "ಶ್ರೀ ಕಂಠೇಶ್ವರ ನಾಟ್ಯ ಸಂಘದಲ್ಲಿ, ಮೊದಲ ನಟನೆ ಪ್ರಾರಂಭವಾಯಿತು. ಸತ್ಯ ಹರಿಶ್ಚಂದ್ರ, ಶನಿದೇವರ ಮಹಾತ್ಮೆ ಮುಂತಾದ ಪೌರಾಣಿಕ ನಾಟಕದಲ್ಲಿ ಅಭಿನಯ.

ಕಂಪನಿಯವರಿಗೆ ಇವಳ ನಟನೆ ಹಿಡಿಸಿತು.ಕಲೆಕ್ಷನ ಚನ್ನಾಗಿ ನಡೆದಿತ್ತು. ಅಷ್ಟರಲ್ಲಿ ತಂದೆ ಮತ್ತು ಮಾವ ಇವಳನ್ನು ಹುಡುಕಿಕೊಂಡು ಬಂದರು. ಅದು 1961ನೇ ಇಸ್ವಿಇರಬಹುದು. ಪೋಲಿಸ್ ಸ್ಟೇಶನ್ ನಲ್ಲಿ ಇವರು ಯಾರೋ ನನಗೆ ಗೊತ್ತಿಲ್ಲವೆಂಬಂತೆ ನಟನೆ ಮಾಡಿದರು.ಬಣ್ಣದ ಬದುಕಿನ ಮುಂದೆ ಹೆತ್ತಪ್ಪ ಕಾಲಕಸವಾಗಿದ್ದ.

ಬಣ್ಣದ ಬದುಕಿಗೆ ಮುಖಮಾಡಿದ ಸರೋಜಮ್ಮ ಮನೆಕಡೆಗೆ ಮುಖ ಮಾಡಲೇ ಇಲ್ಲ. ಮುಂದೆ ಬಳ್ಳಾರಿ ಲಲಿತಮ್ಮನವರ "ಲಲಿತ ಕಲಾ ನಾಟ್ಯ ಸಂಘ" ಕ್ಕೆ ಹೋದರು. ಅಲ್ಲಿ ಕವಿರತ್ನ ಕಾಳಿದಾಸ, ಮಣಿಮಂಜರಿ ನಾಟಕಗಳನ್ನಾಡಿದರು.

ರಂಗಭೂಮಿ ಎಂದರೇನೆ ಒಂದು ಅಲೆಮಾರಿ ಬದುಕು, ಇಂದು ಈ ಕಂಪನಿ, ನಾಳೆ ಮತ್ತೊಂದು ಕಂಪನಿ ಚಿತ್ರದುರ್ಗದಲ್ಲಿ ನರೇಗಲ್ ಚನ್ನಬಸಪ್ಪನವರ ಕಂಪನಿ ಇತ್ತು ಅಲ್ಲಿಗೆ ಬಂದಳು ಸರೋಜ. ಅಲ್ಲಿ ವಾರಕ್ಕೆ ಎರಡು ರೂಪಾಯಿ ಸಂಬಳ. ಗದಗದಲ್ಲಿ ಹದ್ಲಿ ಶಿವಣ್ಣ ಅವರ ಗೆಳೆಯರು ಕೂಡಿ ಒಂದು ಕಂಪನಿ ಮಾಡಿದ್ದರು. ಕೆಲವು ದಿನ ಅಲ್ಲಿಗೆ ಹೋದರು. ಒಟ್ಟಿನಲ್ಲಿ ಅಲೆದಾಟದ ಜೀವನ ಇವಳದಾಗಿತ್ತು.

ನಂತರ ಸುಳ್ಯದ ದೇಸಾಯಿಯವರ "ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ ಸುಳ್ಯ" ಈ ಕಂಪನಿಯಲ್ಲಿ ಒಂದುವರೆ ವರ್ಷ ಇದ್ದರು. ತದನಂತರ ರಾಮರಾವ ದೇಸಾಯಿಯವರ ಕಂಪನಿಯಲ್ಲಿ ಗೌಡ್ರಗದ್ಲ ನಾಟಕದಲ್ಲಿ ಗಂಗೆಯ ಪಾತ್ರ ಮಾಡಿದಳು. ಈ ನಾಟಕ ಮೂರುವರ್ಷ ಪ್ರದರ್ಶನಗೊಂಡಿತು.

'ಯಾರಿಗೆ ಯಾರು' ನಾಟಕದಲ್ಲಿ ಬಿಂದುವಿನ ಪಾತ್ರ ಇವರಿಗೆ ಒಳ್ಳೇಯ ಹೆಸರು ತಂದು ಕೊಟ್ಟಿತು. ಒಬ್ಬ ಬಡ ಹುಡುಗಿಯ ಪಾತ್ರ ಇದು. ಈ ಪಾತ್ರವನ್ನು ಬೇರೆಯವರು ಮಾಡಿದರೆ ಪ್ರೇಕ್ಷಕರು ಒಪ್ಪುತ್ತಿರಲಿಲ್ಲ. ಗಲಾಟೆ ಮಾಡುತ್ತಿದ್ದರು. ಆ ಪಾತ್ರಕ್ಕೆ ಸರೋಜಮ್ಮಳೇ ಬೇಕು. ಇದೇ ಪಾತ್ರಕ್ಕೆ ತೇರದಾಳದಲ್ಲಿ ನೋಟಿನ ಹಾರ ಮಾಡಿ ಹಾಕಿದ್ದರು. ಅಲೆಮಾರಿ ಬದುಕಿಗೆ ಅಂತೂ ಒಂದು ನೆಲೆ ಸಿಕ್ಕಿತ್ತು. ಚಿಂದೋಡಿ ಲೀಲಾ ಕೂಡಾ ಈ ಬಿಂದುವಿನ ಪಾತ್ರ ನೋಡಿ ಬಹಳ ಮೆಚ್ಚಿಕೊಂಡಿದ್ದರು.

ತದನಂತರ ಕಡಪಟ್ಟಿ ಪ್ರಕಾಶ ಅವರ ಕಂಪನಿಗೆ ಬಂದದ್ದು. 'ಸತೀ ಸಂಸಾರದ ಜ್ಯೋತಿ' ನಾಟಕದಲ್ಲಿ ರಾಜಶ್ರೀ ಪಾತ್ರ (ತಂಗಿಯ ಗಂಡನನ್ನೆ ಮೋಹಿಸುವ ವಿಲನ್ ಪಾತ್ರ) ಇದನ್ನು ನೋಡಿ ಕುಳಿತ ಪ್ರೇಕ್ಷರಲ್ಲಿ ಒಬ್ಬ ಸಿಟ್ಟಿನಿಂದ ತಿನ್ನುವ ಮೆಕ್ಕೆತೆನೆಯನ್ನು (ಮುಸುಕಿನ ಜೋಳ) ತೆಗೆದುಕೊಂಡು ಒಗೆದಿದ್ದ ಅಷ್ಟು ಪರಿಣಾಮಕಾರಿಯಾಗಿತ್ತು ಆ ಪಾತ್ರ, ಯಾವುದೇ ಪಾತ್ರ ಕೊಟ್ಟರೂ ಅದಕ್ಕೆ ಜೀವತುಂಬುವ ಕೌಶಲ್ಯ ಆಕೆಯಲ್ಲಿತ್ತು. ಹೆತ್ತ ತಂದೆಯನ್ನೇ ದೂರಮಾಡಿದ ಸರೋಜಮ್ಮ ರಂಗಭೂಮಿಯೇ ತನ್ನ ತಂದೆ ಎಂದು ತಿಳಿದವಳಿಗೆ ರಂಗಭೂಮಿ ಕೈಬಿಡಲಿಲ್ಲ. 'ಚಿನ್ನದ ಗೊಂಬೆ' ನಾಟಕದಲ್ಲಿನ ಶಿವಲೀಲಾನ ಪಾತ್ರ, ಹಾಸ್ಯಪಾತ್ರ ಒಳ್ಳೇಯ ಹೆಸರನ್ನು ತಂದುಕೊಟ್ಟಿತು. ಜಮಖಂಡಿಯಲ್ಲಿ ರಸ್ತೆಯ ಮೇಲೆ ಚಾಕ್ ಪೀಸಿನಿಂದ ಈ ಹೆಸರುಗಳನ್ನು ಬರೆಯುತ್ತಿದ್ದರಂತೆ.

ಗುಡಗೇರಿ ಕಂಪನಿಯಲ್ಲಿ 3-4 ವರ್ಷದ ಅನುಭವ ಹಸಿರು ಬಳೆ ನಾಟಕದಲ್ಲಿ ಸುವರ್ಣಾಳ ಪಾತ್ರ ಈಗಲೂ ಹೆಸರು ತಂದುಕೊಟ್ಟಿದೆ.

ಅಂದು ಹೊರಗೆ ನಟಿಯರು ತಿರುಗಾಡಿದರೆ ಕಲೆಕ್ಷನ್ ಕಡಿಮೆಯಾಗುತ್ತದೆ ಎಂಬುದು ಶ್ರೀಕಂಠಶಾಸ್ತ್ರೀಗಳ ವಿಚಾರವಾಗಿತ್ತು. ಅರ್ಧದಷ್ಟು ಪ್ರೇಕ್ಷಕರು ನಾಟಕದ ನಟನಟಿಯರನ್ನು ನೋಡುವ ಕುತೂಹಲದಿಂದ ಬಂದವರಾಗಿರುತ್ತಾರೆ. ಹೊರಗಡೆ ಇವರನ್ನು ನೋಡಿದರೆ ಮೊದಲಿನ ಕುತೂಹಲ ಕಡಿಮೆ ಯಾಗುವುದು ಸಹಜ. ಈಗಿನ ಕಂಪನಿ ಮಾಲೀಕರು ನಟ ನಟಿಯರ ಬಗ್ಗೆ ಕಾಳಜಿವಹಿಸುವುದು ಕಡಿಮೆಯಾಗಿದ್ದರಿಂದ ರಂಗಭೂಮಿ ಅವನತಿಯ ದಾರಿ ಹಿಡಿದಿದೆ.

ಮನೆತನದ ಜವಾಬ್ದಾರಿ ಇವಳ ಮೇಲೆ ಇದ್ದ ಕಾರಣ, ಸಂಭ್ರಮದ ದಿನಗಳೇ ಇಲ್ಲ. ವೈಯಕ್ತಿಕವಾಗಿ ನೋವನ್ನೇ ಉಂಡವರು. ಎಲ್ಲಾದರೂ ಹೊರಗಡೆ ಹೋದಾಗ ಜನ (ಪ್ರೇಕ್ಷಕರು) ಇವರೇ ನೋಡು ಆ ಪಾತ್ರ ಮಾಡಿದವರು ಅಂದಾಗ ಇವರಿಗೆ ಬಹಾಳ ಸಂತೋಷವಾಗಿದೆ. ಅದರ ಜೊತೆಗೆ ಅರಿಶಿಣಗುಡಿಯವರ ಕಂಪನಿಯಲ್ಲಿ "ನನ್ನ ಗಂಡನ ಹೆಂಡತಿ" ನಾಟಕದಲ್ಲಿಯ ಕುರುಡಿಯ ಪಾತ್ರ ಇವರಿಗೆ ಬಹಾಳ ಖುಷಿತಂದುಕೊಟ್ಟ ಪಾತ್ರ.

ತನ್ನದರ ಕುರಿತು ಹೊಗಳಿಕೊಳ್ಳದೆ ಇನ್ನೊಬ್ಬರ ನಟನೆಯನ್ನು ಕಲೆಯನ್ನು ಮೆಚ್ಚಿ ಗೌರವಿಸುವ ಮನಸ್ಸು ಈ ಸರೋಜಮ್ಮಳದು. ಇವರ ಗೆಳತಿ ಅನ್ನಪೂರ್ಣಾ ಸಾಗರ ಎಚ್ಚರ ತಂಗಿ ಎಚ್ಚರ ನಾಟಕದಲ್ಲಿ ಗೋಧಾವರಿಯ ಪಾತ್ರ ಇವರಿಗೆ ಬಹಳ ಇಷ್ಟವಾದ ಪಾತ್ರ, ಅದರಂತೆ ಸುಬದ್ರಮ್ಮ ಮನ್ಸೂರ ಅವರ ರಕ್ತರಾತ್ರಿಯ ನಾಟಕ ದ್ರೌಪದಿಯ ಪಾತ್ರ ಅವರ ಹಾಗೆ ಮಾಡಲು ನನಗೆ ಆಗಲೇ ಇಲ್ಲ ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ ಮನೋಭಾವ ಇವರದು. ಅದಲ್ಲದೆ ಇನ್ನೂ ಅದೆಷ್ಟೋ ಹಿರಿಯ ಕಲಾವಿದರನ್ನು ನೆನಪಿಸಿಕೊಳ್ಳುತ್ತಾರೆ. ಸರೋಜಮ್ಮ ದುತ್ತರಗಿ ಅವರು ನನಗೆ ಡ್ಯಾನ್ಸ ಕಲಿಸಿಕೊಟ್ಟಿದ್ದಾರೆ. ಕುಕನೂರ ರಹೆಮಾನವ್ವನ ಮಗಳು ಲಲಿತಮ್ಮ ನನಗೆ ಅಳುವ ಪಾತ್ರಗಳನ್ನು ಹೇಗೆ ಮಾಡಬೇಕೆಂದು ಹೇಳುತ್ತಿದ್ದರು. ಅವಳಂಥ ಉನ್ನತ ಶ್ರೇಷ್ಠ ನಟಿಯನ್ನು ನಾನು ನೋಡಿಲ್ಲವೆಂದು ಹೇಳುವ 60ರ ಅಂಚಿನಲ್ಲಿರುವ ಸರೋಜಮ್ಮಗೆ ಇನ್ನೂ ಬಣ್ಣದ ನಂಟು ಕಳಚಿಲ್ಲ. ಅಕಾಡೆಮಿಯ ಪ್ರಶಸ್ತಿಗಳು ಸಿಕ್ಕಿವೆ. ನೋವಿನಲ್ಲಿಯೂ ನಲಿವನ್ನು ಕಾಣುವ ಆಶಾವಾದಿ ನಟಿ ಈ ಸರೋಜಮ್ಮ.[35]

**ಸರಸ್ವತಿ ಬೆಂಗಳೂರು :**

ಸಹ್ಯಾದ್ರಿಯ ಮಡಿಲಲ್ಲಿ ಜನಿಸಿದ ಈ ಸರಸ್ವತಿಯ ಬದುಕು ಮಾತ್ರ ಹಸಿರಾಗಲಿಲ್ಲ. ಕಡು ಬಡತನದ ಬೇಗೆಯಲ್ಲಿ ಬೆಳೆದವಳು. ಮನೆತನದಲ್ಲಿ ಯಾರೂ ಕಲಾವಿದರಲ್ಲ. ಕಲೆಯ ಗಂಧವೇ ಇರಲಿಲ್ಲ. ಶಾಲೆಯಲ್ಲಿದ್ದಾಗ ಹಾಡು. ಡ್ಯಾನ್ಸ, ಮಾಡುತ್ತಿದ್ದಳು. ಓದಬೇಕೆನ್ನುವ ಛಲ ಆದರೆ ಬಡತನ

---

[35] 22-5-2009 ರಂದು ಹುಬ್ಬಳ್ಳಿಯ ಗಣೇಶಪೇಟೆಯಲ್ಲಿ ಅವರ ಮನೆಯಲ್ಲಿ ಸಂದರ್ಶನ ಮಾಡಿದ್ದು.

ಅಡ್ಡಿಮಾಡಿತು. ತಂದೆ ಹೊಲಿಗೆ ಕ್ಲಾಸಿಗೆ ಸೇರು, ಅದರಿಂದ ಮುಂದೆ ನಮ್ಮ ಮನೆಗೆ ಏನಾದರೂ ಒಂದಿಷ್ಟು ಆಸರೆಯಾಗಬಹುದೆಂದು ಹೇಳಿದರು. ಈ ಸರಸ್ವತಿ ಹೊಲಿಗೆ ಕ್ಲಾಸಿಗೆ ಹೋಗುತ್ತೇನೆಂದು ಸಂಗೀತ ಕ್ಲಾಸಿಗೆ ಸೇರಿದ್ದಳು.

"ತಾನೊಂದು ಬಗೆದರೆ ದೈವ ಬೇರೊಂದು ಬಗೆಯಿತು" ಎಂಬಂತೆ ದೇವಮ್ಮ ಎನ್ನುವವರ ಮನೆಗೆ ಇವರ ತಾಯಿ ಕೆಲಸಕ್ಕೆ ಹೋಗುತ್ತಿದ್ದರಂತೆ. ದೇವಮ್ಮನವರಿಗೂ ಚಿಂದೋಡಿ ಲೀಲಾ ಅವರಿಗೂ ಪರಿಚಯ. ಹೀಗಾಗಿ ಅವರ ಮುಖಾಂತರ ಈ ಸರಸ್ವತಿ ತನ್ನ 8ನೇ ವಯಸ್ಸಿನಲ್ಲಿ ಬಣ್ಣದ ಬದುಕಿಗೆ ಕಾಲಿಡಬೇಕಾಯ್ತು. ಅದೂ ಚಿಂದೋಡಿ ವೀರಪ್ಪನವರ ಕಂಪನಿಯಲ್ಲಿ. ಆಗ ವಾರಕ್ಕೆ ಐದು ರೂಪಾಯಿ ಸಂಬಳ. ತದನಂತರ ಚಿತ್ತರಗಿ ಗಂಗಾಧರ ಕಂಪನಿ, ಯಂಕಂಚಿ ಜೋಶಿ ಕಂಪನಿ, ಮಾ। ಹಿರಣ್ಣಯ್ಯನವರ ಕಂಪನಿ (ಲಂಚಾವತಾರ ಅತ್ಯಾಚಾರ, ಅನಾಚಾರ) ಹಿರೋಹಿನ್ ಹಾಗೂ ವಿಲನ್ ಪಾತ್ರಗಳಲ್ಲಿ ನಟನೆ.

ಕಣ್ಣಿದ್ದರೂ ಬುದ್ಧಿಬೇಕು, ಹೂವಿನ ಅಂಗಡಿ, ತಾಳಿಯ ತಕರಾರು ಮುಂತಾದ ಸಾಮಾಜಿಕ ನಾಟಕದಲ್ಲಿ ನಟಿಸಿದ ಸಾವಿತ್ರಿಯು ಕೊನೆಗೂ ತನ್ನ ಆಸಕ್ತಿಯ ಕ್ಷೇತ್ರದಲ್ಲಿ ಜಯ ಸಾಧಿಸಿದಳು. ಆ ಮೇಲೆ ಒಂದಿಷ್ಟು ದಿನ ಅಮೆಚೂರ ಕಂಪನಿಗೆ ಮುಖಮಾಡಿದ್ದು, ದಾಂಪತ್ಯ ಜೀವನಕ್ಕೆ ಕಾಲಿಟ್ಟಿದ್ದು, ಕುಡುಕ ಗಂಡನಕೂಡ ಬದುಕಲಿಕ್ಕೂ ಆಗದೆ ಸಾಯಲಿಕ್ಕೂ ಆಗದೆ ಎರಡು ಮಕ್ಕಳಿಗೆ ಜನ್ಮಕೊಟ್ಟದ್ದು (ಗಾಯತ್ರಿ ಹಾಗೂ ಯೋಗಿಶ) ಆಗ ಸಮಾಜ ಬಹಳ ಗೌರವದಿಂದ ನೋಡುತ್ತಿತ್ತು. ಎನ್ನುತ್ತಾರೆ ಒಬ್ಬೊಬ್ಬರಿಗೆ ಒಂದೊಂದು ರೀತಿಯ ಅನುಭವ ಅಮೆಚೂರಿನಿಂದ ಮರಳಿ ಮತ್ತೆ ಚಿತ್ತರಗಿ ಕಂಪನಿಗೆ ಬಂದ ಸರಸ್ವತಿ ದುಡಿದ ದುಡ್ಡೆಲ್ಲಾ ತಾಯಿಯ ದವಾಖಾನೆಯ ಖರ್ಚಿಗೆ ಸೋರಿಹೋದಾಗ ಜೀವನದಲ್ಲಿ ಜಿಗುಪ್ಸೆ ಉಂಟಾದುದು ಸಹಜ. ಅಮೆಚೂರಿನಲ್ಲಿ ಡಿಮ್ಯಾಂಡ ಕಡಿಮೆ ಆದಾಗ ಸೇಲ್ಸ್ ಗರ್ಲ್ ಆಗಿ ಕೆಲಸ ಮಾಡಿ ನಾನು ಮಕ್ಕಳನ್ನು ಬೆಳೆಸಿದ್ದೀನಿ ಎಂದು ಹೆಮ್ಮೆಯಿಂದ ಹೇಳುತ್ತಾರೆ.

ಮಾಸ್ಟರ್ ಹಿರಣಯ್ಯನವರ ಕಂಪನಿಯಲ್ಲಿ ಲಂಚಾವತಾರ ನಾಟಕದಲ್ಲಿ ಗೌರಿ ಪಾತ್ರ ಮಾಡುತ್ತಿದ್ದಾಗ ಅಪ್ಪನ ಮಣ್ಣಿಗೂ ಹೋಗಲು ಬಿಡಲಿಲ್ಲ ಈ ರಂಗಭೂಮಿಯನಂಟು. ಆದರೂ ಈ ರಂಗಭೂಮಿ ನನಗೇನು ಕೊಟ್ಟಿದೆ ನೋಡಿ.

'ವಶೀಲಿ ಜಾಸ್ತಿ ನಸೀಬ ಇಲ್ಲ' ಹೀಗಾಗಿ ಯಾವ ಪ್ರಶಸ್ತಿಗಳೂ ನನಗೆ ಬಂದಿಲ್ಲ. ನಿಯತ್ತಾಗಿ ಬದುಕುವವರಿಗೆ ಕಾಲ ಇಲ್ಲ ಆಂಟಿ ಎನ್ನುತ್ತಾರೆ ಅವರ ಮಗಳು ಗಾಯತ್ರಿ. ಮಗಳು ಗಾಯತ್ರಿಯ ದುಡಿಮೆಯ ಮೇಲೆ ಮನೆ ನಡೆದಿದೆ. ಅನಾರೋಗ್ಯದಿಂದ ನರಳುತ್ತಿರುವ ಅಮ್ಮನ ಔಷದಿಯ ಖರ್ಚನ್ನು ಮನೆಯ ಖರ್ಚನ್ನು ನಿಭಾಯಿಸುವುದು ಕಷ್ಟ

ಹಿರಿಯ ಕಲಾವಿದರಿಗೆ ಮಾಶಾಸನ ಇಲ್ಲ ನಮಗಿಂತ ಕಿರಿಯರು ರಾಜ್ಯ ಮತ್ತು ಕೇಂದ್ರ ಸರಕಾರದ ಮಾಶಾಸನ ಪಡೆಯುತ್ತಿದ್ದಾರೆ. ಕಲಾವಿದರ ಗೋಳು ಯಾರಿಗೂ ಕೇಳ್ತಾ ಇಲ್ಲ ಎಂಬ ನೋವು ಇವರನ್ನು ಕಾಡ್ತಾ ಇದೆ. ಕಲಾವಿದೆಯರೆಂದರೇನೆ, ಈ ಸಮಾಜಕ್ಕೆ ಏನೋ ತಾತ್ಸಾರ, ಎಂಬುದು ಮನವರಿಕೆಯಾಗುತ್ತದೆ.[36]

**ಶೈಲಮ್ಮಾ ಜಿತೂರೆ (ರಾಮದುರ್ಗ)**

ಚಾಲುಕ್ಯರಾಳಿದ ಶಿಲ್ಪಕಲೆಗೆ ಹೆಸರಾದ ಬದಾಮಿಯ ಸ್ಟೇಶನಲ್ಲಿರುವ ಇವರ ಮನೆಗೆ ಹೋದಾಗ ನಿರಾಶೇ ಕಾದಿತ್ತು. ಮನೆಯೇನೋ ಸಿಕ್ಕಿತು ಆದರೆ ಸಿಗಬೇಕಾದವರೇ ಸಿಗಲಿಲ್ಲ. ಚಿಕ್ಕೋಡಿಯ ಕ್ಯಾಂಪಗೆ ಹೋಗಿದ್ದಾರೆ ಎಂದಾಗ ವಿಧಿಯಿಲ್ಲದೆ ಹಿಂತಿರುಗಬೇಕಾಯ್ತು. ಎರಡು ದಿನದ ನಂತರ ಚಿಕ್ಕೋಡಿಗೆ ಹೋದೆ.

ಮದ್ಯಾಹ್ನದ ಸಮಯ ಇಡೀರಾತ್ರಿ ದುಡಿದ ದೇಹಕ್ಕೆ ವಿಶ್ರಾಂತಿಯ ಅವಶ್ಯಕತೆ ಬೇಕು. ಪ್ರಕೃತಿಯ ವಿರುದ್ಧದ ಬದುಕು ಇವರದು. ಜಗವೆಲ್ಲಾ ಮಲಗಿರಲು ಇವನೊಬ್ಬನೆದ್ದ ಬಣ್ಣದ ಬದುಕಿಗೆ ಕತ್ತಲೆ ಬೆಳಕಿನ ವ್ಯತ್ಯಾಸ ಎಲ್ಲಿದೆ? ಎತ್ತರದ ನಿಲುವಿನ 60ರ ಆಸುಪಾಸಿನಲ್ಲಿರುವ ಶೈಲಮ್ಮ ಜಿತೂರೆ ಅವರು ನಗುಮೊಗದಿಂದ ಸ್ವಾಗತಿಸಿದಾಗ ಬದಾಮಿಗೆ ಹೋಗಿ ಹಿಂತಿರುಗಿ ಬಂದಶ್ರಮ ವ್ಯರ್ಥವೆನಿಸಲಿಲ್ಲ.

ಚಹಾಕುಡಿದು ಮಾತಿಗೆ ಇಳಿದಾಗ ಶೈಲಮ್ಮನವರ ವಾಕ್ಝರಿಯ ಮುಂದೆ ಹೊತ್ತು ಸರಿದದ್ದೆ ಗೊತ್ತಾಗಲಿಲ್ಲ.

1956ರಲ್ಲಿ ಇವರು ಧಾರವಾಡದಲ್ಲಿ ಹುಟ್ಟಿದ್ದು, ಬೆಳೆದದ್ದು ಮಾತ್ರ ಬಾಗಲಕೋಟೆಯಲ್ಲಿ. ತಾಯಿ ತಾರಾಬಾಯಿ. ಇವಳು 4 ವರ್ಷದವಳಿದ್ದಾಗ ಗುಲಬರ್ಗಾದ ಓಬಳೇಶ್ವರ ನಾಟಕ ಕಂಪನಿಯಲ್ಲಿ ಬಿಟ್ಟು ಹೋದರು. ಹೆತ್ತ ತಾಯಿ ಮಗಳನ್ನು ಈ ರೀತಿ ಬಿಟ್ಟು ಹೋಗಬೇಕಾದರೆ ಅದೇನು ಕಾರಣವೋ ಅದು ಇವರಿಗೂ ಗೊತ್ತಿಲ್ಲ. ಅಂದಿನ ಕಾಲದಲ್ಲಿ ನಿರ್ಗತಿಕರಿಗೆ ಆಶ್ರಯ ತಾಣ ರಂಗಭೂಮಿ. ಬೇಲಿಯೇ ಎದ್ದು ಹೊಲ ಮೇಯ್ದಾಗ, ತಾಯಿಯ ಹಾಲೇ ನಂಜಾದಾಗ ಯಾರ ಮೊರೆ ಹೋಗುವುದು? ಅನಾಥ ಪ್ರಜ್ಞೆ ಅವಳನ್ನು ಕಾಡ್ತಾ ಇತ್ತು. ಬೆಳವಣಿಕೆ ಕಂಪನಿಯಲ್ಲಿ ಇವರ ಅಕ್ಕ ಜಯಮ್ಮ ಪಾತ್ರ ಮಾಡುತ್ತಿದ್ದರು. ಮುಂದೆ ಗೋಕಾಕ ಬಸವಣ್ಣೆಪ್ಪನವರ ಕಂಪನಿಯಲ್ಲಿ ಯಾರೋ ಒಬ್ಬರು ಪಾತ್ರ ಮಾಡುವವರು ಬಿಟ್ಟು ಹೋದರು ಅನಿವಾರ್ಯವಾಗಿ ಆ ಪಾತ್ರವನ್ನು ಶೈಲಮ್ಮನವರು ಮಾಡುವ ಪ್ರಸಂಗ ಬಂದೊದಗಿತು. ಏನೆಲ್ಲಾ ಕನಸು ಹೊತ್ತ ಪುಟ್ಟಮೋರಿ ಒಲ್ಲದ ಮನಸ್ಸಿನಿಂದ ಬಣ್ಣ ಹಚ್ಚಬೇಕಾಯಿತು. ಮುಂದೆ 15 ವರ್ಷದವಳಿದ್ದಾಗ ನಾಟಕದಲ್ಲಿ ಒಬ್ಬ ಮುಸ್ಲಿಂ ಹುಡುಗಿಯ ಪಾತ್ರ ಮಾಡುವ ಅವಕಾಶ ಒದಗಿಬಂತು.

---

[36] 22-5-2009 ರಂದು ಹುಬ್ಬಳ್ಳಿಯ ಗಣೇಶಪೇಟೆಯಲ್ಲಿ ಭೇಟಿಯಾದದ್ದು.

ಹೊಳೆಯಲ್ಲಿ ಬಿದ್ದಾಗಿದೆ ಒಂದು ಮುಳುಗಬೇಕು ಇಲ್ಲಾ ಈಜಿ ದಡಸೇರಬೇಕು. ಗುಡಗೇರಿ ಕಂಪನಿಯಲ್ಲಿ 4-5 ವರ್ಷ ದುಡಿದ ಶೈಲಮ್ಮ ಮುಂದೆ ಸುಳ್ಯದ ದೇಸಾಯಿಯವರ ಕಂಪನಿಗೆ ಹೋದರು. ಅಲ್ಲಿ "ವರನೋಡಿ ಹೆಣ್ಣು ಕೊಡು" ನಾಟಕ ಒಳ್ಳೆಯ ಹೆಸರನ್ನು ತಂದುಕೊಟ್ಟಿತು. ನಾಟಕ, ನಾಟಕ ಕಂಪನಿ ಅಂದಮೇಲೆ ಏನೆಲ್ಲಾ ತೊಂದರೆಗಳಿರುವುದು ಸ್ವಾಭಾವಿಕ. ಆ ಕಂಪನಿಯವರು ಸರಿಯಾದ ಸಂಬಳ ಕೊಡದೇ ಇದ್ದುದಕ್ಕಾಗಿ ಶೈಲಮ್ಮ ಮತ್ತೆ ಹೊಡಮರಳಿ ಗುಡಗೇರಿ ಕಂಪನಿಗೆ ಬರಬೇಕಾಯ್ತು. ಮೊದಲ ಇನ್ನಿಂಗ್ಸನಲ್ಲಿಯೇ ಶತಕ ಬಾರಿಸುವ ಅವಕಾಶ ಹೈಬ್ರಿಡ್ ಹೆಣ್ಣು, ಚನ್ನಪ್ಪ ಚನ್ನಗೌಡ, ವಿಧಿಯ ಕೈವಾಡ, ದುಡ್ಡಿನ ದರ್ಪ, ರೈತನ ಮಕ್ಕಳು ಎಲ್ಲ ನಾಟಕಗಳು ಒಳ್ಳೆಯ ಹೆಸರನ್ನು ತಂದುಕೊಟ್ಟವು. ಶೈಲಮ್ಮನವರ ಭಾಗ್ಯದ ಬಾಗಿಲು ತೆರೆಯಿತು. ತಾಯಿ ಇಲ್ಲದ ತಬ್ಬಲಿಗೆ ರಂಗಭೂಮಿ ಅಂತೂ ಕೈಬಿಡಲಿಲ್ಲ. ಯಾವದೇ ಪಾತ್ರವಿದ್ದರೂ ಮರುದಿವಸ ಇಡೀ ದಿನ ಅದರ ಗುಂಗಿನಲ್ಲಿಯೇ ಇರುತ್ತಿದ್ದರು.

"ಶಾಪದಿಂದ ಭೂಮಿಗೆ ಬಂದ ಗಂಧರ್ವರು ಇವರು. ಇವರಿಗೆ ಯಾವ ಪಾಪವೂ ಇಲ್ಲ. ಯಾವ ಜೀವನವೂ ಇಲ್ಲ" ಎಂದು ಎನ್. ಬಸವರಾಜ (ಗುಡಗೇರಿ ಕಂಪನಿ ಮಾಲೀಕರು) ಅವರು ಹೇಳುತ್ತಿದ್ದರು. ಎಂದು ಕಳೆದ ದಿನಗಳನ್ನು ಮೆಲುಕು ಹಾಕಿದರು. ಪಾತ್ರಗಳುನನಗೆ ಖುಷಿಕೊಟ್ಟವೆ. ರಂಗಭೂಮಿ ನನಗೆ ಖುಷಿ ಕೊಟ್ಟಿಲ್ಲ. ಜೀವನದಲ್ಲಿ ನೆಮ್ಮದಿಯಿಲ್ಲ, ಬರೀನೋವೆ, ನಟಿಯರ ಜೀವನ ಶಿಸ್ತುಬದ್ಧವಾಗಿರುವದಿಲ್ಲ. ನಾವು ಸಮಾಜವನ್ನು ತಿದ್ದುತ್ತೇವೆ. ಆದರೆ ನಮ್ಮನ್ನು ತಿದ್ದುವವರು ಯಾರು? ಈ ಪ್ರಶ್ನೆ ನೂರು ಚೂರಿಗಳನ್ನು ಒಮ್ಮೆಲೆ ಎದೆಗೆ ಚುಚ್ಚಿದ ಅನುಭವ (ಹೃದಯವಂತರಿಗೆ)

ಊರಿಂದ ಊರಿಗೆ ತಿರುಗುವ ಅಲೆಮಾರಿಗಳು ನಾವು ನಮಗೊಂದು ನೆಲೆ ಎನ್ನುವುದು ಇರುವುದಿಲ್ಲ. ಹೀಗಾಗಿ ನಮ್ಮ ಮಕ್ಕಳಿಗೆ ಸರಿಯಾದ ಶಿಕ್ಷಣ ಕೊಡುವುದೂ ಆಗಲಿಲ್ಲ. ಬಣ್ಣದ ಬದುಕೇ ಬೇರೆ ಖಾಸಗಿ ಬದುಕೇ ಬೇರೆ. ಕಲಾವಿದರ ಪರಿಸ್ಥಿತಿ ಬಹಳ ಕೆಟ್ಟದ್ದಿದೆ, ಸತ್ತರೆ ಪಟ್ಟಿಹಾಕಿ ಮಣ್ಣು ಮಾಡಬೇಕು. ಎನ್ನುವ ಹಿರಿಯ ಜೀವದ ಹೃದಯಾಂತರಾಳದ ಮಾತುಗಳು ಮೂಕವಿಸ್ಮಿತರನ್ನಾಗಿ ಮಾಡುತ್ತವೆ.

ಸಮಾಜದ ತಿರಸ್ಕಾರಕ್ಕೆ ಒಳಗಾದವರು ನಾವು ಇವಳಾs ನಾಟಕದವಳು ಎಂಥ ಕ್ರೂರ ನೋಟ. ಇವೆಲ್ಲವನ್ನು ಮರೆತು 'ಗೆಜ್ಜೆ ಕಟ್ಟಿ ಹೆಜ್ಜೆ ಹಾಕಲೇ ಬೇಕು" ಹಾಕಿದ್ದಾರೆ ದಿಟ್ಟೆ ಶೈಲಮ್ಮ.

ದೂರದರ್ಶನದ ಪ್ರಭಾವದಿಂದ ರಂಗಭೂಮಿಯ ಮೇಲೆ ಭಾರಿ ಹೊಡೆತ ಬಿದ್ದಿದೆ ಎನ್ನುವ ಶೈಲಮ್ಮ ಬಿ. ಆರ್. ಅರಿಶಿನಗುಡಿಯವರ ಕಂಪನಿಯಲ್ಲಿ ಎಚ್ಚರ ತಂಗಿ ಎಚ್ಚರ ನಾಟಕದಲ್ಲಿ ಗೋಧಾವರಿ ಪಾತ್ರ ಒಳ್ಳೇ ಹೆಸರನ್ನು ತಂದುಕೊಟ್ಟಿತು. ಎಚ್ಚರ ತಂಗಿ ಎಚ್ಚರ ಹಾಗೂ ದುಡ್ಡಿನ ದರ್ಪ (ಗೋಧಾವರಿಹಾಗೂ ಸುಮಿತ್ರಾದೇಸಾಯಿ) ಈ ಪಾತ್ರಕ್ಕೆ ಇವಳ ಹಾವಿನಂಥ ನೈಜ ಕಣ್ಣುಗಳು ಆ ಪಾತ್ರಕ್ಕೆ ವಿಶೇಷ ಮೆರಗನ್ನು ಕೊಡುತ್ತಿದ್ದವು. ಕೆಲವೊಂದು ಪಾತ್ರಗಳಿಗೆ ಇವಳೇ ಬೇಕು. 'ವಿಧಿಯ ಕೈವಾಡ'

ನಾಟಕ ದಾವಣಗೇರಿಯಲ್ಲಿ 200 ಪ್ರಯೋಗ ನಡೆಯಿತು. ರಂಗಭೂಮಿಗೆ ತನ್ನ ನಟನೆಯ ಮೂಲಕ ವಿಶೇಷ ಕಳೆಯನ್ನು ತಂದುಕೊಟ್ಟ ಇವಳ ಬಾಳು ಮಾತ್ರ ಕಳಾಹೀನವಾಯ್ತು. ಓದಬೇಕು ಏನಾದರೂ ಸಾದಿಸಬೇಕು ಎಂಬ ಕನಸು ನನಸಾಗಲೇ ಇಲ್ಲ.[37]

## ವಿಜಯಲಕ್ಷ್ಮಿ ಗುಳೇದಗುಡ್ಡ :

ತಾಯಿ ಸುಲೋಚನಾಳಿಂದ ಇವಳಿಗೆ ನಟನೆ ರಕ್ತಗತವಾಗಿ ಒಲಿದು ಬಂದಿದೆ. ಸಧ್ಯ ಚಾಲ್ತಿಯಲ್ಲಿರುವ "ಶ್ರೀ ಸಂಗಮೇಶ್ವರ ನಾಟ್ಯಸಂಘ" ಆಶಾಪೂರ ಈ ಕಂಪನಿಯ ಒಡತಿ ಪ್ರೇಮಾ ಗುಳೇದಗುಡ್ಡ ಇವರ ಅಕ್ಕ. 1969 ರಿಂದಲೇನೆ ತಾಯಿಯ ಜೊತೆ ಜೊತೆಗೆ ಚಿಕ್ಕಪುಟ್ಟ ಪಾತ್ರಗಳನ್ನು ಮಾಡಲು ಶುರುಮಾಡಿದಳು. ಈ ಪುಟ್ಟ ಪೋರಿ ಹತ್ತನೆ ವರ್ಷಕ್ಕೆ ರಾಜಾಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವನ ಪಾತ್ರ, ರೇಣುಕಾ ಎಲ್ಲಮ್ಮನ ನಾಟಕದಲ್ಲಿ ಪರಶುರಾಮನ ಪಾತ್ರ ಮಾಡಿ ಪ್ರೇಕ್ಷಕರಿಂದ ಚಪ್ಪಾಳೆ ಗಿಟ್ಟಿಸಿಕೊಳ್ಳುತ್ತಾಳೆ. ಮನೆಯ ಪರಿಸ್ಥಿತಿನೇ ಇವಳು ಈ ವೃತ್ತಿಗೆ ಬರಲು ಪ್ರೇರಣೆಯಾಯ್ತು. ಹತ್ತುವರ್ಷ ವೃತ್ತಿನಾಟಕ ಕಂಪನಿಯಲ್ಲಿ ಬಣ್ಣಹಚ್ಚಿದ ವಿಜಯಲಕ್ಷ್ಮಿ ಮುಂದೆ ಐದಾರುವರ್ಷ ಹವ್ಯಾಸಿಯತ್ತ ತಿರುಗಿ ಅಲ್ಲಿಂದ ಮತ್ತೆ ವೃತ್ತಿನಾಟಕ ಕಂಪನಿಯಲ್ಲಿನೇ ಶಾಶ್ವತವಾಗಿ ನೆಲೆಯನ್ನು ಕಂಡುಕೊಳ್ಳುತ್ತಾಳೆ. ಸುಳ್ಯದ ದೇಸಾಯಿ ಕಂಪನಿ, ಮೈಂದಿರಗಿ ಕಂಪನಿಗಳಲ್ಲಿ ಹಾಸ್ಯ ಹಾಗೂ ಸಾಧ್ವಿ ಪಾತ್ರಗಳಲ್ಲಿ ಮಿಂಚಿದ ವಿಜಯಲಕ್ಷ್ಮಿ ನನ್ನವರು ನನ್ನ ಹಡೆದವರು, ಮಲಮಗಳೂ, ಬಿದ್ದಮಾವ ಗೆದ್ದ ಸೊಸೆ ಈ ಹಲವು ನಾಟಕಗಳಲ್ಲಿ ನಾಯಕಿ ಹಾಗೂ ಹಾಸ್ಯ ಪಾತ್ರಗಳನ್ನು ಮಾಡಿ ಸೈ ಎನಿಸಿಕೊಂಡಿದ್ದಾಳೆ.

ಚಿನ್ನದಗೊಂಬೆ, ಧರ್ಮದೇವತೆ (ಮಾಂಡ್ರೆವಿರಚಿತ) ಎಚ್ಚರ ತಂಗಿ ಎಚ್ಚರ (ನಾ. ದೇ. ನರಸಿಂಹಮೂರ್ತಿ ವಿರಚಿತ) ಈ ನಾಟಕಗಳಲ್ಲಿ ಹಾಸ್ಯ ಪಾತ್ರದಲ್ಲಿ ಮಿಂಚಿದ್ದಾಳೆ. ಈಗಲೂ ತಾಯಿಯ ಪಾತ್ರ ಅತ್ತಿಗೆಯ ಪಾತ್ರ ಮಾಡುತ್ತಾರೆ. ಇವಳು ಒಬ್ಬ ಒಳ್ಳೆಯ ಡ್ಯಾನ್ಸರ್ ಕೂಡಾ ಆಗಿದ್ದಾಳೆ. ಒಂದೆರಡು ನಾಟಕದಲ್ಲಿ ಇಬ್ಬರೂ ಸಹೋದರಿಯರು ಮಾಡುವ ಡ್ಯಾನ್ಸ ನೋಡಲೆಂದೇ ಪ್ರೇಕ್ಷಕರು ಬರುತ್ತಿದ್ದರಂತೆ. ಈಗಲೂ ನಾಟಕದ ಹುಚ್ಚು ಬಿಟ್ಟಿಲ್ಲ. ಇವರಿಗೆ ಇಬ್ಬರು ಮಕ್ಕಳು ಪದ್ಮಾವತಿ ಹಾಗೂ ರವೀಂದ್ರ ಒಟ್ಟಾರೆ ಒಂದು ತುಂಬು ಕುಟುಂಬ ಇವರದು.

ಎಲ್ಲ ಕಷ್ಟವನ್ನು ಮರೆಸುವ ಶಕ್ತಿ ಈ ರಂಗಭೂಮಿಗಿದೆ. ಮುಖದ ಬಣ್ಣ ಕಳೆದ ಮೇಲೆ ಮತ್ತೆ ಪಡಿಪಾಟ್ಲು ತಪ್ಪಿದ್ದಲ್ಲ. ಎಂದು ನೋವಿನಲ್ಲಿಯೂ ನಗುವನ್ನು ಕಾಣುವ ಈ ವಿಜಯಲಕ್ಷ್ಮಿ ಪೌರಾಣಿಕ ಹಾಗೂ ಸಾಮಾಜಿಕ ನಾಟಕಗಳಲ್ಲಿ ಈಗಲೂ ತಮ್ಮನ್ನು ತಾವು ಒಡ್ಡಿಕೊಂಡಿದ್ದಾರೆ.[38]

---

[37] 25-5-2009 ರಂದು ಚಿಕ್ಕೋಡಿಯಲ್ಲಿ ಸಂದರ್ಶನ ಮಾಡಿದ್ದು.

**ಲಲಿತಾ ದಾವಣಗೇರಿ :**

ಮೂಲತಃ ಇವರು ಹಿರೇಕೆರೂರು ತಾಲೂಕು ಹೊಸಕಟ್ಟಿ ಗ್ರಾಮದವರು. ಇವರ ತಂದೆಯವರಿಗೆ ಒಂದಿಷ್ಟು ನಾಟಕದ ಗೀಳಿತ್ತು. ಇವರು ಮೂವರು ಸಹೋದರಿಯರು, ಒಬ್ಬ ಸಹೋದರ, ಸಾವಿತ್ರಮ್ಮ ಶಾಂತಾ, ಲಲಿತಾ, ಬಸವರಾಜ.

ತಂದೆಯವರ ಪ್ರೋತ್ಸಾಹ, ಹಾಗೂ ಒತ್ತಾಸೆಯಿಂದ ಇವಳು ಈ ವೃತ್ತಿಗೆ ಬರಬೇಕಾಯಿತು. ಮೂವರು ಸಹೋದರಿಯರು ಬಣ್ಣದ ಬದುಕಿಗೆ ಸೆಟಲ್ ಆದರು. ಲಿಂಗದ ಹಳ್ಳಿ ಮಾಸ್ತರು ರುದ್ರಪ್ಪ ಹಾಗೂ ರಂಗಪ್ಪ ಇವರ ಹತ್ತಿರ ಸಂಗೀತಾಭ್ಯಾಸ. ಶಾಂತಾ ಹಾಗೂ ಲಲಿತಾ ಅವರನ್ನು ಹಳ್ಳಿಗಳಲ್ಲಿ ಆಡುವ ನಾಟಕಗಳಲ್ಲಿ ಹಾಡಲು ಡ್ಯಾನ್ಸ ಮಾಡಲು ಕರೆದುಕೊಂಡು ಹೋಗುತ್ತಿದ್ದರು. ಶರೀರ, ಶಾರೀರದ ಯಾವ ಅಭಾವವೂ ಅವರಲ್ಲಿರಲಿಲ್ಲ.

ಲಲಿತಾ ಎಂಟುವರ್ಷದವಳಿದ್ದಾಗ ಅದೂ ಸುಮಾರು 1955ರಲ್ಲಿ ಗುಬ್ಬಿ ಮುದ್ದು ವೀರಾಚಾರ ಕಂಪನಿಗೆ ಈ ಚೂಟಿಯನ್ನು ಕರೆಯಲು ಬಂದರು. ಟಿಪ್ಪುಸುಲ್ತಾನ, ರಾಮಾಂಜನೇಯ ನಾಟಕಗಳಲ್ಲಿ (ಅಂಗದನ ಪಾತ್ರ) ಚಿಕ್ಕಪುಟ್ಟ ಪಾತ್ರಗಳನ್ನು ಮಾಡುತ್ತ ಮುಂದೆ ಎಚ್. ಕೆ. ರೆಡ್ಡಿ ಕಂಪನಿಯಲ್ಲಿ ಒಂದು ವರ್ಷದ ಅನುಭವ. ಈ ರೆಡ್ಡಿ ಕಂಪನಿ ಸು. 1958ರಲ್ಲಿ ದಾವಣಗೇರಿಗೆ ಬಂದಿತು. ಅಲ್ಲಿ ಧರ್ಮದೇವತೆ ಎಂಬ ನಾಟಕ ನಡೆಯಿತು. ಹಾಗೇ ನಾಟಕದಲ್ಲಿ ಅಭಿನಯಿಸುತ್ತ ದಾವಣಗೇರಿಯ ಕುಲಕರ್ಣಿಯವರ ಹತ್ತಿರ ನೃತ್ಯಾಭ್ಯಾಸ ಪ್ರಾರಂಭಮಾಡುತ್ತಾಳೆ.

ಈ ರಂಗಭೂಮಿ ನಟಿಯರು ಯಾವದೇ ಒಂದೇ ಕಂಪನಿಗೆ ಬದ್ಧರಾದವರಲ್ಲ ಏನಾದರೂ ತಂಟೆ ತಕರಾರುಗಳು ಬಂದಾಗ ಸಂಬಳ ಕಡಿಮೆಯೆನಿಸಿದಾಗ ಒಂದು ಕಂಪನಿಯಿಂದ ಇನ್ನೊಂದು ಕಂಪನಿಗೆ ಹೋಗುವುದು ಅನಿವಾರ್ಯ. ಅದೇ ರೀತಿ ಈ ಲಲಿತಾ ದಾವಣಗೇರಿ ಕವಲಿ ಚನ್ನಬಸವಪ್ಪನವರ ಕಂಪನಿಯಲ್ಲಿ 'ಕೊಂಡು ತಂದ ಗಂಡ', ನಾಟಕದ ಭವಾನಿ ಪಾತ್ರ ಒಳ್ಳೆಯ ಹೆಸರನ್ನು ತಂದುಕೊಟ್ಟಿತು. ತದನಂತರ ಎಚ್.ಕೆ. ಯೋಗಾನರಸಿಂಹನವರ ಕಂಪನಿಯಲ್ಲಿ ಕಳ್ಳಭಟ್ಟಿ, ಕನ್ಯಾಬಲಿ, ಅನೇಕ ನಾಟಕಗಳು ಹೆಚ್ಚು ಪ್ರಚಾರವನ್ನು ಮಾಡಿದವು.

1976–77ರಲ್ಲಿ ಧುತ್ತರಗಿ ಅವರ ಕಂಪನಿಯಲ್ಲಿ ಎರಡು ವರ್ಷ ಅನುಭವ, ಸಂಪತ್ತಿಗೆ ಸವಾಲ್, ನೆಲಭಲ 1981 ರಿಂದ 1990ರವರೆಗೆ ಆರ್. ಆರ್. ಅರಿಶಿನಗುಡಿಯವರ ಹೊಳೆಹುಚ್ಚೇಶ್ವರ ನಾಟ್ಯಸಂಘದಲ್ಲಿ. ಸಂಗೊಳ್ಳಿ ರಾಯಣ್ಣ, ಸಮಾಜಕ್ಕೆ ಸವಾಲು, ಬಸ್ ಕಂಡಕ್ಟರ್, ರೀತಿ ತಪ್ಪಿದರೂ ಸೀತಿ

---

[38] 17–11–2010 ಗುಳೇದಗುಡ್ಡದಲ್ಲಿ ಸಂದರ್ಶನ ಮಾಡಿದ್ದು.

ಬಿಟ್ಟಿಲ್ಲ, ಪಾಪದ ದೇಹ ಪುಣ್ಯದ ಜೀವ, ಹೀಗೆ ಹಲವಾರು ನಾಟಕಗಳಲ್ಲಿ ನಾಯಕಿಯ ಪಾತ್ರಕ್ಕೆ ಜೀವ ತುಂಬಿದಳು. ಈ ನಾಟಕಗಳು ಒಳ್ಳೆಯ ಕಲೆಕ್ಷನ್ ಕೂಡಾ ತಂದುಕೊಟ್ಟವು.

ಮುಂದೆ ರಂಗಭೂಮಿಯಿಂದ ಚಿತ್ರಜಗತ್ತಿಗೆ ಕಾಲಿಟ್ಟ ನಟಿಯರಲ್ಲಿ ಇವಳೂ ಒಬ್ಬಳು. ರಂಗನಾಯಕಿ ಚಿತ್ರದಲ್ಲಿ ಸಹನಟಿಯಾಗಿ ನಟಿಸಿದ್ದಾರೆ. ಮುನಿಯನ ಮಾದರಿ, ಚೆಲ್ಲಿದರಕ್ತ, ಹೊಸಬೆಳಕು ಮುಂತಾದ ಚಿತ್ರಗಳಲ್ಲಿ ಪೋಷಕ ನಟಿಯಾಗಿ ಮಿಂಚಿದ್ದಾಳೆ. ಆದಾಗ್ಯೂ ರಂಗಭೂಮಿ ನನಗೆ ಹೆಚ್ಚು ಖುಷಿಕೊಟ್ಟದೆ ಎಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾಳೆ. ನಾಟಕಕ್ಕೆ ಬೇಕಾಗುವ ರಂಗಗೀತೆಗಳನ್ನು ಇವಳೇ ಹಾಡುತ್ತಿದ್ದಳು. ಜಮಖಂಡಿಯಲ್ಲಿ ರೋಟರಿಕ್ಲಬ್ ವತಿಯಿಂದ ಕಲಾಜ್ಯೋತಿ ಪ್ರಶಸ್ತಿಯೂ ಇವಳಿಗೆ ಸಿಕ್ಕಿದೆ.

1976ರಲ್ಲಿ "ಲಲಿತ ಕಲಾ ನಾಟ್ಯಸಂಘ" ಇವರ ಮನೆಯವರೆಲ್ಲಾ ಕೂಡಿಕೊಂಡು ಒಂದು ಕಂಪನಿ ಮಾಡಿದ್ದರು ಅಕ್ಕ, ಅಕ್ಕನಗಂಡ ಮುದುಕಪ್ಪ ಬಿಜಾಪೂರದಲ್ಲಿ ಸ್ಟೇಜ್ ಮೇಸ್ತ್ರಿಯಾಗಿದ್ದರು. ಇವರ ಅಕ್ಕ ಶಾಂತಮ್ಮನವರ ಮಕ್ಕಳಾದ ಲಕ್ಷ್ಮಿ ಡಾವಣಗೇರಿ, ಭಾರತಿ ಡಾವಣಗೇರಿ ಅವರೂ ಕಲೆಯನ್ನು ನಂಬಿದವರು. ಮೂರು ವರ್ಷ ಕಂಪನಿ ನಡೆಸಿದರು. ಮುಂದೆ ಕಂಪನಿ ನಿಂತೋಯ್ತು ಮತ್ತೆ 1993 ರಿಂದ ಆ ಮಂಡಳಿಯನ್ನು ಪ್ರಾರಂಭಮಾಡಿಕೊಂಡು ಯಾವಾಗಲಾದರೊಮ್ಮೆ ಕಾರ್ಯಕ್ರಮ ಮಾಡಿಕೊಂಡು ಹೋಗುತ್ತಾರೆ.[39]

**ಸುನಂದಾ ಹೊಸಪೇಟ :**

ಹಳತು ಹೊಸತರ ಕೊಂಡಿ ಈ ಸುನಂದಾ ಹೊಸಪೇಟ ಕಲಾವಿದರ ಕುಟುಂಬದಲ್ಲಿ ಹುಟ್ಟಿ ಬೆಳೆದ ಸುನಂದಾಳ ತಾಯಿ ಸರಸ್ವತಮ್ಮ ಹೊಸಪೇಟ ಕೂಡಾ ಒಬ್ಬ ಶ್ರೇಷ್ಠ ನಟಿಯಾಗಿದ್ದವಳು. ಸುನಂದಾಳ ಅಜ್ಜ ಅಂದರೆ ಇವಳ ತಾಯಿಯ ತಂದೆ ಹನುಮಂತಪ್ಪ ದೊಡ್ಡಾಟ ಕಲಾವಿದ. ಸುನಂದಾಳ ಚಿಕ್ಕಮ್ಮಂದಿರು ಲಕ್ಷ್ಮಿ ಹೊಸಪೇಟ ರೇಣುಕಾ ಹೊಸಪೇಟ ಅವರೂ ಬಣ್ಣದ ಬದುಕಿಗೆ ತೆರೆದುಕೊಂಡವರು. ಸುನಂದಾಳ ಸಹೋದರಿ ವಸುಂದರಾ ಹೊಸಪೇಟ ಅವಳೂ ಕೂಡಾ ಬಣ್ಣದ ಬದುಕನ್ನೆ ನಂಬಿದವಳು. ಹೀಗಾಗಿ ಸುನಂದಾಳ ರಕ್ತದಲ್ಲಿ ಸಹಜವಾಗಿ ಆ ಬಣ್ಣ ಹರಿದು ಬಂದಿರಲಿಕ್ಕೆ ಬೇಕು. ಆದರೂ ಈ ಹುಡುಗಿ ಮನಸ್ಸಿಲ್ಲದ ಮನಸ್ಸಿನಿಂದ ಈ ಕ್ಷೇತ್ರಕ್ಕೆ ಬಂದವಳು. ಓದಿ ಯಾವದಾದರೊಂದು ಸರಕಾರಿ ನೌಕರಿ ಹಿಡಿಯಬೇಕೆಂಬ ಮಹಾದಾಸೆ ಅವಳದಾಗಿತ್ತು. ತಾನೊಂದು ಬಗೆದರೆ ದೈವ ಬೇರೊಂದು ಬಗೆಯಿತು ಎಂಬಂತೆ ಮನೆಯ ಆರ್ಥಿಕ ಪರಿಸ್ಥಿತಿ ನೆಟ್ಟಗಿಲ್ಲದ್ದರಿಂದ ತನ್ನ

---

39 9-7-2009 ರಂದು ಚಿಕ್ಕ ಬಿದರಕಲ್ ಚನ್ನನಾಯಕನಪಾಳ್ಯ ಬೆಂಗಳೂರಿನಲ್ಲಿ ಸಂದರ್ಶನ ಮಾಡಿದ್ದು.

9ನೇ ವಯಸ್ಸಿನಲ್ಲಿ ಈ ಬಣ್ಣದ ಬದುಕಿಗೆ ದುಮುಕಬೇಕಾಯ್ತು. "ವೀರೇಶ್ವರ ನಾಟ್ಯ ಸಂಘ ಗದಗ" ಈ ಮಂಡಳಿಯಲ್ಲಿ ತಾಳುತಪ್ಪಿದ ಬದುಕು, ಬದುಕು ಬಂಗಾರವಾಯಿತು. ಈ ನಾಟಕಗಳಲ್ಲಿ ಬಾಲಪಾತ್ರ ಮಾಡಿದ ಈ ಹುಡುಗಿ ಕೆ.ಬಿ.ಆರ್. ಕಂಪನಿಯಲ್ಲಿ 'ಗುಣಸಾಗರಿ' ನಾಟಕದಲ್ಲಿ ಬಾಲಗುಣಶೇಖರ' ಪಾತ್ರವನ್ನು ಮಾಡಿ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರಳಾದಳು. ಆಗ ಕಂಪನಿ ದಾವಣಗೇರಿಯಲ್ಲಿತ್ತು. ತಾಯಿ ಸರಸ್ವತಮ್ಮ ಹಾಗೂ ಚಿಂದೋಡಿ ಲೀಲಮ್ಮನವರು ಅಭಿನಯದ ಅ. ಆ. ಇ. ಈ ಯನ್ನು ಕಲಿಸಿಕೊಟ್ಟರು.

14ನೇ ವಯಸ್ಸಿನಲ್ಲಿ ಬಳ್ಳಾರಿ ವೆಂಕಣ್ಣರೆಡ್ಡಿ ಅವರು ಬರೆದ "ತಪ್ಪು ನನ್ನದಲ್ಲ' ನಾಟಕದಲ್ಲಿ ಸುನಂದಾಳ ಪಾತ್ರವನ್ನು ಬಹಾಽಳ ಜನ ಮೆಚ್ಚಿಕೊಂಡರು. ಆ ನಾಟಕ ಇವಳಿಗೊಂದು ಸ್ಪೂರ್ತಿಯ ಸೋಪಾನವಾಯ್ತು. ಇಷ್ಟವಿಲ್ಲದ ಈ ಕ್ಷೇತ್ರವನ್ನು ಇಷ್ಟಪಟ್ಟೆ ಎನ್ನುತ್ತಾರೆ ಸುನಂದಾ ಹಾಗೂ ಹೀಗೂಮಾಡಿ ಪಿ.ಯು.ಸಿ. ವರೆಗೆ ಶಿಕ್ಷಣ ಮುಗಿಸಿದಳು. ಏನಾದರೂ ಮಾಡಬೇಕು ಹೊಸದನ್ನು ಸಾಧಿಸಬೇಕೆಂಬ ಛಲ ಇವಳದು. ಅದಕ್ಕಾಗಿಯೇ ವಿಭಿನ್ನ ರೀತಿಯ ಪಾತ್ರಗಳನ್ನು ಮಾಡಿದಳು. "ಗುರುಪಂಚಾಕ್ಷರಿ ನಾಟ್ಯ ಸಂಘ ಗದಗ" (ಬ್ರಹ್ಮ ಕಂಪನಿ)ಯಲ್ಲಿ ಗೌಡ್ರಗದ್ಲ ನಾಟಕದಲ್ಲಿ ಗೌಡನ ಪಾತ್ರ ನೀನು ಸಹುಕಾರನಾಗು ನಾಟಕದಲ್ಲಿ 'ಚಂದ್ರಮೌಳಿ' ಪಾತ್ರಮಾಡಿದರೆ ಗಡಸು ಧ್ವನಿಯ ಈ ಸುನಂದಾಳನ್ನು ಹೆಣ್ಣು ಎಂದು ಗುರುತಿಸುವುದೆ ಕಷ್ಟವಾಗುತ್ತಿತ್ತಂತೆ.

ಮುಂದೆ "ಬನಶಂಕರಿ ಕೃಪಾಪೋಷಿತ ನಾಟ್ಯಸಂಘ" ಎಂಬ ಮಂಡಳಿಯನ್ನು ಹುಟ್ಟುಹಾಕಿದಳು. ನಟ, ನಟಿಯರ ಸಮಸ್ಯೆಯಿಂದ ಬಹುಬೇಗನೆ ಸಂಘ ಕ್ಲೋಜ್ ಆಯ್ತು.

ತಾಯಿಯಂತೆ ಚಿಕ್ಕಮ್ಮರಂತೆ, ಹಣೆಬರಹವನ್ನು ನಂಬಿ ಕೂಡ್ರದೆ ಅಥವಾ ಸರಕಾರವನ್ನೋ ಇನ್ನಾರನ್ನೋ ದೂರದೆ, ಪ್ರಯತ್ನಕ್ಕೆ ಫಲ ಸಿಕ್ಕೆ ಸಿಗುತ್ತದೆಂದು ನಂಬಿದವಳು. ಬದಲಾವಣೆಯ ಗಾಳಿಗೆ ಮೈಯೊಡ್ಡಿದವಳು.

ಸೂಡಿ ಶೇಖರಯ್ಯನವರ ಕಂಪನಿಯಲ್ಲಿ 'ಬಂಗಾರದ ಗಂಡು' ನಾಟಕದ ದ್ರಾಕ್ಷಾಯಿಣಿ ಪಾತ್ರ, ಕುಂಟೋಜಿ ನಾಗಯ್ಯನವರ ಮಂಡಳಿಯಲ್ಲಿ "ಕೈಲಾಗದ ಗಂಡ ಕೈಲಾಸ ಕಂಡ" ಈ ನಾಟಕದಲ್ಲಿ ಜಯಶ್ರೀ ಪಾತ್ರ ಹೀಗೆ ಹಲವು ನಾಟಕಗಳಲ್ಲಿ ಅಭಿನಯಿಸಿದ ಅನುಭವ ಇವಳದು. ಆದರೂ "ಪುರುಷ ಪಾತ್ರದಲ್ಲಿ ಇರುವ ಥ್ರಿಲ್ ಸ್ತ್ರೀಪಾತ್ರದಲ್ಲಿ ಇರುವುದಿಲ್ಲ ಬಿಡ್ರಿ" ಎನ್ನುವಾಗ ಗೌಡನ ಗತ್ತು ಇರಲೇಬೇಕು.

ವೃತ್ತಿರಂಗಭೂಮಿ ಗ್ರಾಮೀಣ ರಂಗಭೂಮಿ, ಹಾಗೂ ಕಿರುತೆರೆಯಲ್ಲಿ ನಟಿಸಿದ ಪಿನೂತನ ಅನುಭವ ಇವಳದು. ವೃತ್ತಿರಂಗಭೂಮಿಯಲ್ಲಿ ಇರುವ ತೃಪ್ತಿ ಇನ್ನಾವುದರಲ್ಲಿ ಇಲ್ಲ ಎನ್ನುವ ಸುನಂದಾ ಸುಮಾರು 30 ಸಿರಿಯಲ್‌ಗಳಲ್ಲಿ ನಟಿಸಿದ್ದಾಳೆ. ಅಂತರಾಳ, ರಾಘವೇಂದ್ರ ವೈಭವ, ಕಿನ್ನರಿ ಎಂಥಾ ಲೋಕವಯ್ಯಾ, ಹೃದಯಸಾಕ್ಷಿ, ಮಹಾನವಮಿ ಹೀಗೆ ಸಾಗುತ್ತವೆ ಧಾರಾವಾಹಿಗಳ ಸಾಲು.

ಶೃತಿ ಹಾಗೂ ಸ್ವಾತಿ ಇಬ್ಬರು ಮಕ್ಕಳು. ಈರ್ವರಿಗೂ ಒಳ್ಳೆಯ ಶಿಕ್ಷಣ ಕೊಡುವುದು ಮೊದಲ ಗುರಿ ನಂತರ ಅವರಿಷ್ಟದಂತೆ ಅವರೇನಾದರೂ ಆಗಲಿ ಎಂಬ ಹೃದಯವಂತಿಕೆ ಸುನಂದಾಳದು. ಪತಿ ಮಲ್ಲಿಕಾರ್ಜುನ ಮಲ್ಲಪ್ಪಗೌಡರ ಹಾಗೂ ಮಕ್ಕಳ ಸಹಕಾರ ನನಗಿದೆ, ಕಲೆಯನ್ನು ಕಲಾವಿದರನ್ನು ಗೌರವಿಸುವ ಮನಸ್ಸು ಅವರದು ಎಂದು ತುಂಬುಹೃದಯದಿಂದ ಒಪ್ಪಿಕೊಳ್ಳುವ ಈ ಭಾಗ್ಯ ಅದೆಷ್ಟು ಜನರಿಗಿದೆ.[40]

[40] 21-11-2010 ರಂದು ಹುಬ್ಬಳ್ಳಿಯಲ್ಲಿ ಸಂದರ್ಶನ ಮಾಡಿದ್ದು.

# 5. ಇಡೀ ಕುಟುಂಬವನ್ನೇ ತೊಡಗಿಸಿಕೊಂಡವರು

**ಪುಷ್ಪಮಾಲಾ ಅಣ್ಣಿಗೇರಿ (ಹುಬ್ಬಳ್ಳಿ) :**

ಮೂಲತಃ ಆದವಾನಿಯವರಾದ ಪುಷ್ಪಮಾಲಾ, ನಾಗರತ್ನಮ್ಮ ಹಾಗೂ ಲಕ್ಷ್ಮಿಸೆಟ್ಟರ ಮಗಳಾಗಿ ಹುಟ್ಟಿದಳು. ಕಲಾವಿದರ ಕುಟುಂಬದಲ್ಲಿ ಜನಿಸಿದ ಇವರಿಗೆ ಕಲೆ ಸಹಜವಾಗಿ ಒಲಿದಿತ್ತು. ಅಪ್ಪ ಅವ್ವನ ಗರಡಿಯಲ್ಲಿ ಪಳಗಿದ ಈ ಹುಡುಗಿ ತನ್ನ ಏಳನೇಯ ವಯಸ್ಸಿನಲ್ಲಿ ಸತ್ಯವಾನ ಸಾವಿತ್ರಿ ನಾಟಕದಲ್ಲಿ ನಾರದನ ಪಾತ್ರದಲ್ಲಿ ಮಿಂಚಿದಳು.

ಮುಂದೆ "ಎಡೇಯೂರು ಸಿದ್ದಲಿಂಗೇಶ್ವರ ಪಡೇಸೂರ" ಇವರ ಕಂಪನಿಯಲ್ಲಿ, ಹಡೆದವ್ವ ಅತ್ತಿಸೊಸೆ, ಬೂದಿಮುಚ್ಚಿದ ಕೆಂಡ, ತಂಗಿಮನೆ, ಬಾಳುಬೆಳಗಿದ ಸತಿ, ಮನೆಗೆದ್ದ ಮಡದಿ ಹೀಗೆ ಹತ್ತು ಹಲವಾರು ನಾಟಕಗಳಲ್ಲಿ ನಟಿಸಿದ ಅನುಭವ ಇವರದು. ಒಟ್ಟು 8 ವರ್ಷದ ವರೆಗೆ ಈ ಕಂಪನಿಯಲ್ಲಿ ದುಡಿದರು. 1968ರಲ್ಲಿ ಕಂಪನಿ ಬಂದ್ ಆದಮೇಲೆ ಎಚ್. ಎನ್. ಹೂಗಾರರ ಸತಿಯ ಸೌಭಾಗ್ಯ ನಾಟಕದಲ್ಲಿ ಎರಡನೇಯ ಹಿರೋಯಿನ್ ಆಗಿ ನಟಿಸಿದರು.

ಮುಂದೆ 1971ರಲ್ಲಿ ಬೆಳವಣಿಕೆ ಕಂಪನಿಯಲ್ಲಿ ಸೇವೆ, ಅಬ್ದುಲ್‌ಸಾಬ ಅಣ್ಣಿಗೇರಿ ಎಂಬ ಹಾಸ್ಯಕಲಾವಿದರ ಪರಿಚಯ, ಪರಿಚಯ ಸ್ನೇಹಕ್ಕೆ ತಿರುಗಿತು. ಮುಂದೆ ಪ್ರೀತಿಯ ಧಾರೆಯಾಗಿ ಹರಿದು "ಸತಿ ಪತಿಗಳಲ್ಲಿ ಒಂದಾದ ಭಕ್ತಿ ಹಿತವಪ್ಪದು ಕಾಣಾ" ಎಂಬ ಶರಣರ ವಾಣಿಯಂತೆ ಇವತ್ತಿಗೂ ಕೂಡಾ ಈ ಜೋಡಿ ಬದುಕು ಎಂಬ ಜಟಕಾ ಬಂಡಿಯನ್ನು ಸಂತಸದಿಂದ ಎಳೆದುಕೊಂಡು ಹೊರಟಿದೆ. ಬಲು ಅಪರೂಪದ ಜೋಡಿ ಇವರದು. ವೃತ್ತಿರಂಗಭೂಮಿಯಲ್ಲಿ ಈ ರೀತಿ ಅನ್ಯೋನ್ಯತೆಯಿಂದ ಸಂಸಾರವೆಂಬ ಸಾಗರದ ದಡವನ್ನು ಮುಟ್ಟಿದವರನ್ನು ನಾವು ದೀಪ ಹಚ್ಚಿ ಹುಡುಕಬೇಕು. ಪ್ರೇಮಾ ಬದಾಮಿಯವರು ಏರ್ಪಡಿಸಿದ "ಆದರ್ಶ ದಂಪತಿಗಳು" ಪುರಸ್ಕಾರ ಪಡೆದಿದ್ದಾರೆ.

ಬೆಳವಣಕಿ ಕಂಪನಿಯಲ್ಲಿ ಎರಡು ವರ್ಷ ದುಡಿದ ಪುಷ್ಪಮಾಲಾ ಮತ್ತೆ ಸುಳ್ಳದ ದೇಸಾಯಿ ಕಂಪನಿ, ತದನಂತರ ಗದುಗಿನ ವಿರೇಶ ಕಂಪನಿಯಲ್ಲಿ ಬಣ್ಣ ಹಚ್ಚಿದರು ಪುಷ್ಪಮಾಲಾ ಹೆಚ್ಚಾಗಿ ಭಕ್ತಿ ಪ್ರಧಾನ ನಾಟಕಗಳಲ್ಲಿ ಅದರಲ್ಲೂ ರೇಣುಕಾ ಯಲ್ಲಮ್ಮ ನಾಟಕದಲ್ಲಿ ಯಲ್ಲಮ್ಮನ ಪಾತ್ರಕ್ಕೆ, ಹೇಮರೆಡ್ಡಿ ಮಲ್ಲಮ್ಮ ನಾಟಕದಲ್ಲಿ ಮಲ್ಲಮ್ಮನ ಪಾತ್ರಕ್ಕೆ ಇವರೇ ಬೇಕು ಆ ಪಾತ್ರಕ್ಕೆ ಕಳೇ ಏರುತ್ತಿತ್ತು.

ಮುಂದೆ ಯಂಕಂಚಿ ಜೋಶಿ ಕಂಪನಿ. ಜೇವರಗಿ ರಾಜಾನ ಕಂಪನಿಯಲ್ಲಿ ಅನುಭವ. ಹಿರೋಯಿನ್ ಪಾತ್ರದಲ್ಲಿಯೂ ಇವರೇನೂ ಹಿಂದೆ ಬಿದ್ದಿಲ್ಲ. ನನ್ನವರು ನನ್ನ ಹಡೆದವರು ನಾಟಕದಲ್ಲಿ ಚೆನ್ನಿಯ ಪಾತ್ರ, ಚಿನ್ನದ ಗೊಂಬೆ ನಾಟಕದಲ್ಲಿ ಶಾರದಾಳ ಪಾತ್ರಕ್ಕೆ ಇವರೇ ಬೇಕು. ಅಲ್ಲದೆ ಈ ಪಾತ್ರಗಳು ಇವರಿಗೆ ಹೆಚ್ಚು ಖುಷಿಯನ್ನು ತಂದುಕೊಟ್ಟಿವೆ.

ಬೆಂಗೇರಿ ಬಸವರಾಜ ಅವರ ವಿಶ್ವಭಾರತಿ ರಮ್ಯ ನಾಟಕ ಸಂಘ ಶಿರೂರ ಇವರ ಜಗಜ್ಯೋತಿ ಬಸವೇಶ್ವರ ನಾಟಕದ ಅಕ್ಕಮಹಾದೇವಿಯ ಪಾತ್ರಕ್ಕೆ ಇವರೇ ಬೇಕು.

ಬಾಳ ಸಂಗಾತಿಯ, ಅದೆಷ್ಟೋ ಪ್ರೇಕ್ಷಕರ ಮನಗೆದ್ದ ಈ ನಟಿಗೆ ಸಂಗೀತ ದೈವದತ್ತವಾಗಿ ಒಲಿದು ಬಂದಿದೆ. ರಂಗಗೀತೆಗಳನ್ನು ಸುಶ್ರಾವ್ಯವಾಗಿ ಹೇಳುತ್ತಾರೆ. ನಮಗೆ ನಮ್ಮ ಕೆಲಸದಲ್ಲಿ ಶ್ರದ್ಧೆಬೇಕು. ಇವತ್ತು ಕಲೆಗೆ ಬೆಲೆ ಇಲ್ಲ ವಶೀಲಿಗೆ ಬೆಲೆ ಇದೆ. ಬೇಕಾದರೆ ಸರಕಾರ ನಮ್ಮನ್ನು ಗುರ್ತಿಸಲಿ ಎಂಬ ಸ್ವಾಭಿಮಾನದ ಮಾತುಗಳನ್ನು ಕೇಳಿದಾಗ ಹೆಮ್ಮೆ ಎನಿಸಿತು. ವಶೀಲಿ ಜಾಸ್ತಿ ನಸೀಬ ಇಲ್ಲ ಎನ್ನುವಂತಾಗಿದೆ ಇವರ ಸ್ಥಿತಿ. ಇನ್ನೂ ಬಾಡಿಗೆ ಮನೆಯಲ್ಲೇ ಕಾಲತಳ್ಳುತ್ತಿದ್ದಾಳೆ. ಮಗಳು ಮದುವೆಯಾಗಿ ಗಂಡನ ಮನೆಯಲ್ಲಿದ್ದಾಳೆ. ಮಗ ಅವನಿಗೂ ಮದುವೆಯಾಗಿದೆ. ಮಗನೊಂದಿಗೆ ಈ ಚಿಕ್ಕ ಕುಟುಂಬ ನೆಮ್ಮದಿಯ ದಿನಗಳನ್ನು ಕಳೆಯುತ್ತಲಿದೆ.

ಅಪ್ಪ, ಅಮ್ಮ, ಇವರ ಚಿಕ್ಕಮ್ಮ, ಚಿಕ್ಕಮ್ಮನ ಮಗಳು ಸಾವಿತ್ರಿ ಬಳ್ಳಾರಿ, ಅಂಜಲಿ, ವಂದನಾ ಹೀಗೆ ಇಡೀ ಕುಟುಂಬವೇ ರಂಗಭೂಮಿಗಾಗಿ ದುಡಿದವರು. ಮುಂದಿನ ಪೀಳಿಗೆ ಮಾತ್ರ ಬಣ್ಣ ಹಚ್ಚುವುದು ಬೇಡ ಇಲ್ಲಿಗೆ ಇದು ಮುಕ್ತಾಯವಾಗಲಿ ಎಂಬ ಆಶೆ ಇವಳದು.

ಅಕ್ಯಾಡಮಿ ಪ್ರಶಸ್ತಿ ಎಂ.ಪಿ ಪ್ರಕಾಶ ಅವರ ರಂಗಭಾರತಿ ಪ್ರಶಸ್ತಿ ಸಿಕ್ಕಿವೆ. ಈಗಲೂ ಈ ಜೋಡಿ ಇನ್ನೂ ಬಣ್ಣ ಹಚ್ಚುತ್ತಾರೆ. ಬಣ್ಣ ಹಚ್ಚುದು ಬಿಟ್ರ ನಮಗ ಏನ ಗೊತ್ತೈತ್ರಿ ಎನ್ನುವ ಪುಷ್ಪಮಾಲಾ ಕಂಪನಿ ನಾಟಕಗಳಲ್ಲಿ ಅಮಚೂರಿನಲ್ಲಿ ಕರೆ ಬಂದರೆ ಖುಷಿಯಿಂದ ಒಪ್ಪಿಕೊಳ್ಳುತ್ತಾರೆ.[41]

**ಪರಿಮಳಾ ಕಲಾವಂತ (ಹುಬ್ಬಳ್ಳಿ) :**

ಉತ್ತರ ಕರ್ನಾಟಕಕ್ಕೆ ಅಷ್ಟೇ ಅಲ್ಲ, ನಾಡಿನಾದ್ಯಂತ ಹೆಸರುವಾಸಿಯಾದ. ಅದ್ಭೂರಿ ರಂಗಪರಿಕರಗಳಿಂದ ಉತ್ತುಂಗಕ್ಕೇರಿದ ಅದ್ಭುತ ನಟನಾ ಸಾಮರ್ಥ್ಯವನ್ನು ಹೊಂದಿದ ಶಿರಹಟ್ಟಿ ವೆಂಕೋಬರಾಯರ ಮರಿಮೊಮ್ಮಗಳು ಈ ಪರಿಮಳಾ ಕಲಾವಂತ. ಹೆಸರೇ ಸೂಚಿಸುವಂತೆ ಕಲಾವಂತರ ಮನೆತನ ಇವರದು. ಅಜ್ಜ, ಅಪ್ಪ, ಅಮ್ಮ ದೊಡ್ಡಮ್ಮ, ಸುಲೋಚನಾ, ದೊಡ್ಡಪ್ಪ, ಬಸನಗೌಡ ಪಾಟೀಲ, ಚಿಕ್ಕಮ್ಮ ಭಾರತಿ ಶಿರಹಟ್ಟಿ ಹೀಗೆ ಇಡೀ ಕುಟುಂಬವೇ ಬಣ್ಣದ ಬದುಕಿಗೆ ಒಡ್ಡಿದವರು. ಆ ಮನೆತನದ ಒಂದು ಕುಡಿ ಈ ಪರಿಮಳಾ. ತನ್ನ 5ನೇ ವರ್ಷದಲ್ಲಿ ಬಣ್ಣಹಚ್ಚಿಕೊಂಡ ಪರಿಮಳಾ ಒಳ್ಳೆಯ ಗಾಯಕಿಯೂ ಕೂಡಾ. ಎಂ.ಎ.ದಲ್ಲಿ ಸಂಗೀತ ಶಿಕ್ಷಣವನ್ನು ಪಡೆದ ಇವರು ಮನಸ್ಸು ಮಾಡಿದ್ದರೆ, ಸಂಗೀತ ಶಿಕ್ಷಕಿಯಾಗಿ ನೌಕರಿ ಹಿಡಿದು ಆರಾಮಾಗಿ ಜೀವನ ಸಾಗಿಸಬಹುದಿತ್ತು. ಆದರೆ ಪೂರ್ವಜರಿಂದ

---

[41] 28-6-2009 ಹುಬ್ಬಳ್ಳಿಯ ಗಣೇಶ ಪೇಟೆಯ ಅವರ ಮನೆಯಲ್ಲಿ ಸಂದರ್ಶನ ಮಾಡಿದ್ದು.

ಬಳುವಳಿಯಾಗಿ ಬಂದ ನಟನೆಯಿಂದ ದೂರ ಸರಿಯಲು ಮನಸ್ಸು ಒಪ್ಪಿರಲಿಕ್ಕಿಲ್ಲ. ನಟನೆಗೆ ಅರ್ಪಿಸಿಕೊಂಡ ಈ ನಟಿ ಸೂಡಿ ಶೇಖರಯ್ಯ ಭಾರತಿನಾಟ್ಯ ಸಂಘ, ಜಿ. ವಿ. ಕೃಷ್ಣಮಿತ್ರಮಂಡಳಿ ಬೆಂಗಳೂರು ಕೆ.ಬಿ.ಆರ್. ಡ್ರಾಮಾ ಹಾಗೂ ಎಸ್. ಬಸವರಾಜ ಅವರ ಗುಡಗೇರಿ ಕಂಪನಿಯಲ್ಲಿ ತಾಳಿತಕರಾರು, ಸತ್ಯಸತ್ತಿತು, ಗೌಡ್ರಗಂಗಿ, ರಕ್ತರಾತ್ರಿ ಕುರುಕ್ಷೇತ್ರ ಹೀಗೆ ಹತ್ತು ಹಲವು ನಾಟಕಗಳಲ್ಲಿ ವಿಭಿನ್ನ ಪಾತ್ರದಲ್ಲಿ ಮಿಂಚಿದ ಈ ನಟಿ, ರೈತನ ಮಕ್ಕಳು ನಾಟಕದಲ್ಲಿ ಪುಷ್ಪನ ಪಾತ್ರಕ್ಕೆ ಇವರಿದ್ದರೆ ಆ ನಾಟಕ ನಡೆಯುತ್ತಿತ್ತು. ಹೆತ್ತತಾಯಿ ನಾಟಕದಲ್ಲಿ ರತ್ನಳ ಪಾತ್ರಕ್ಕೆ ಇವಳೇ ಬೇಕು. ಛತ್ರಪತಿ ಶಿವಾಜಿ ನಾಟಕದಲ್ಲಿ ಜೀಜಾಬಾಯಿ ಪಾತ್ರಕ್ಕೂ ಇವಳೇ ಬೇಕು. ಗುಡಗೇರಿ ಕಂಪನಿಯಲ್ಲಿ ಹೆಚ್ಚು ಕಲೆಕ್ಷನ್ ತಂದುಕೊಟ್ಟ ಪಾತ್ರ ರೈತನ ಮಕ್ಕಳು ನಾಟಕದ ಪುಷ್ಪಳ ಪಾತ್ರ

ರಂಗಭೂಮಿಯಲ್ಲಿ ಅನಕ್ಷರಸ್ಥರ ಸಂಖ್ಯೇನೆ ಹೆಚ್ಚು. ಎಂ.ಎ. ಮ್ಯೂಜಿಕ್ ಪದವಿ ಇವರಿಗೆ ಆಸರೆಯಾಗಿದೆ. ಅದೆಷ್ಟೋ ರಂಗ ನಾಟಕಗಳನ್ನು ಆಡಿಯೋ ಕ್ಯಾಸೆಟ್ ಮಾಡಿದ್ದಾರೆ. ನೀನಾದರಾಗವ್ವ ಗರತಿ, ಹುಲಿಗೆಮ್ಮ, ಬನಶಂಕರಿ ಮಹಾತ್ಮೆ ಮುಂತಾದವು.

ಕಲೆ ನಶಿಸಿ ಹೊರಟಿದೆ. ಕೈ ಬೆರಳಿನಷ್ಟೇ ಕಂಪನಿಗಳು ಉಳಿದುಕೊಂಡಿವೆ. ರಂಗಭೂಮಿ ನಟಿಯರನ್ನು ನೋಡುವ ದೃಷ್ಟಿಕೋನ ಬದಲಾಗಬೇಕು. ಒಂದು ದಿನ ಇವಳು ಶಾಲೆಗೆ ತಡವಾಗಿ ಹೋದರೆ, ಯಾಕೆ ಹಾಡಾಕ, ಕುಣಿಯಾಕ ಹೋಗಿದ್ದಿ ಏನ ಅಂತ ಮಾಸ್ತರ ಕೇಳುತ್ತಿದ್ದರಂತೆ. ಅದಕ್ಕೆ ನೋಡ್ರಿ ಇರೋ ಒಬ್ಬ ಮಗಳ್ನ ಹಮಾಲಗೆ ಕೊಟ್ಟ ಮದ್ವಿ ಮಾಡ್ತಿನಿ ಆದರ ಅವಳು ಈ ದಾರಿಗೆ ಬರೂದು ಬ್ಯಾಡ ಎಂದು ಹೇಳುವಲ್ಲಿ ಏನೋ ವಿಷಾದ ನೋವು. ಈ ರಂಗಭೂಮಿ ಸುಖಕ್ಕಿಂತ ದುಃಖನೆ ಹೆಚ್ಚು ಕೊಟ್ಟಿದೆ ಎನಿಸಿತು. ಇವರ ಬದುಕಿಗೆ ಭದ್ರತೆ ಎನ್ನುವದು ಇಲ್ಲ ನೋಡಿ, ಯಾವದಾದರೂ ಒಬ್ಬ ಸರಕಾರಿ ನೌಕರದಾರ ನಿವೃತ್ತಿ ಹೊಂದಿದರೆ ಬದುಕಿನ ಕೊನೆಯ ದಿನದವರೆಗೂ ಅವನಿಗೆ ಪಿಂಚಣಿ ಆಧಾರವಾಗಿರುತ್ತದೆ. ಇವರಿಗೇನಿದೆ? ಉಡಿಯಲ್ಲಿ ಕೆಂಡವನ್ನು ಕಟ್ಟಿಕೊಂಡು, ನಗೆಯ ಮುಖವಾಡವನ್ನು ಹಾಕುವುದು ಅನಿವಾರ್ಯವಾಗಿದೆ.[42]

**ಲೋಲಮ್ಮ ಬೆಂಗಳೂರು (ಯೋಗಾಪುರ) ಬಿಜಾಪುರ :**

ಬಿಜಾಪೂರದಿಂದ ಸುಮಾರು ನಾಲ್ಕುಕಿಲೋಮೀಟರ್ ದೂರದಲ್ಲಿರುವ 'ಯೋಗಾಪೂರ' ಎಂಬ ಬಡಾವಣೆಯಲ್ಲಿ ನೆಲೆಸಿದ್ದಾರೆ.

[42] 22-6-2009 ರಂದು ಹುಬ್ಬಳ್ಳಿಯ ಗಣೇಶಪೇಟೆಯ ಅವರ ಮನೆಯಲ್ಲಿ ಸಂದರ್ಶನ ಮಾಡಿದ್ದು

ಮೂಲತಃ ಬೆಂಗಳೂರಿನವರಾದ ಇವರು ಮುನಿಸ್ವಾಮಿ, ಸುಮಿತ್ರಮ್ಮ ದಂಪತಿಗಳ ಏಳು ಹೆಣ್ಣು 3 ಗಂಡು ಮಕ್ಕಳಲ್ಲಿ ಲೋಲಮ್ಮ ಒಬ್ಬರು. ಪ್ರೇಮಕ್ಕ, ಸಚ್ಚೀದೇವಿ, ಶೋಭಾದೇವಿ, ಸುಶೀಲಾದೇವಿ, ಚಂದ್ರಾದೇವಿ, ಭಾರತಿದೇವಿ, ಲೋಲಾದೇವಿ, ಹೀಗೆ ಏಳು ಜನ ಅಕ್ಕತಂಗಿಯರು. ವಾಸು, ವಿಶ್ವನಾಥ, ರವೀಂದ್ರ ಮೂರು ಜನ ಸಹೋದರರು.

ತಂದೆ ಮುನಿಸ್ವಾಮಿ ತಬಲಾವಾದಕರು. ತಾಯಿ ಸುಮಿತ್ರಮ್ಮ ಹಿನ್ನಲೆ ರಂಗ ಗೀತೆಗಳನ್ನು ಹಾಡುತ್ತಿದ್ದರು.

ಲೋಲಮ್ಮನಿಗೇನೂ ಈ ರಂಗಭೂಮಿಯ ಬಗ್ಗೆ ಆಸಕ್ತಿ ಇರಲಿಲ್ಲ. ಅನಿವಾರ್ಯವಾಗಿ ಈ ಬಣ್ಣದ ಬದುಕಿಗೆ ಮುಖಒಡ್ಡುವ ಪರಿಸ್ಥಿತಿ ಬಂದೊದಗಿತು. ಬಹುಶಃ ಬಡತನವೇ ಅದಕ್ಕೆ ಕಾರಣವಿರಬಹುದು. “ಎಲ್ಲಿಯೂ ಸಲ್ಲದವರು ಇಲ್ಲಿ ಸಲ್ಲುವರಯ್ಯ” ಎಂಬ ಬಸವವಾಣಿಯಂತೆ ಅದೆಷ್ಟೋ ನಿರಾಶ್ರಿತರಿಗೆ ರಂಗಭೂಮಿ ಆಶ್ರಯ ಕೊಟ್ಟಿತ್ತು.

ಲೋಲಮ್ಮ ಆರುವರ್ಷದವಳಿದ್ದಾಗ ಬಣ್ಣದ ಬದುಕಿಗೆ ಪಾದಾರ್ಪಣೆ ಅಕ್ಕ ಸಚ್ಚಿದೇವಿ ಇವಳಿಗೆ ಮೊದಲು ಬಣ್ಣ ಹಚ್ಚಿದಳು. ಅರ್ಜುನಸಾ ಕಂಪನಿಯಲ್ಲಿ ಬಾಲಚಂದ್ರ, ನಾರಿ ಸಾಹಸ, ರೇಣುಕಾ ಎಲ್ಲಮ್ಮ, ಹರಿಶ್ಚಂದ್ರ, ಹೀಗೆ ಹಲವಾರು ಪೌರಾಣಿಕ ನಾಟಕಗಳಲ್ಲಿ ಬಾಲ ಪಾತ್ರ ಮಾಡಿದರು. ಆಗಿನ ಕಾಲದಲ್ಲಿ ತಿಂಗಳಿಗೆ 30 ರೂಪಾಯಿ ಸಂಬಳ. ತಿರುಕನಿಗೆ ಮೃಷ್ಟಾನ್ನ ಸಿಕ್ಕಷ್ಟು ಸಂತೋಷವಾಗಿತ್ತು ಲೋಲಮ್ಮನಿಗೆ.

ಸುಮಾರು 8 ವರ್ಷದವರೆಗೆ ಅರ್ಜುನಸಾ ನಾಕೋಡ ಅವರ ಕಂಪನಿಯಲ್ಲಿ ಬಾಲಪಾತ್ರ ಮಾಡುತ್ತ ಮುಂದೆ 1948ರ ನಂತರ ಇವರು ಉತ್ತರ ಕರ್ನಾಟಕಕ್ಕೆ ಬಂದು ನೆಲೆಸಿದರು.

ಮುರಡಯ್ಯನವರ ಕಂಪನಿ, ಬೆಳವಣಕಿ ಸಂಗಯ್ಯನವರ ಕಂಪನಿಯಲ್ಲಿ ಹೆಣ್ಣುಮಗಳು, ಮಲಮಗಳು, ಬದುಕು ಬಂಗಾರವಾಯ್ತು, ಹಲವು ನಾಟಕಗಳಲ್ಲಿ ನಟಿಸಿದ ಲೋಲಮ್ಮ ಯೋಗಾನರಸಿಂಹಯ್ಯನವರ ಕಂಪನಿಗೆ ಹೋದರು. ಆ ಕಂಪನಿ ಹುಬ್ಬಳ್ಳಿಯಲ್ಲಿ ಕ್ಯಾಂಪ ಹಾಕಿತ್ತು. ಬಂಜೆ ತೊಟ್ಟಿಲು, ಮಲಮಗಳು, ಚನ್ನಪ್ಪ ಚನ್ನಗೌಡ ನಾಟಕದಲ್ಲಿ ವಿಲನ್ ಆಗಿ ನಟಿಸಿದ ಲೋಲಮ್ಮ ಮತ್ತೆ ಆ ಕಂಪನಿ ಬಿಟ್ಟು ಬಿ.ಆರ್. ಅರಿಸಿಣ ಗೋಡಿಯವರ ಕಂಪನಿಗೆ ಹೋದರು. ಇವರ ಪತಿ ಐನಾಪೂರ ದೇಶಮುಖ ಇವರೂ ಒಬ್ಬ ಒಳ್ಳೇಯ ನಟ. ಕಮತಗಿ ಕಂಪನಿಯಲ್ಲಿದ್ದಾಗ ಬಸ್ ಕಂಡಕ್ಟರ್ ನಾಟಕದಲ್ಲಿ ಉಮಾ. ಶಾಂತಾ. ಚೆನ್ನಿ, ಮೂರು ಪಾತ್ರಮಾಡಿ ಭೇಷೆನಿಸಿಕೊಂಡಳು. ಹೆಣ್ಣು ಮಗಳು ನಾಟಕದಲ್ಲಿ (ದಮಯಂತಿ) 'ಸೈನಿಕನ ಸಹೋದರಿ' (ಸಾವಿತ್ರಿ) 'ಇಲ್ಲಿಗೆ ಬಂತು ಸಂಗಯ್ಯ' (ರೂಪಾ) 'ಪರಿದ ನಂಜು' ನಾಟಕದಲ್ಲಿ (ಅನಸೂಯ)ಇದೇ ಕಂಪನಿ ಬೈಲಹೊಂಗಲ ಕ್ಯಾಂಪನಲ್ಲಿದ್ದಾಗ 'ಇಲ್ಲಿಗೆ ಬಂತು

ಸಂಗಯ್ಯ' ನಾಟಕದಲ್ಲಿ ರೂಪಾಳ ಹುಚ್ಚಿಯ ಪಾತ್ರ ನೋಡಿ ಒಂದು ಹುಡುಗಿ ಬಾವಿ ಹಾರಿದಳಂತೆ. ನಾಟಕದಲ್ಲಿ ಪ್ರೀತಿಸಿದ ಹುಡುಗ ಕೈಕೊಟ್ಟಾಗ ನಾಟಕದ ನಾಯಕಿ ರೂಪಾ ಅವನ ನೆನಪಿನಲ್ಲಿಯೇ ಹುಚ್ಚಿಯಾಗಿ, ಕೊನೆಗೆ ಜಿಗುಪ್ಸೆಗೊಂಡು ಬಾವಿ ಬೀಳುವ ಸನ್ನಿವೇಶ. ಆ ಪಾತ್ರವನ್ನು ಲೋಲಮ್ಮ ಮಾಡುತ್ತಿದ್ದಳು. ಆ ಊರಿನ ಜನ ಅಲ್ಲಿಂದ ಕ್ಯಾಂಪ ಕಿತ್ತಿಸಿದರಂತೆ ಒಳ್ಳೇಯ ಕಲೆಕ್ಷನ್ ಇತ್ತು ಎನ್ನುತ್ತಾರೆ ಲೋಲಮ್ಮ.

ಮುಂಡರಗಿ ಕಂಪನಿಯಲ್ಲಿ ಮೂರು ವರ್ಷದ ಅನುಭವ 'ರೇಣುಕಾ ಯಲ್ಲಮ್ಮ,' 'ಹರೀಶ್ಚಂದ್ರ', 'ಹೇಮರಡ್ಡಿ ಮಲ್ಲಮ್ಮ', ಭಕ್ತಿಪ್ರಧಾನ ನಾಟಕದಲ್ಲಿ ನಟಿಸಿದ ಲೋಲಮ್ಮನಿಗೆ ಹೆಚ್ಚು ಖುಷಿಕೊಟ್ಟ ಪಾತ್ರಗಳು 'ಇಲ್ಲಿಗೆ ಬಂತು ಸಂಗಯ್ಯದಲ್ಲಿ' ರೂಪಾಹುಚ್ಚಿ ಪಾತ್ರ, ತಾಯಿಕರುಳು, ನಾಟಕದಲ್ಲಿ ತಾಯಿ ಗೌರಮ್ಮನ ಪಾತ್ರ, 'ಸುಖದ ಸುಪ್ಪತ್ತಿಗೆ' ನಾಟಕದಲ್ಲಿ ಹಂಪವ್ವನ ಪಾತ್ರ, ನನ್ನ ಜೀವನದಲ್ಲಿ ನಡೆದ ಘಟನೆ ಹಾಗೂ ಆ ಪಾತ್ರ ಒಂದಕ್ಕೊಂದು ಪೂರಕವಾಗಿದ್ದವು ಎನ್ನುತ್ತಾರೆ ಲೋಲಮ್ಮ.

'ತಾಯಿ ಕರುಳು' ನಾಟಕಕ್ಕೂ ಒಳ್ಳೇಯ ಕಲೆಕ್ಷನ್ ಇತ್ತು. ಈ ನಾಟಕದಲ್ಲಿ ತಾಯಿಯ ಪಾತ್ರವನ್ನು ರಹೆಮಾನವ್ವ ಕುಕನೂರ ಹಾಗೂ ಪಕ್ರುಸಾಬ ಅವರು ಮಾಡುತ್ತಿದ್ದರಂತೆ ಅವರನ್ನು ಮೀರಿ ಈ ಲೋಲಮ್ಮ ಆ ತಾಯಿಯ ಪಾತ್ರಕ್ಕೆ ಜೀವತುಂಬುತ್ತಿದ್ದರಂತೆ. ಇದಕ್ಕಿಂತ ದೊಡ್ಡ ಸಾಧನೆ ಏನಿದೇ?

ಅಪ್ಪಣ್ಣ ಮೂಡಲಗಿ ಅವರ ಕಂಪನಿಯಲ್ಲಿ ಹರೀಶ್ಚಂದ್ರ ನಾಟಕದಲ್ಲಿ ತಾರಾಮತಿ ಪಾತ್ರ ಮಾಡುವಾಗ ಮಗ ನಟರಾಜನಿಗೆ ಜನ್ಮಕೊಟ್ಟಳಂತೆ. ಹೆರಿಗೆಯಾದ ಎಂಟು ದಿನಕ್ಕೆ ಮತ್ತೆ ಮಲ್ಲಮ್ಮನ ಪಾತ್ರಕ್ಕೆ ಬಣ್ಣಹಚ್ಚಿದಳಂತೆ. ಮಹಿಳೆಯರು ಬಂದು ಉಡಿ ತುಂಬಿ ಹೋಗುತ್ತಿದ್ದರಂತೆ.

ಇವಳಿಗೆ ಏಳು ಜನ ಮಕ್ಕಳು. ನಾಲ್ಕು ಜನ ಹೆಣ್ಣು ಮಕ್ಕಳು, ಮೂರು ಜನ ಗಂಡು ಮಕ್ಕಳು. ಹಿರಿಯ ಮಗಳು ಹೇಮಲತಾ ಅವಳು ಒಬ್ಬ ಒಳ್ಳೇಯ ಡ್ಯಾನ್ಸರ್, ಈಗ ಮದಿವೆಯಾಗಿ ಮೈಸೂರಿನಲ್ಲಿ ನೆಲೆಸಿದ್ದಾಳೆ.

**ರಾಜಶ್ರೀ** : ಇವಳು ಈಗಲೂ ರಂಗಭೂಮಿಯಲ್ಲಿ ನಟಿಸ್ತಾ ಇದ್ದಾಳೆ.

**ರೇಖಾ:** ಇವಳು ಒಬ್ಬ ಶ್ರೇಷ್ಠನಟಿಯಾಗಿದ್ದಳು. ಆದರೆ ಒಂದು ತಿಂಗಳ ಹಿಂದೆಯಷ್ಟೇ ಅನಾರೋಗ್ಯದಿಂದ ಕೊನೆಯುಸಿರೆಳೆದಳು.

**ರೂಪಾ:** ಇವಳು ಕಂಪನಿ ಹಾಗೂ ಹವ್ಯಾಸಿ ನಟಿಯಾಗಿ ನಟನೆಯನ್ನು ಮುಂದುವರೆಸಿಕೊಂಡು ಹೊರಟಿದ್ದಾಳೆ. ಈಗ ಇವಳ ದುಡಿಮೆಯಿಂದಲೇ ಮನೆ ನಡೀತಾಯಿದೆ.

**ಶ್ಯಾಮ** : ಈತ ತಬಲಾ ಕಾಂಗೂ ನುಡಿಸುವುದರ ಜೊತೆಗೆ ಪ್ರಸಂಗ ಬಂದರೆ ಪಾತ್ರ ಕೂಡಾ ಮಾಡುತ್ತಾರೆ.

**ನಿಜಗುಣ :** ವಾಯರ್ ಮನ್ ಆಗಿ ಕಾರ್ಯನಿರ್ವಹಣೆ.

**ನಟರಾಜ :** ಈತನೂ ಕೂಡಾ ತಬಲಾ ಕಾಂಗೋ ವಾದಕನಾಗಿದ್ದ.

ಇನ್ನೂ ಇವರು ಏಳೂ ಜನ ಸಹೋದರಿಯರು ಎಂದು ಹೇಳಿದ್ದೇನಲ್ಲ. ಅವರೂ ಕೂಡಾ ರಂಗಭೂಮಿಗೆನೆ ತಮ್ಮ ಬದುಕನ್ನು ತೇದವರು.

**ಪ್ರೇಮಕ್ಕ, ಸುಶಿಲಮ್ಮ** – ಇವರಿಬ್ಬರೂ ಈಗಿಲ್ಲ.

**ಶೋಭಾದೇವಿ :** ಭದ್ರಾವತಿಯಲ್ಲಿದ್ದಾರೆ. ಇವರು ಇವರ ಮಗಳೂ ನಟನೆ ಮಾಡುತ್ತಿದ್ದರು. ಆದರೆ ಈಗಿಲ್ಲ.

**ಚಂದ್ರಾದೇವಿ :** ಸಿಂಧನೂರಿನಲ್ಲಿದ್ದಾರೆ. ಮೊದಲಿನಿಂದಲೂ ಕಂಪನಿ ನಾಟಕದಲ್ಲಿದ್ದರು. ಇವರ ಮಕ್ಕಳು ನಟನೆಯನ್ನೆ ಮುಂದುವರೆಸಿದ್ದಾರೆ.

**ಭಾರತಿದೇವಿ :** ನವಲಗುಂದಲ್ಲಿದ್ದಾಳೆ. ಕಂಪನಿ ಮಾಡಿಕೊಂಡು ರಂಗಭೂಮಿಗಾಗಿ ದುಡಿದವರು.

**ಸಚ್ಚಿದೇವಿ :** ಯೋಗಾಪೂರದಲ್ಲಿಯೇ ನೆಲೆಸಿದ್ದಾರೆ. 70 ರ ಅಂಚಿನಲ್ಲಿರುವ ಸಚ್ಚಮ್ಮ 15 ವರ್ಷದಿಂದ ತೆರೆಯಿಂದ ಮರೆಗೆ ಸರಿದಿದ್ದಾರೆ.

ಹೀಗೆ ಇವರ ಇಡೀ ಕುಟುಂಬವೇ ಬಣ್ಣದ ಬದುಕಿಗೆ ತೆರೆದುಕೊಂಡಿದ್ದರೂ ಇವರ ಬದುಕು ಮಾತ್ರ ಹಾಗೇ ಸಾಗಿದೆ. 6ಕ್ಕೆ ಏರಲಿಲ್ಲ 3ಕ್ಕೆ ಇಳಿಯಲಿಲ್ಲ.

"ಎಲ್ಲಾ ಕಂಪನಿಯೊಳಗೂ ನಾವು ಛಲೋ ಹೆಸರು ತಗೊಂಡೆವು. ಛಲೋ ಪಾರ್ಟ ಮಾಡಿದ್ವಿ ಆದರೆ ಯಾವ ಕಂಪನಿ ಮಾಲೀಕರೂ ನಮಗೆ ಒಳ್ಳೇಯದನ್ನು ಮಾಡಲಿಲ್ಲ. ಶೇಖ ಮಾಸ್ತರ ಒಬ್ಬರು ನನಗೆ ರಾಜ್ಯ ಸರಕಾರದ ಮಾಶಾಸನ ಮಾಡಿಸಿಕೊಟ್ಟರು. ಮನೆಯ ಎಲ್ಲಾ ಜವಾಬ್ದಾರಿಗಳನ್ನು ಸರಿದೂಗಿಸಿಕೊಂಡು ಹೋಗುವ ರೇಖಾನೇ ಹೋಗಿಬಿಟ್ಟಳು. ಗುಡ್ಡಾನ ಕತ್ತರಿಸಿ ಮೈಮ್ಯಾಲ ಬಿದ್ದಾಂಗ ಆಗೇತಿ ಈಗ ಇನ್ನೊಬ್ಬಾಕಿ ಮಗಳು ರೂಪಾನ ದುಡಿಮೆ ಮ್ಯಾಲ ಮನೆ ನಿಂತದ. ಬಹಳ ಕಷ್ಟ ಮೇಡಂ ಜೀವನ ನಡೆಸುವದು" ಎನ್ನುವ ಲೋಲಮ್ಮನ ಮೇಲೆ ಸಂಸಾರದ ಭಾರವೇ ಇದೆ. 2003ರಲ್ಲಿ ನಾಟಕ ಅಕಾಡಮಿ ಪ್ರಶಸ್ತಿ ಸಿಕ್ಕಿದೆ.[43]

---

[43] 12–7–2009 ರಂದು ಬಿಜಾಪೂರದ ಯೋಗಾಪುರದಲ್ಲಿ ಸಂದರ್ಶನ.

**ಸಾವಿತ್ರಿ ಬಳ್ಳಾರಿ :**

ಕಲಾವಿದೆ ಪ್ಲೋರಿನಾ ಗದಗ ಅವರ ಮನೆಗೆ ಹೋದಾಗ ಈ ಸಾವಿತ್ರಿ ಬಳ್ಳಾರಿ ಎಂಬ ಕಲಾವಿದೆಯೊಂದಿಗೆ ಸ್ವಲ್ಪ ಸಮಯ ಬೆರೆಯುವ ಸದವಕಾಶ ಒದಗಿಬಂತು. ಇಡೀ ಕುಟುಂಬವನ್ನೇ ರಂಗಭೂಮಿಗಾಗಿ ದುಡಿಸಿಕೊಂಡವರಲ್ಲಿ ಇವರದು ಒಂದು ಕುಟುಂಬ.

ಇವರು ಮೂಲತಃ ಆದವಾನಿಯವರು. ಸಾವಿತ್ರಿಯ ಅಜ್ಜ ತಿಪ್ಪಣ್ಣ "ಶಾರದಾ ನಾಟ್ಯ ಸಂಘ ಆದವಾನಿ" ಎಂಬ ನಾಟಕ ಕಂಪನಿಯನ್ನು ಕಟ್ಟಿದವರು. ಅವರ ಅಜ್ಜ ತೀರಿಕೊಂಡ ನಂತರ ಸಾವಿತ್ರಿಯ ತಂದೆ ನಾರಣಪ್ಪ ಆ ಕಂಪನಿಯನ್ನು ಮುಂದುವರೆಸಿದರು. ಇವಳ ತಾಯಿ ಸೀತಮ್ಮಳು ಕೂಡಾ ಒಬ್ಬ ಒಳ್ಳೆಯ ನಟಿ. ಆದವಾನಿ ಸುಬದ್ರಮ್ಮ ಇವಳ ಚಿಕ್ಕಮ್ಮ. ಇಡೀ ಪರಿವಾರವೇ ರಂಗಭೂಮಿಗಾಗಿ ದುಡಿದವರು.

ಇದೇ ಸಮಯದಲ್ಲಿ ಗೋಕಾಕ ಕಂಪನಿ ಒಳ್ಳೇಯ ಹೆಸರನ್ನು ಪಡೆದಿತ್ತು. ಆ ಕಂಪನಿಯ ಎದುರು ಇವರ ಕಂಪನಿ ಅಂದರೆ "ಶಾರದಾ ನಾಟ್ಯ ಸಂಘ" ನಿಂತುಹೋಯ್ತು.

ಕಲಾವಿದರ ಕುಟುಂಬದಲ್ಲಿ ಹುಟ್ಟಿ ಬೆಳೆದ ಈ ಸಾವಿತ್ರಿಗೆ ನಟನೆ ಸಹಜವಾಗಿ ಒಲಿದಿತ್ತು. 16 ವರ್ಷದವಳಿದ್ದಾಗ ಇವಳು ಮೊದಲಿಗೆ ಸುಳ್ಯದ ದೇಸಾಯಿಯವರ ಕಂಪನಿಯಲ್ಲಿ ಬಣ್ಣ ಹಚ್ಚಿದಳು. ನಂತರ ಶೆಟ್ಟರ ಕಂಪನಿ, ಪುರಾಣಿಕಮಠ ಕಂಪನಿ, ಕೊಟ್ಟೂರೇಶ್ವರ ಕಂಪನಿ, ಹೀಗೆ ಹಲವಾರು ಕಂಪನಿಗಳಲ್ಲಿ, ನಾಟಕಗಳಲ್ಲಿ ಹಾಸ್ಯ, ವಿಲನ್ ಪಾತ್ರಗಳಲ್ಲಿ ಮಿಂಚಿದ ಸಾವಿತ್ರಮ್ಮನಿಗೆ ನಮ್ಮನ್ನು ಆಳುವವರ ಬಗ್ಗೆ ಆಕ್ರೋಶವಿದೆ. ಆದರೆ ಏನು ಮಾಡುವುದು "ಹೊಟ್ಯಾಗಿನ ಸಿಟ್ಟು ರಟ್ಯಾಗಿಲ್ಲ." ಹೋರಾಟ ಮನೋಭಾವದ ಸಾವಿತ್ರಮ್ಮಳ ಕೂಗು ಯಾರಿಗೂ ಕೇಳ್ತಾ ಇಲ್ಲ. ರಂಗಗೀತೆಗಳನ್ನು ಸುಶ್ರಾವ್ಯವಾಗಿ ಹೇಳುವ ಇವಳ ಮಾತಿಗೊಂದು ಅರ್ಥವಿದೆ. ಕಲಾವಿದರ ಬದುಕು ದಡ ತಪ್ಪಿದ ದೋಣಿಯಂತಾಗಬಾರದು. ರಂಗಭೂಮಿ ಕಲಾವಿದರ ಸಂಘ ಅನ್ನೋದು ಇಲ್ಲ. ನಮ್ಮಲ್ಲಿ ಪ್ರತಿಭೆ ಇದೆ ಅವಕಾಶಗಳಿಲ್ಲ. ಅದರಲ್ಲೂ ಉತ್ತರ ಕರ್ನಾಟಕದ ನಟಿಯರು ಉಪೇಕ್ಷೆಗೆ ಒಳಗಾಗಿದ್ದಾರೆ. ನಮಗೆ ವೇದಿಕೆಗಳಿಲ್ಲ. ಎನ್ನುವ ಅವರ ಹೃದಯಾಂತರಾಳದ ಮಾತು ನಿಜಕ್ಕೂ ಚಾಟಿ ಏಟಿನಂತಿತ್ತು. ಪ್ರತಿಭೆ, ಉದಾತ್ತ ವಿಚಾರಗಳಿದ್ದವರು ಮಾತ್ರ ಧ್ವನಿಯೆತ್ತಲು ಸಾಧ್ಯ ಎಂಬುದು ನನಗೆ ಮನವರಿಕೆಯಾಯ್ತು. ಇಂಥ ಹೆಣ್ಣು ಮಕ್ಕಳ ಅವಶ್ಯಕತೆ ಇಂದಿನ ಸಮಾಜಕ್ಕೆ ಇದೆ.

**ಜಿ. ಎನ್. ಅಂಜಲಿದೇವಿ :**

ಒಂದೆಡೆ ಸ್ವಾತಂತ್ರ್ಯದ ಬಿಸಿ ಜನರಿಗೆ ತಟ್ಟುತ್ತಿದ್ದರೆ ಇನ್ನೊಂದೆಡೆ ವೃತ್ತಿನಾಟಕಕಂಪನಿಗಳಿಗೆ ಸುಗ್ಗಿಯ ಕಾಲ. 1940ರಲ್ಲಿ ಮೂಲತಃ ಆದವಾನಿಯವರಾದ ತಿಪ್ಪಣ್ಣನವರು 18 ಜನ ತಮ್ಮ ಸಂಬಂಧಿಕರನ್ನು ಕರೆದುಕೊಂಡು ಒಂದು ಮಂಡಳಿಯನ್ನು ಪ್ರಾರಂಭಮಾಡಿದರು. "ಶಾರದಾ ನಾಟ್ಯಸಂಘ ಆದೋನಿ" ಎಲ್ಲೆಡೆಗೆ ನಾಟಕವಾಡುತ್ತ ಕಂಪನಿ ಬಳ್ಳಾರಿಗೆ ಬಂದು ನೆಲೆಸಿತು. ಆಗ ತಿಪ್ಪಣ್ಣನವರ ಧರ್ಮಪತ್ನಿ ನರಸಮ್ಮ ತುಂಬು ಬಸುರಿಯಾಗಿದ್ದಳು. ಈಗಾಗಲೇ ನಾಲ್ಕು ಜನ ಹೆಣ್ಣು ಮಕ್ಕಳನ್ನು ಹೆತ್ತು ಗಂಡುಮಗುವಿನ ನಿರೀಕ್ಷೆಯಲ್ಲಿದ್ದರು. ಕೊನೆಗೆ ಆ ಮಗುವೂ ಹೆಣ್ಣು ಮಗುವೇ ಆದಾಗ ಬೇಸರಪಡದೆ 'ಅಂಜಲಿದೇವಿ' ಎಂದು ನಾಮಕರಣ ಮಾಡಿದರು.

ತಿಪ್ಪಣ್ಣ ಹಾಗೂ ನರಸಮ್ಮ ದಂಪತಿಗಳಿಗೆ ಇವಳು ಕೊನೆಯ ಐದನೇಯ ಮಗಳು. ರತ್ನಮ್ಮ, ಸೀತಮ್ಮ, ಸುಭದ್ರಮ್ಮ, ಲಕ್ಷ್ಮಿ, ಅಂಜಲಿ, ಲಕ್ಷ್ಮಿಯನ್ನು ಹೊರತುಪಡಿಸಿದರೆ ಉಳಿದವರೆಲ್ಲಾ ಬಣ್ಣದ ಬದುಕಿಗೆ ಅಂಟಿಕೊಂಡವರೆ. ಎಲ್ಲ ಸ್ತ್ರೀಪಾತ್ರದಾರಿಗಳು ಮನೆಯ ಮಕ್ಕಳೇ ಆಗಿರುವುದರಿಂದ ಇದರಿಂದ ಕಂಪನಿಗೂ ಉಳಿತಾಯವಾದಂತಾಯಿತು. ಜೊತೆಗೆ ಇದು ನಮ್ಮದು ಎಂಬ ಏಕತಾ ಮನೋಭಾವ ಕಂಪನಿಯ ಬೆಳವಣಿಗೆಗೂ ಕಾರಣವಾಯ್ತು.

ಅಕ್ಕ ಸುಭದ್ರಮ್ಮ, ಅಂಜಲಿ ಚಿಕ್ಕವಳಾಗಿರುವಾಗಲೇ ಸಂಗೀತ ನೃತ್ಯವನ್ನು ಹೇಳಿಕೊಡುತ್ತಿದ್ದಳು. ಮನೆಯೇ ಅವಳಿಗೆ ಮೊದಲ ರಂಗಶಾಲೆಯಾಯ್ತು. 1946ರಲ್ಲಿ ಅಂದರೆ ಅಂಜಲಿ ಆರುವರ್ಷದವಳಿದ್ದಾಗ ತಮ್ಮ ಕಂಪನಿಯಲ್ಲಿನ ("ಶಾರದಾ ನಾಟ್ಯ ಸಂಘ ಆದೋನಿ") ಸತ್ಯವಾನ ಸಾವಿತ್ರಿ ನಾಟಕದಲ್ಲಿ ಸತ್ಯವಾನನಾಗಿ ರಂಗಪ್ರವೇಶಮಾಡಿದಳು. ಸಂಗೀತ, ನೃತ್ಯ, ಅಭಿನಯ ಮೂರು ಮುಪ್ಪುರಿಗೊಂಡು ಪ್ರೇಕ್ಷಕರ ಚಪ್ಪಾಳೆಗೆ ಈ ಪುಟ್ಟಪೋರಿ ಗರಿಕೆದರಿದ ನವಿಲಿನಂತಾದಳು.

ಹೀಗೆ ಮೊದಮೊದಲು ಚಿಕ್ಕ ಚಿಕ್ಕ ಪಾತ್ರಗಳನ್ನು ಮಾಡುತ್ತ ನಾಯಕಿಯ ಪಾತ್ರಗಳಲ್ಲಿ ಮಿಂಚತೊಡಗಿದಳು. "ಹೇಮರಡ್ಡಿ ಮಲ್ಲಮ್ಮ" ನಾಟಕದಲ್ಲಿ ಇವಳ ಅಭಿನಯವನ್ನು ನೋಡಿದ ಪ್ರೇಕ್ಷಕರು ಕಲಿಯುಗದ ಮಲ್ಲಮ್ಮನೆಂದೆ ಭಕ್ತಿಯಿಂದ ನೋಡತೊಡಗಿದರು. ಸುಮಾರು ಹದಿನೈದು ವರ್ಷಗಳ ತನಕ ತಮ್ಮ ಕಂಪನಿಯಲ್ಲೀನೆ ಬಣ್ಣ ಹಚ್ಚಿದ ಅಂಜಲಿದೇವಿ ಕಂಪನಿ ಮುಚ್ಚಿದ ಮೇಲೆ ಕಂಪನಿಯ ಎಲ್ಲ ಕಲಾವಿದರು ದಿಕ್ಕಿಗೊಬ್ಬರಾಗಿ ಬೇರೆ ಬೇರೆ ಕಂಪನಿಯನ್ನು ಹುಡುಕಿಕೊಂಡು ಹೋದರು. ನಟನೆಯನ್ನೇ ನಂಬಿ ಬದುಕಿದವರು ಇನ್ನೇನು ಮಾಡಲು ಸಾಧ್ಯ?

ತಿಪ್ಪಣ್ಣನವರ ಎರಡನೇ ಮಗಳು ಸೀತಮ್ಮ ಹಾಗೂ ಆಕೆಯಪತಿ ನಾರಣಪ್ಪ ಸ್ವಲ್ಪದಿನ ಕಂಪನಿ ನಡೆಸಿಕೊಂಡು ಹೋಗುತ್ತಾರೆ. ಇವರ ಮಕ್ಕಳಾದ ರೇಖಾ ಜಿ. ಜಯಶ್ರೀ ಹಾಗೂ ಸಾವಿತ್ರಿ ಇವರೂ

ನಟನೆಯನ್ನೇ ನಂಬಿಬದುಕುತ್ತಿದ್ದಾರೆ. ರೇಖಾ ಬಿ. ಜಯಶ್ರೀ ಸಿಂಧನೂರಿನಲ್ಲಿ ನೆಲೆಸಿದರೆ, ಸಾವಿತ್ರಿ ಬಳ್ಳಾರಿ, ಗದಗನಲ್ಲಿ ನೆಲೆಸಿದ್ದಾರೆ.

ಕಂಪನಿ ತಮ್ಮ ಕೈಬಿಟ್ಟರೂ ಅಂಜಲಿದೇವಿ ತಂದೆ ತಾಯಿಯನ್ನು ಕೈ ಬಿಡಲಿಲ್ಲ. ತಂದೆಯನ್ನು ಕರೆದುಕೊಂಡು ಗೋಕಾಕ ಕಂಪನಿಯತ್ತ ಮುಖ ಮಾಡುತ್ತಾಳೆ. ಅಲ್ಲಿಂದ ಮುಂದೆ "ಶ್ರೀ ಸಿದ್ಧಲಿಂಗೇಶ್ವರ ನಾಟ್ಯಸಂಘ ಪಡೇಸೂರ" ಈ ಕಂಪನಿಗೆ ಸೇರುತ್ತಾಳೆ. ಆ ಕಂಪನಿಯ ಅದ್ಭುತ ನಟನಾದ ನೀಲಕಂಠಪ್ಪ ಸಂಗೀತಗಾರ, ಹಾಡುಗಾರ, ನಿರ್ದೇಶಕ, ಸಂಗೋಳ್ಳಿ ರಾಯಣ್ಣ ನಾಟಕದಲ್ಲಿ ನೀಲಕಂಠಪ್ಪ ರಾಯಣ್ಣನಾದರೆ ಅಂಜಲಿದೇವಿ ರಾಣಿಚನ್ನಮ್ಮಳಾಗಿ ಅಭಿನಯಿಸಿದ ಈ ಜೋಡಿ ಜನಪ್ರೀಯ ಜೋಡಿಯಾಯ್ತು. ರಂಗದಲ್ಲಿ ಜೋಡಿಯಾದ ಈ ಬಾನಾಡಿಗಳು ಸಪ್ತಪದಿ ತುಳಿದು ಬಾಳಪಯಣದಲ್ಲಿ ಕೊನೆಯವರೆಗೂ ಹೆಜ್ಜೆಹಾಕಿದವು.

ಇವರಿಬ್ಬರ ಅಭಿನಯದ "ಸಂಗೋಳ್ಳಿ ರಾಯಣ್ಣ" ನಾಟಕ ಪಡೆಸೂರ ಕಂಪನಿಯಲ್ಲಿ 500 ಪ್ರಯೋಗಗಳನ್ನು ಕಂಡಿತು ಹುಬ್ಬಳ್ಳಿಯಲ್ಲಿ. ಮುಂದೆ ಕಂಪನಿ ಸಿಂಧನೂರಿಗೆ ಕ್ಯಾಂಪಹಾಕಿದಾಗ ಅಂಜಲಿದೇವಿಯ ದುರಾದೃಷ್ಟವೋ ಏನೋ ಕಂಪನಿ ಸರಿಯಾಗಿ ಕಲೆಕ್ಷನ್ ಆಗದೆ ನಷ್ಟ ಅನುಭವಿಸಿತು. ಕಲಾವಿದರ ಸಂಬಳಕ್ಕೂ ಗತಿಯಿಲ್ಲದಾಯಿತು. "ಶೇಖರಯ್ಯನವರ ಭಾರತೀ ನಾಟ್ಯಸಂಘ ಸೂಡಿ" ಈ ಕಂಪನಿಯಲ್ಲಿ "ಜಗಜ್ಯೋತಿ ಬಸವೇಶ್ವರ ನಾಟಕದಲ್ಲಿ" ಬಸವೇಶ್ವರರಾಗಿ ನೀಲಕಂಠಪ್ಪ, ನೀಲಾಂಬಿಕೆಯಾಗಿ ಅಂಜಲಿದೇವಿ ರಂಗದ ಮೇಲೆ ಬಂದರೆ ಪ್ರೇಕ್ಷಕ ಮಂತ್ರ ಮುಗ್ಧನಾಗುತ್ತಿದ್ದನಂತೆ. ಭಕ್ತಿ ಪ್ರಧಾನವಾದ ಇಟಗಿ ಭೀಮಾಂಬಿಕೆ ನಾಟಕದಲ್ಲಿ ಭಕ್ತಿಯ ಹೊಳೆಯನ್ನೇ ಹರಿಸುತ್ತಿದ್ದಳಂತೆ ನವರಸನಾಯಕಿ ಅಂಜಲಿದೇವಿ. ಸರಳ ಸಜ್ಜನಿಕೆಯ ಅಂಜಲಿದೇವಿ ನಟನೆಯನ್ನೆ ನಂಬಿಬದುಕಿದವಳು. ಹಲವಾರು ಕಂಪನಿಗಳಲ್ಲಿ ಹಲವಾರು ವಿಭಿನ್ನ ಪಾತ್ರಗಳಲ್ಲಿ ನಟಿಸಿ ತನ್ನ ಕಲಾಶ್ರೀಮಂತಿಕೆಯನ್ನು ಮೆರೆದವಳು. ಮಗಳು ವಂದನಾ ಕೂಡಾ ತಾಯಿಯಂತೆ, ದೊಡ್ಡಮ್ಮರಂತೆ, ಅಜ್ಜನಂತೆ, ಅಕ್ಕಂದಿರಂತೆ, ಬಣ್ಣದ ಬದುಕಿಗೆ ಮುಖಮಾಡಿದ್ದಾಳೆ.

**ಭಾರತಿ ಶಿರಹಟ್ಟಿ :**

ನಾಲ್ವತ್ತು ಎತ್ತಿನ ಗಾಡಿಯಲ್ಲಿ ರಂಗಪರಿಕರಗಳನ್ನು ಹೇರಿಕೊಂಡು ಹೋಗುತ್ತಿದ್ದ, ಅದ್ದೂರಿ ವೈಭವತನಕ್ಕೆ ಹೆಸರಾದ ಶಿರಹಟ್ಟಿ ವೆಂಕೋಬರಾಯರ "ಶ್ರೀ ಮಹಾಲಕ್ಷ್ಮಿ ಪ್ರಾಸಾದಿಕ ಸಂಗೀತ ನಾಟಕ ಮಂಡಳಿ ಶಿರಹಟ್ಟಿ" 1903ರಲ್ಲಿ ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಕಂಪನಿ ಕಟ್ಟಿದ ಹೆಗ್ಗಳಿಕೆ ಈ ವೆಂಕೋಬರಾಯರದು. ಈ ಖ್ಯಾತ ಶಿರಹಟ್ಟಿ ಮನೆತನದ ಕುಡಿಯೇ ಈ ಭಾರತಿ ಶಿರಹಟ್ಟಿ. ಇವರ ಇಡೀ

ಕುಟುಂಬವೇ ಬಣ್ಣದ ಬೆಳಕಿನಲ್ಲಿ ಮಿಂದವರು. ಮೂಲತಃ ಗದಗ ಜಿಲ್ಲೆಯ ಶಿರಹಟ್ಟಿಯವರಾದ ಇವರು ತಾಯಿ ರೇಣುಕಾ ತಂದೆ ಕೃಷ್ಣಪ್ಪಾ ದಂಪತಿಗಳೂ ಕೂಡಾ ಬಣ್ಣದ ಲೋಕದ ಬಾನಾಡಿಗಳೇ. ಇನ್ನೂ ಹೇಳಿ ಕೇಳಿ ಅಜ್ಜ ವೆಂಕೋಬರಾಯರು ಅಜ್ಜಿ ಯಮುನಾಬಾಯಿ ಇವರೂ ಕೂಡಾ ಬಣ್ಣದ ಬೆಳಕಿನಲ್ಲಿ ತೇಲಾಡಿದವರೇ.

ಇವರ ತಂದೆ ತಾಯಿಗಳಿಗೆ ಇವರು ನಾಲ್ಕು ಜನ ಮಕ್ಕಳು ಭಾರತಿ ಶಿರಹಟ್ಟಿ, ಸುಲೋಚನಮ್ಮ, ಲಲಿತಮ್ಮ, ಒಬ್ಬ ಸಹೋದರ ಹಾಗೂ ಸೋದರ ಮಾವ ಅಣ್ಣಪ್ಪ ಮಾಸ್ತರ. (ಅಣ್ಣಪ್ಪ ಮಾಸ್ತರ ಹಾರ್ಮೋನಿಯಂ ಹಾಗೂ ತಬಲಾ ಮಾಸ್ತರು).

ಲಲಿತಮ್ಮ, ಸುಲೋಚನಮ್ಮ ಇವರು ಕಲಾವಿದೆಯರೇ ಆದರೆ ಲಲಿತಮ್ಮ ಈಗಿಲ್ಲ.

ಭಾರತಿ ಶಿರಹಟ್ಟಿ ಅವರಿಗೆ ಮೂರು ಜನ ಮಕ್ಕಳು. ಇಬ್ಬರು ಹೆಣ್ಣು ಮಕ್ಕಳು ಶ್ರೀದೇವಿ, ತಾರಾಶ್ರೀ, ಮಗ (ಈಗಿಲ್ಲ). ಈ ಶ್ರೀದೇವಿ, ತಾರಾಶ್ರೀ ಇವರೂ ಬಣ್ಣದ ಬದುಕಿಗೆ ಮುಖ ಮಾಡಿದವರೇ.

ಹೀಗೆ ಇವರ ಅಜ್ಜ ಶಿರಹಟ್ಟಿ ವೆಂಕೋಬರಾಯರಿಂದ ಹಿಡಿದು ಇವತ್ತಿನ ತಲೆಮಾರಿನ ವರೆಗೂ ನಟನೆ ಇವರ ಮನೆತನಕ್ಕೆ ಬಳುವಳಿಯಾಗಿ ಬಂದಿದೆ. ಅದನ್ನೆ ನಂಬಿಕೊಂಡು ಇವರು ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ.

ಅಜ್ಜ, ಅಜ್ಜಿ, ತಂದೆ-ತಾಯಿ, ಸಹೋದರ, ಸಹೋದರಿಯರು, ಸೋದರಮಾವ, ಮಕ್ಕಳೂ ಹೀಗೆ ಒಟ್ಟು ನಾಲ್ಕು ತಲೆಮಾರಿನಿಂದ ಇವರ ಮನೆತನ ಕಲೆಯನ್ನೇ ನಂಬಿ ಜೀವನ ಸಾಗಿಸುತ್ತಲಿದೆ.

ಇವಳ ಬಣ್ಣದ ಬದುಕು ಪ್ರಾರಂಭವಾದದ್ದು 6 ವರ್ಷದವಳಿದ್ದಾಗ. ನಟರಾಜ ನಾಟ್ಯಸಂಘ ಹೊಳೆ ಆಲೂರು ಕಂಪನಿಯ ಮೂಲಕ (ಲೋಹಿತಾಶ್ವನ ಪಾತ್ರ).

ಇವಳು 12 ವರ್ಷದವಳಿದ್ದಾಗ ಇವರ ಅಜ್ಜ ವೆಂಕೋಬರಾಯರು ಇಹಲೋಕಯಾತ್ರೆಯನ್ನು ಮುಗಿಸಿದರು. 6ನೇ ಇಯತ್ತೆವರೆಗೆ ಶಿಕ್ಷಣ ಮುಗಿಸಿದ ಭಾರತಿ ನ್ಯಾಮತಿ ಶಾಂತಪ್ಪನವರ ಕಂಪನಿಯಲ್ಲಿ, ಗೋಕಾಕ ಕಂಪನಿಯಲ್ಲಿ ಹೆಚ್ಚಾಗಿ ಪೌರಾಣಿಕ ನಾಟಕಗಳಲ್ಲಿ ಪರಶುರಾಮನ ಪಾತ್ರ, ಲೋಹಿತಾಶ್ವನ ಪಾತ್ರ ಮಾಡುತ್ತ ಮುಂದೆ ಹಾಸ್ಯ, ಖಳನಾಯಕಿ ಎಲ್ಲಾ ಪಾತ್ರಗಳಿಗೂ ಒಗ್ಗಿಸಿಕೊಳ್ಳುತ್ತಾಳೆ.

ರಕ್ತರಾತ್ರಿ – ಮದಹಂಸಿ ಹಾಗೂ ಉತ್ತರಿ ಪಾತ್ರ ಚಿತ್ರಾಂಗದಾ ನಾಟಕದಲ್ಲಿ ತಕ್ಷಕಿ, ಕೇತಕಿ ಪಾತ್ರ ಹೆಚ್ಚು ಖುಷಿಕೊಟ್ಟ ಪಾತ್ರ ಎನ್ನುತ್ತಾರೆ. ತದನಂತರ ಗುಡಗೇರಿ ಕಂಪನಿ, ಚಿಂದೋಡಿ ಲೀಲಮ್ಮನವರ ಕಂಪನಿಯಲ್ಲಿಯೂ ಬಣ್ಣ ಹಚ್ಚಿದ ಅನುಭವ ಇವರದು.

ಮುಂದೆ 1978ರಲ್ಲಿ "ಉಮಾಮಹೇಶ್ವರ ನಾಟ್ಯ ಸಂಘ ಶಿರಹಟ್ಟಿ" ಕಂಪನಿ ಕಟ್ಟಿ ಎಚ್. ಎನ್. ಹೂಗಾರ ವಿರಚಿತ "ಕೀರ್ತಿ ಮುಕುಟ ನಾಟಕ" ಆಡಿದರು. ಅದರಲ್ಲಿ ಭಾರತಿ ಶಿರಹಟ್ಟಿ ಕಳ್ಳ ಶಿವರಾಂನ

ಪಾತ್ರ ಮಾಡುತ್ತಿದ್ದರು. ಅದೊಂದು ಸಾತ್ವಿಕ ಪಾತ್ರ, ಅಂದರೆ ಮೊದಲಿಗೆ ಪುರುಷ ಪಾತ್ರದಲ್ಲಿ ಮಿಂಚಿದ್ದು ಇವರಿಗೆ ಹೆಚ್ಚಾಗಿ ಸ್ತ್ರೀ ಪಾತ್ರಕ್ಕಿಂಥ ಪುರುಷ ಪಾತ್ರವೇ ಹೆಚ್ಚು ಇಷ್ಟವಂತೆ. ಹೆಮರಡ್ಡಿ ಮಲ್ಲಮ್ಮ ನಾಟಕದಲ್ಲಿ ಬ್ರಹ್ಮನ ಪಾತ್ರ, ಗೌಡ್ರುಗದ್ಲ ನಾಟಕದಲ್ಲಿ ಮಲ್ಲೇಶಿ ಹಾಸ್ಯಪಾತ್ರ ಇವರಿಗೆ ಹೆಸರನ್ನು ತಂದು ಕೊಟ್ಟ ಪಾತ್ರಗಳು. ಆದರೆ ಆ ಕಂಪನಿ ಹೆಚ್ಚು ದಿನ ನಡೆಯಲಿಲ್ಲ.

1977–78ರಲ್ಲಿ ಉತ್ತರ ಕರ್ನಾಟಕದಲ್ಲಿ ಸ್ತ್ರೀನಾಟಕ ಮಂಡಳಿಯೊಂದನ್ನು ಹುಟ್ಟುಹಾಕಿದ ಹೆಗ್ಗಳಿಕೆ ಇವಳದು. (ಮಹಿಳಾ ಟ್ರೂಪ್) ಹುಬ್ಬಳ್ಳಿಯ ಶಕ್ತಿಥೇಟರಿನಲ್ಲಿ ಗೌಡ್ರುಗದ್ಲ ನಾಟಕಕ್ಕೆ ಸಾಯಂಕಾಲ ಆರು ಗಂಟೆಗೆನೆ ಟಿಕೆಟ್ ಬುಕ್ ಆಗಿರುತ್ತಿದ್ದವಂತೆ. ಒಂದೇ ನಾಟಕ 15 ಪ್ರಯೋಗಗಳನ್ನು ಆಡಿದ್ದರು. ಈಗಲೂ ತಾಯಿ ಕರಳು, ರಕ್ತರಾತ್ರಿ, ಗೌಡ್ರುಗದ್ಲ, ಮಲಮಗಳು, ಹಸಿರುಬಳೆ, ನಾಟಕಗಳನ್ನು ಆಡುತ್ತಾರೆ. ಈ ಮಹಿಳಾ ಟ್ರೂಪ್ ಕಟ್ಟಿಕೊಂಡು ವಯಸ್ಸಾದ ಹೆಣ್ಣುಮಕ್ಕಳು ಬದುಕಲಿಕ್ಕೆ ಒಂದು ದಾರಿಯನ್ನು ಕಂಡುಕೊಂಡರು.

ಈ ವೃತ್ತಿ ಇವರಿಗೆ ಖುಷಿಕೊಟ್ಟಿದೆ. ಮರ್ಯಾದೆಯಿಂದ ಬದುಕುವವರಿಗೆ ಯಾವವೃತ್ತಿಯೂ ಕೆಟ್ಟದ್ದಲ್ಲ ಎಂಬ ಧೋರಣೆ ಇವರದು. ನೋಡುವ ಜನರಿಗೆ ಎನು ಬೇಕೋ ಅದನ್ನೆ ನಾವು ಕೊಡಬೇಕು. ಒಳ್ಳೆಯದನ್ನು ಈಗ ಯಾರೂ ನೋಡುವುದಿಲ್ಲ ಎಂಬ ನೋವು ಇವರದು. ಕಾಲಕ್ಕೆ ತಕ್ಕಂತೆ ನಾವು ಬದಲಾಗಬೇಕ ನೋಡ್ರಿ ಮೇಡಂ ಎನ್ನುತ್ತಾರೆ ಭಾರತಿ ಶಿರಹಟ್ಟಿ. ಪ್ರೇಕ್ಷಕರ ನಗು, ಕೇಕೆ, ಚಪ್ಪಾಳೇನೆ ಇವರಿಗೆ ಸ್ಫೂರ್ತಿ. 2008ರಲ್ಲಿ ನಾಟಕ ಅಕ್ಯಾಡಮಿ ಪ್ರಶಸ್ತಿ, ಹಲವಾರು ಸಂಘಸಂಸ್ಥೆಗಳ ಪ್ರಶಸ್ತಿಗಳನ್ನು ಇವರು ತಮ್ಮದಾಗಿಸಿಕೊಂಡಿದ್ದಾರೆ. ಸಧ್ಯ ಗದಗಿನಲ್ಲಿ ವಾಸವಾಗಿದ್ದಾರೆ.[44]

[44] 16–01–2011 ರಂದು ಗದುಗಿನಲ್ಲಿ ಸಂದರ್ಶನ ಮಾಡಿದ್ದು.

# 6. ತೆರೆಮರೆಯ ಪ್ರತಿಭೆಗಳು

ಯಾವುದೇ ಒಂದು ಚಿತ್ರ ತೆರೆಕಾಣಬೇಕಾದರೆ ಅದರ ಹಿಂದೆ ಹಲವಾರು ಕೈಗಳು ಒಂದುಗೂಡಿರುತ್ತವೆ. ಆದರೆ ಪ್ರೇಕ್ಷಕರ ಗಮನಕ್ಕೆ ಬರುವಂಥವು ಎರಡೇ ಎರಡು ಪಾತ್ರಗಳು ನಾಯಕ ನಾಯಕಿ, ಅಲ್ಲಿ ಕಂಠದಾನ ಕಲಾವಿದರಿರುತ್ತಾರೆ. ನೃತ್ಯ ಸಂಯೋಜಕರಿರುತ್ತಾರೆ, ಛಾಯಾ ಗ್ರಾಹಕ, ನಿರ್ಮಾಪಕ, ನಿರ್ದೇಶಕ, ಹಿನ್ನೆಲೆ ಗಾಯಕರು, ಸಂಗೀತ ನಿರ್ದೇಶಕರು, ಸಾಹಿತ್ಯ ಬರೆಯುವವರು, ಸ್ಟಂಟ್‌ಮನ್, ಹೀಗೆ ಇನ್ನೂ ಹಲವಾರು ಮನಸ್ಸುಗಳು ಒಮ್ಮತದಿಂದ ಶ್ರಮಪಟ್ಟಾಗ ಒಂದು ಚಿತ್ರ ತೆರೆಕಾಣುತ್ತದೆ. ರಂಗಭೂಮಿಯೂ ಕೂಡಾ ಇದಕ್ಕಿಂತ ಭಿನ್ನವಾದುದೇನಲ್ಲ. ಅದೂ ಅಲ್ಲದೆ ಅಂದಿನ ರಂಗಭೂಮಿ ಸಂಗೀತ ಪ್ರಧಾನವಾಗಿತ್ತು. ಸಂಗೀತ ಎಂದರೆ, ಸಂಗೀತದ ಪರಿಕರಗಳೂ ಬೇಕು. ಎಲ್ಲರ ಕಂಠ ಸುಮಧುರವಾಗಿರುತ್ತದೆಂದು ಹೇಳಲುಬುರುವದಿಲ್ಲ. ಅದಕ್ಕೆ ಹಿನ್ನೆಲೆ ಹಾಡುವವರು ಬೇಕು. ನಿದ್ರೆಗೆಟ್ಟು ನಾಟಕಮಾಡಿ ಹಸಿದ ಹೊಟ್ಟೆಗೆ ರುಚಿರುಚಿಯಾದ ಅಡುಗೆ ಮಾಡಿ ಉಣಬಡಿಸುವವರು ಬೇಕು. ಆದರೆ ಪಾತ್ರದಾರಿಗಳನ್ನು ಬಿಟ್ಟರೆ ಇವರ್‍ಯಾರೂ ನಮ್ಮ ಗಮನಕ್ಕೆ ಬರುವುದೇ ಇಲ್ಲ. ಎಲೆಮರೆಯ ಕಾಯಿಯಂತೆ ಅದೆಷ್ಟೋ ಮಹಿಳೆಯರು ವೃತ್ತಿರಂಗಭೂಮಿಗೆ ದುಡಿದವರಿದ್ದಾರೆ. ಅವರನ್ನೂ ಕೂಡಾ ಬೆಳಕಿಗೆ ತರುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

1. ಶಿವೂಬಾಯಿ ಹುಕ್ಕೇರಿ
2. ಸಾವಿತ್ರಿ ಏಣಿಗಿ
3. ಭೀಮಾಬಾಯಿ ಗರುಡ
4. ರೇಣಮ್ಮ ಚಿತ್ತರಗಿ
5. ಸಿ. ಎಸ್. ನಿರ್ಮಲಾ

**ಶಿವೂಬಾಯಿ ಹುಕ್ಕೇರಿ :**

ದಿನಾಂಕ : 21-11-2009 ರಂದು ಹಳೇಹುಬ್ಬಳ್ಳಿಯ ಇಂಡಿಪಂಪ್ ಹತ್ತಿರ ಇರುವ ಇವರ ಮನೆಯಲ್ಲಿ ಭೇಟಿಯಾಗುವ ಅವಕಾಶ. ಒಂದು ಕಾಲಕ್ಕೆ ನಟಿಯಾಗಿ ತಬಲಾ, ಹಾರ್ಮೋನಿಯಂ ವಾದಕಳಾಗಿ, ರಂಗಭೂಮಿಯ ಅಭಿಜಾತ ಕಲಾವಿದಳಾಗಿ, ಮೆರೆದ ಶಿವೂಬಾಯಿ ಇವತ್ತು ಮೂಕಹಕ್ಕಿಯಾಗಿದ್ದಾಳೆ. ಎಳೆಮಗುವಿನ ರೂಪದಲ್ಲಿ ಮಗ ಸೊಸೆ ಅವಳನ್ನು ಜೋಪಾನ ಮಾಡುತ್ತಿದ್ದಾರೆ. ಲಕ್ವಾ ಹೊಡೆದು ಮಾತನಾಡಲು ಬುರುವುದಿಲ್ಲ ತಡವರಿಸಿ ಮಾತನಾಡುತ್ತಾಳೆ ೮೦ರ ಅಜ್ಜಿ. ಮಗ ಈರಣ್ಣನಿಗೆ ನನ್ನ ತಾಯಿ ಒಬ್ಬ ಕಲಾವಿದೆ. ಅಂಥವಳ ಮಗ ನಾನು ಎಂದು ಹೇಳಿಕೊಳ್ಳುವುದೇ ಒಂದು ಹೆಮ್ಮೆಯ ವಿಷಯ.

ಶಿವೂಬಾಯಿ ಮೂಲತಃ ಐತಿಹಾಸಿಕ ಜಿಲ್ಲೆ ಬಿಜಾಪೂರದವಳು. ಇವಳನ್ನು ಹುಕ್ಕೇರಿಗೆ ಮದುವೆಮಾಡಿಕೊಟ್ಟರು. ಗಂಡ ದುಂಡಪ್ಪ ಹುಕ್ಕೇರಿ ಅವರಿಗೆ ಬಣ್ಣದ ಗೀಳು. ಆ ಕಾಲದಲ್ಲಿ ಸ್ತ್ರೀ ಪಾತ್ರಧಾರಿಗಳು ಸಿಗೋದು ಕಷ್ಟ ಗಂಡ ದುಂಡಪ್ಪನ ಪ್ರೇರಣೆಯಿಂದ ಶಿವೂಬಾಯಿ ಬಣ್ಣದ ಬದುಕಿಗೆ ಕಾಲಿಟ್ಟಳು. ಯಾವ ವಯಸ್ಸಿನಲ್ಲಿ ಮದುವೆಯಾಯ್ತು. ರಂಗಭೂಮಿಗೆ ಯಾವ ವಯಸ್ಸಿನಲ್ಲಿ ಪಾದಾರ್ಪಣೆ ಮಾಡಿದಳು ಯಾವುದೂ ಅವಳಿಗೆ ನೆನಪಿಲ್ಲ. ನೆನಪಿದ್ದರೂ ಹೇಳಲು ಬಾಯಿ ಇಲ್ಲ. ಆದೇ ತಾನೆ ಮಾತನಾಡಲು ಕಲಿತ ಮಕ್ಕಳಂತೆ ಅಜ್ಜಿ ಮಾತನಾಡುತ್ತಾಳೆ ಮುಂದೆ ಏನು ಹೇಳುತ್ತಾಳೆ ಎಂಬುವುದನ್ನು ನಾವೇ ಊಹೆ ಮಾಡಬೇಕು.

ಹಲಗೇರಿ ಜಟ್ಟೆಪ್ಪನವರ ಕಂಪನಿಯಲ್ಲಿ, ಏಣಗಿ ಬಾಳಪ್ಪನವರ ಕಂಪನಿಯಲ್ಲಿ, ಗೋಕಾಕಬಸವಣ್ಣೆಪ್ಪನವರ ಕಂಪನಿಯಲ್ಲಿ, ಬಣ್ಣ ಹಚ್ಚಿದ ಅನುಭವ ಇವಳದು. ಹೆಚ್ಚಾಗಿ ಹಾಸ್ಯ ಪಾತ್ರಗಳಲ್ಲಿ ಮಿಂಚಿದ ಶಿವೂಬಾಯಿ, ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯ ಸಂಘದಲ್ಲಿ ಸುಮಾರು 25 ವರ್ಷ ದುಡಿದಿದ್ದಾಳೆ. ಗೋಕಾಕ ಕಂಪನಿಯಲ್ಲಿ ಹೇಮರಡ್ಡಿ ಮಲ್ಲಮ್ಮ, ಶ್ರೀಕೃಷ್ಣಪಾರಿಜಾತ ಈ ನಾಟಕದಲ್ಲಿ ನಾಯಕಿ ಪಾತ್ರ ಮಾಡಿದ್ದಾಳೆ. (ಹರಿಶ್ಚಂದ್ರ, ಮಲಮಗಳು, ತಾಯಿಕರಳು, ಕೃಷ್ಣಲೀಲಾ) ಜನ ಇವಳನ್ನು ಒಬ್ಬ ನಟಿ ಎಂದು ಗುರುತಿಸಿರಬಹುದು. ಆದರೆ ಅದಕ್ಕಿಂತಲೂ ಒಂದು ವಿಶೇಷವಾದ ಪ್ರತಿಭೆ ಆ ಶಿವೂಬಾಯಿಯಲ್ಲಿತ್ತು. "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ" ಎಂದು ಷರೀಪರು ಹೇಳಿರಬಹುದು. ಆದರೆ ಯಾವ ಗುರುವಿನ ಹಂಗಿಲ್ಲದೆ ಈ ಶಿವೂಬಾಯಿ ತಬಲಾ ಹಾಗೂ ಹಾರ್ಮೋನಿಯಂ ನುಡಿಸುವುದರಲ್ಲಿ, ಬಾರಿಸುವುದರಲ್ಲಿ ಎತ್ತಿದ ಕೈ. ಇವಳನ್ನು ಮೀರಿಸುವವರೇ ಇರಲ್ಲಿಲ್ಲ. ಹೆಣ್ಣು ಮಕ್ಕಳು ತಬಲಾ ಬಾರಿಸುವುದು ಅಪರೂಪ "ಹೆಣ್ಣು ರೂಪಾದರೂ ಗಂಡಿನ ದರ್ಪ" ಶಿವೂಬಾಯಿಯದು.

ಸತ್ಯಭಾಮಾ ಅವರ "ವಸಂತ ಕಲಾ ನಾಟ್ಯಸಂಘ" ಕ್ಕೆ ಇವಳು ತಬಲಾ ಸಾಥ ಕೊಡುತ್ತಿದ್ದಳಂತೆ. ಡಿಕ್ಕಿ ಮಾಧವರಾಯರು ಇವಳು ತಬಲಾಸಾಥ ಕೊಟ್ಟರೇನೆ ನಾನು ರಂಗದ ಮೇಲೆ ಹಾಡುವುದು ಎನ್ನುತ್ತಿದ್ದರಂತೆ. ಮದ್ರಾಸಿನ ಕಮಲಾ ಎನ್ನುವ ಗಾಯಕಿಗೆ ಇವಳೆ ತಬಲಾ ಸಾಥ ಕೊಡಬೇಕು. ಒಂದು ಕಾಲಕ್ಕೆ ಇವಳು ಬಹುಬೇಡಿಕೆಯಲ್ಲಿರುವ ತಬಲಾ ಹಾರ್ಮೋನಿಯಂವಾದಕಿ ಯಾಗಿದ್ದಳು. ತೆರೆಯ ಮುಂದಿದ್ದವರು ಬೆಳಕಿಗೆ ಬಂದರೆ, ತೆರೆಯ ಹಿಂದಿದ್ದವರು ಮರೆಯಲ್ಲಿ ಉಳಿದು ಬಿಡುತ್ತಾರೆ. "ನನ್ನ ಸರ್ವಿಸ್ಸಿನಲ್ಲಿ ನನ್ನನ್ನು ಯಾರೂ ಹಿಂದೆ ಹಾಕಿಲ್ಲ" ಎನ್ನುತ್ತಾಳೆ ಈ ಎಂಬತ್ತರ ಅಜ್ಜಿ. ಆ ಕಾಲದಲ್ಲಿ ಹೆಣ್ಮಕ್ಕಳು ಕಂಪನಿ ನಾಟಕಕ್ಕೆ ಬರುವುದೇ ಕಷ್ಟ ಹೀಗಾಗಿ ಅಂದಿನ ಕಾಲದಲ್ಲಿ ಹೆಣ್ಮಕ್ಕಳನ್ನು ಗೌರವದಿಂದಲೇ ಕಾಣುತ್ತಿದ್ದರೆನ್ನುತ್ತಾಳೆ. ಏನೋ ಒಂದು ಶ್ರದ್ಧೆ ಭಯ, ಭಕ್ತಿ ಅಜ್ಜಿಯಲ್ಲಿತ್ತು. ಮನೆಯವರ ಪ್ರೀತಿ ನಮ್ಮನ್ನು ಕಟ್ಟಿಹಾಕಿತ್ತು.[45]

---

[45] 21-11-2009 ರಂದು ಹಳೇ ಹುಬ್ಬಳ್ಳಿಯಲ್ಲಿ ಸಂದರ್ಶನ ಮಾಡಿದ್ದು.

**ಸಾವಿತ್ರಿ ಏಣಗಿ :**

ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಒಬ್ಬ ಸ್ತ್ರೀ ಇರುತ್ತಾಳೆ ಎಂಬುದು ಸತ್ಯ. ಬಸವೇಶ್ವರ ನಾಟಕದಲ್ಲಿ ಬಸವಣ್ಣನ ಪಾತ್ರ ಮಾಡಿ ಚಹಾದ ಅಂಗಡಿಗೆ ಚಹಾ ಕುಡಿಯಲಿಕ್ಕೆ ಹೋದಾಗ ಏ ಬಸವಣ್ಣಾ ಚಹಾ ಕುಡಿಲಾಕ ಚಹಾದ ಅಂಗಡಿಗಿ ಬಂದಾನ ಅಂಥ ಜನ ಗೇಲಿ ಮಾಡಿದಾಗ, ಚಹಾದ ಅಂಗಡಿಗೆ ಹೋಗೋದನ್ನು ಬಿಟ್ರಂತೆ. ಅಷ್ಟೇ ಅಲ್ಲ ಚಹಾ ಕುಡಿಯೋದನ್ನು ಬಿಟ್ಟಂತ ಕಂಚಿನ ಕಂಠದ ಸರದಾರ ಹಿರಿಯ ನಟ, ಕಂಪನಿ ಮಾಲೀಕರಾದ ಏಣಗಿ ಬಾಳಪ್ಪನವರ ಧರ್ಮಪತ್ನಿ ಈ ಸಾವಿತ್ರಿಬಾಯಿ. ಬಾಳಪ್ಪನವರಿಗೆ ನೆರಳಾಗಿ ನಿಂತವಳು. ಇದನ್ನು ಬಾಳಪ್ಪ ನವರ ಬಾಯಿಯಿಂದಲೇ ಕೇಳಬೇಕು. ಬಹಾಳ ಹೆಮ್ಮೆಯಿಂದ ಹೇಳುತ್ತಾರೆ. ಬೆಳಗಾಂವಿಯಲ್ಲಿ ದಿನಾಂಕ : 12-2-2010 ರಂದು ಅವರ ಮಗ ಸುಭಾಷ ಅವರ ಮನೆಯಲ್ಲಿ ಭೇಟಿಯಾದಾಗ ಮನಬಿಚ್ಚಿ ಮಾತನಾಡಿದರು. ರಂಗಭೂಮಿ ಮತ್ತು ಮಹಿಳೆಯರ ವಿಷಯಕ್ಕೆ ಸಂಬಂಧಪಟ್ಟಂತೆ ತನ್ಮಯರಾಗಿ ಮಾತನಾಡುವಾಗ ಹೆಂಡತಿ ಸಾವಿತ್ರಿಯ ಪ್ರಸ್ತಾಪ ಬಾರದೇ ಇರಲಿಲ್ಲ. "ನಾನು ಕಂಪನಿ ನಡಸಾಕ ಇಷ್ಟು ಎತ್ತರ ಬೆಳೀಲಾಕ ನನ್ನ ಹೆಂಡತೀನ ಕಾರಣ" ಎನ್ನುತ್ತಾರೆ. ಸಾಮಾನ್ಯವಾಗಿ ನಾಟಕದವರು ನಾಟಕ ಮುಗಿದ ಮೇಲೆ ಊಟ ಮಾಡುವ ಪದ್ಧತಿ. ಈಗೆಲ್ಲಾ ನಾಟಕದಸಮಯದಲ್ಲಿ ಸಾಕಷ್ಟು ಬದಲಾವಣೆಯಾಗಿದೆ. ಹನ್ನೆರಡು ಗಂಟೆ ಅಷ್ಟೊತ್ತಿಗೆ ನಾಟಕಗಳು ಮುಗಿಯುತ್ತವೆ. ಮೊದಲೆಲ್ಲಾ ರಾತ್ರಿ ಎರಡು ಮೂರು ಗಂಟೆಗೆ ನಾಟಕಗಳು ಮುಗಿಯುತಿದ್ದವು. ಆ ಸಮಯದಲ್ಲಿ ಸಾವಿತ್ರಿ ಬಿಸಿರೊಟ್ಟಿ, ತೊಪ್ಪಲು ಪಲ್ಯ, ಹಾಲು ತಂದುಕೊಡುತ್ತಿದ್ದಳಂತೆ. ಬಾಳಪ್ಪನವರು ಇವತ್ತು ಶತಕದ ಅಂಚಿನಲ್ಲಿ ತಲುಪಲು ಅವರೇ ಕಾರಣ. ಬಾಳಪ್ಪನವರಿಗೆ ತಮ್ಮ ತಾಯಿ ಮತ್ತು ಹೆಂಡತಿ ಸಾವಿತ್ರಿಯ ಬಗ್ಗೆ ಬಹಾಳ ಅಭಿಮಾನವಿದೆ. ಇವರ ತಾಯಿ ಎಂಬತ್ತು ಎಕರೆ ಆಸ್ತಿಮಾಡಿದರೆ ಅದನ್ನು ಉಳಿಸಿಕೊಂಡವಳು ಸಾವಿತ್ರಿ.

ಇನ್ನೊಂದು ಪ್ರಸಂಗ 1932ರಲ್ಲಿ ನಡೆದದ್ದು. ಸೂಡಿ ಹುಚ್ಚಪ್ಪನವರ ಜೊತೆಗೆ ಪಾಲುದಾರಿಕೆಯಲ್ಲಿ "ಗುರುಸೇವಾ ಸಂಗೀತ ನಾಟಕ" ಮಂಡಳಿಯನ್ನು ಕಿತ್ತೂರಲ್ಲಿ ಪ್ರಾರಂಭಮಾಡಿದರು. ಯಾವುದೋ ಕಾರಣದಿಂದ ಇಬ್ಬರ ನಡುವೆ ಮನಸ್ತಾಪವುಂಟಾಗಿ ಕೋರ್ಟಿನ ಮೆಟ್ಟಿಲನ್ನು ಹತ್ತಬೇಕಾಗುತ್ತದೆ. ಕೋರ್ಟಿನ ಖರ್ಚು ವೆಚ್ಚವನ್ನು ಇವರ ಮೇಲಿನ ಅಭಿಮಾನದಿಂದ ಕಿತ್ತೂರಿನ ಜನ ಹತ್ತುಸಾವಿರ ರೂಪಾಯಿ ಭರಣಾ ಮಾಡುತ್ತಾರೆ. ಸ್ವಾಮಿಗಳ ಹಿರಿತನದಲ್ಲಿ ಇವರಿಗೆ ಹತ್ತು ಸಾವಿರ ರೂಪಾಯಿ ಹಾಗೂ ತಿಂಗಳಿಗೆ ಎರಡನೂರು ರೂಪಾಯಿ ಸಂಬಳ ಕೊಡಬೇಕೆಂದು ಕರಾರು ಆಗುತ್ತದೆ. ಕಂಪನಿ ಮಾಲೀಕ ಹಣ ಕೊಡದೆ ದಿನಗಳನ್ನು ಮುಂದೂಡುತ್ತಾನೆ. ಕಂಪನಿ ಬಿಟ್ಟು ಏಣಿಗೆಗೆ ಬಂದು ನೆಲೆಸಿದಾಗ ಕಿತ್ತೂರಿನ ಜನ ಇವರ ಬಗ್ಗೆ ತಪ್ಪಾಗಿ ಭಾವಿಸಿ ಇವರ ವಿರುದ್ಧ ದಾವೆ ಹೂಡುತ್ತಾರೆ. ಇದ್ದ ಭೂಮಿಯನ್ನು ಜಪ್ತ

ಮಾಡಲು ಮುಂದಾಗುತ್ತಾರೆ. ಆಗ ಬಾಳಪ್ಪನವರಿಗೆ ಧೈರ್ಯ ತುಂಬಿದವರು ಅವರ ಧರ್ಮ ಪತ್ನಿ ಸಾವಿತ್ರಿ, ಧೈರ್ಯ ತುಂಬುವುದಷ್ಟೇ ಅಲ್ಲ ಅವರನ್ನು ತನ್ನ ತವರು ಮನೆಗೆ ಕರೆದುಕೊಂಡು ಹೋಗಿ ತನ್ನ ತಂದೆಯ ಹತ್ತಿರ ಹೊಲಮಾರಿದ ಹಣವಿತ್ತು. ಅದನ್ನು ಬಾಳಪ್ಪನವರಿಗೆ ಕೊಡಿಸಿ ಸಕಾಲದಲಿ ಗಂಡನ ಮರ್ಯಾದೆಯನ್ನು ಉಳಿಸುತ್ತಾಳೆ. ಯಾವಾಗ್ಯಾವಾಗ ಬಾಳಪ್ಪನವರು ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ್ದಾರೆಯೋ ಆವಾಗಾವಾಗ ಸಾವಿತ್ರಿ ಅವರಿಗೆ ಸಹಾಯ ಮಾಡುತ್ತ ಪ್ರೋತ್ಸಾಹಿಸುತ್ತ ಕಂಪನಿಯ ಉಳಿವಿಗೆ ಕಾರಣರಾಗಿದ್ದಾರೆ. ಮತ್ತೊಮ್ಮೆ ಕಂಪನಿಯ ಪರಿಕರಗಳನ್ನು ಬಾಗಲಕೋಟೆಗೆ ಸಾಗಿಸಬೇಕಾಗಿತ್ತು. ಮುಂದೆ ಟ್ರೇನಿಗೆ ಎಲ್ಲ ಸಾಮಾನುಗಳನ್ನು ಸಾಗಿಸಲಾಯ್ತು. ಅಲ್ಲಿಗೆ ಹೋಗಿ ಬಿಡಿಸಕೊಳ್ಳಲು ಹಣವಿರಲಿಲ್ಲ. ಆಗ ಸಹಾಯಕ್ಕೆ ಬಂದವರು ಸಾವಿತ್ರಿನೇ. ಖರ್ಚಿಗಂತ ಕೊಟ್ಟ ಹಣದಲ್ಲಿ ಉಳಿತಾಯ ಮಾಡಿ, ಅಥವಾ ಒಮ್ಮೊಮ್ಮೆ ಗಲ್ಲಾ ಪೆಟ್ಟಿಗೆಯಿಂದ ತೆಗೆದುಕೊಂಡ ಹಣ ಹೀಗೆ ಸಹಾಯಕ್ಕೆ ಬರುತ್ತಿತ್ತು. ಒಟ್ಟಾರೆ ಬಾಳಪ್ಪನವರ ತಾಪತ್ರಯಗಳನ್ನು ದೂರ ಮಾಡಿ ಅವರ ಏಳ್ಗೆಗೆ ಕಾರಣಳಾದವಳು ಒಬ್ಬ ಹೆಣ್ಣು ಎನ್ನುವುದು ಸುಳ್ಳಲ್ಲ. ಒಂದೇ ಕಂಪನಿಯನ್ನು ನಡೆಸಿಕೊಂಡು ಹೋಗುವುದೇ ಕಷ್ಟ. ಆದರೆ ಬಾಳಪ್ಪನವರು ಮೂರು ಕಂಪನಿಗಳ ಮಾಲೀಕರಾಗಿ ರಂಗಭೂಮಿಗೆ ಒಂದು ಖ್ಯಾತಿಯನ್ನು ತಂದುಕೊಡುವುದಕ್ಕೆ ಕಾರಣ ತೆರೆಯ ಹಿಂದೆ ಇದ್ದಂತ ಅವರ ಧರ್ಮಪತ್ನಿ. ರಂಗಭೂಮಿಯ ಒಂದು ಚೈತನ್ಯವೇ ಅವಳು. ಒಂದು ವೇಳೆ ಅವಳ ಸಹಕಾರ ಇರದಿದ್ದರೆ ಬಾಳಪ್ಪನವರು ಇಷ್ಟು ಎತ್ತರಕ್ಕೆ ಏರುತ್ತಿದ್ದರೋ ಇಲ್ಲವೋ ಗೊತ್ತಿಲ್ಲ.

**ಭೀಮಾಬಾಯಿ ಗರುಡ :**

ಯಾವುದೇ ಅದ್ದೂರಿತನವಿಲ್ಲದೇ ಪ್ರಬುದ್ಧ ಅಭಿನಯ, ಸತ್ವಯುತ ಸಾಹಿತ್ಯ, ಸಂಭಾಷಣೆಗಳಿಂದ ರಂಗಭೂಮಿಯನ್ನು ಆಕರ್ಷಕಗೊಳಿಸಿದ ನಟ, ನಾಟಕಕಾರ, "ದತ್ತಾತ್ರೇಯ ನಾಟಕ ಮಂಡಳಿ"ಯ ಒಡೆಯ ಗರುಡ ಸದಾಶಿವರಾಯರ ಧರ್ಮಪತ್ನಿ ಈ ಭೀಮಾಬಾಯಿ.

ನಟ, ನಾಟಕಕಾರರಾಗಿ ಕಾರ್ಯನಿರ್ವಹಿಸಿದ ಗರುಡರಿಗೆ ಸಂಘ ಕಟ್ಟುವ ಕನಸಿತ್ತಾದರೂ ಅದಕ್ಕೆ ಬೇಕಾಗುವ ಪರಿಕರಗಳಿಗೆ ಅವರಲ್ಲಿ ಹಣವಿರಲಿಲ್ಲ. ಆಗ ಸಹಾಯಕ್ಕೆ ಬಂದವರು ಅವರ ಪತ್ನಿ ಭೀಮಾಬಾಯಿ. ಇವಳ ಸ್ಫೂರ್ತಿ, ಆರ್ಥಿಕ ಸಹಾಯ ಇರದೇ ಹೋಗಿದ್ದರೆ, ನಾಡಿನಾದ್ಯಂತ ಕಂಪನಿ ಇಷ್ಟು ಹೆಸರು ಮಾಡುತ್ತಿರಲಿಲ್ಲವೇನೋ? ಕಂಪನಿ ಎಲ್ಲೇ ಹೋದರೂ ಸದಾ ಕಂಪನಿಯ ಜೊತೆಗಿದ್ದು ಕಂಪನಿಯ ಏಳ್ಗೆಯನ್ನು ಬಯಸಿದವಳು. ಕಂಪನಿಯ ಕಲಾವಿದರನ್ನು ತಮ್ಮ ಮಕ್ಕಳಂತೆ ಕಂಡವಳು. ಬೋರ್ಡಿಂಗ್‌ದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದರ ಜೊತೆಗೆ ಒಂದೊಂದು ದಿನ ಪ್ರಸಂಗಬಂದರೆ ಅಡುಗೆಯನ್ನು ಮಾಡುತ್ತಿದ್ದರಂತೆ.

ಹಬ್ಬ ಹುಣ್ಣಿಮೆಗಳು ಬಂದಾಗ ಕಲಾವಿದರಿಗೆ ಹೊಸ ಬಟ್ಟೆಗಳನ್ನು ತಂದುಕೊಡುವುದು. ಕಲಾವಿದರ ಸಂಪೂರ್ಣ ಜವಾಬ್ದಾರಿ ಭೀಮಾಬಾಯಿಯದು. ಯಾವುದನ್ನು ಬೇಸರಮಾಡಿಕೊಳ್ಳದೆ ಕಲಾವಿದರ ಮನಸ್ಸಿಗೆ ನೋವಾಗದಂತೆ ಅವರೊಡನೆ ಹೊಂದಿಕೊಂಡು ಹೋಗುವ ಸ್ವಭಾವ ಅವಳದಾಗಿತ್ತು. ತನ್ನ ಚಾಣಾಕ್ಷತನದಿಂದ, ವ್ಯವಹಾರ ಕುಶಲತೆಯಿಂದ ಒಂದರ್ಥದಲ್ಲಿ ಇವಳೇ ಕಂಪನಿಯ ನಿಜವಾದ ಒಡತಿ ಇವರ ದಾಂಪತ್ಯವೂ ಕೂಡ ಅಷ್ಟೇ ಸುಖಕರವಾಗಿತ್ತು. ಸರಸಮಯ ಜೀವನ ಇವರದಾಗಿತ್ತು. ಮಗಳು ಯಶೋಧೆಯ ಸಾವಿನಲ್ಲೂ ಇವಳ ಧೈರ್ಯ ಮೆಚ್ಚುವಂತದ್ದು. ಭೀಮಾಬಾಯಿಗೆ ಇದ್ದಷ್ಟು ಧೈರ್ಯ ಗರುಡರಿಗೆ ಇರಲಿಲ್ಲವೇನೋ?

ಉತ್ತರ ಕರ್ನಾಟಕದಾದ್ಯಂತ ದತ್ತಾತ್ರೆಯ ಕಂಪನಿ ಜಯಭೇರಿ ಬಾರಿಸಲು ನುರಿತ ಕಲಾವಿದೆಯರೂ ಇರಬಹುದು. ಅದರ ಜೊತೆಗೆ ತೆರೆಯ ಹಿಂದಿದ್ದು ಸದಾ ರಂಗಭೂಮಿಯ ಬಗ್ಗೆ ಕಳಕಳಿ ಕಾಳಜಿಯನ್ನು ಹೊಂದಿದ ಒಂದು ಮನಸ್ಸು ಇತ್ತಲ್ಲಾ ಅದೂ ಇರಬಹುದು.

**ರೇಣಮ್ಮ ಚಿತ್ತರಗಿ :**

1940ರಲ್ಲಿ ಗಂಗಾಧರಶಾಸ್ತ್ರಿಗಳು "ಕುಮಾರ ವಿಜಯ ನಾಟ್ಯ ಸಂಘ" ಚಿತ್ತರಗಿ ಎಂಬ ಕಂಪನಿಯನ್ನು ಕಟ್ಟಿದರು. ಒಂದು ಕಾಲಕ್ಕೆ ಸ್ತ್ರೀ ಪಾತ್ರಗಳನ್ನು ಮಾಡಿ ಹೆಸರು ಮಾಡಿದ ಖ್ಯಾತ ನಟ ಜಾಲಿಹಾಳ ವೀರಯ್ಯನವರು ಈ ಚಿತ್ತರಗಿ ಕಂಪನಿಯ ಕಲಾವಿದರು. ಅವರ ಮಗಳೇ ಈ ರೇಣಮ್ಮ.

ಬದಾಮಿ ತಾಲೂಕಿನ ಜಾಲಿಹಾಳ ಇವರ ಊರು. ಇವರು ಹುಟ್ಟಿದ್ದು ಬಾಗಲಕೋಟೆಯ ಸರಕಾರಿ ಆಸ್ಪತ್ರೆಯಲ್ಲಿ. ಈ ಮಗು ವೀರಯ್ಯನವರ ಮಗಳಾಗಿ ಬೆಳೆಯದೆ, ಕಂಪನಿಯ ಮುದ್ದಿನ ಮಗಳಾಗಿ ಎಲ್ಲರ ಕೈತುತ್ತು ತಿಂದು ಬೆಳೆದಳು. ಮುಂದೆ ಅದೇ ಕಂಪನಿಯಲ್ಲಿ ಪೇಂಟರ ಆಗಿ ಕಾರ್ಯನಿರ್ವಹಿಸುತ್ತಿದ್ದ ಕೆ. ಬಿ. ಶಂಕರ ಅವರ ಜೊತೆಗೆ 1977 ಫೆಬ್ರುವರಿ 10 ರಂದು ನರಗುಂದದ ಶಿವನ ದೇವಾಲಯದಲ್ಲಿ ಅದ್ದೂರಿಯ ಮದುವೆ ನಡೆಯಿತು. ಶಂಕರ ಅವರ ಆಸ್ತಿ ಸಜ್ಜನಿಕೆ, ಪ್ರಾಮಾಣಿಕತೆ, ಅದನ್ನು ನೋಡಿಯೇ ಜಾಲಿಹಾಳ ವೀರಯ್ಯನವರು ಮಗಳನ್ನು ಧಾರೆ ಎರೆದು ಕೊಟ್ಟರು.

"ಸತಿ ಸಂಸಾರದ ಕಣ್ಣು ಎಂಬಂತೆ" ಶಂಕರ ಅವರ ಹೆಗಲಿಗೆ ಹೆಗಲು ಕೊಟ್ಟುಮುನ್ನಡೆಯ ತೊಡಗಿದಳು. ಆದರೆ ಮದುವೆಯಾಗುವಾಗ ಈ ಪೋರಿಗೆ ಕೇವಲ 15 ವರ್ಷ. ಆಗಲೇ ಸಂಸಾರದ ಭಾರ ತಲೆಮೇಲೆ ಹೊತ್ತಾಗಿತ್ತು. ಸರಳ ಸಜ್ಜನಿಕೆಯ ಸಾಕಾರಮೂರ್ತಿ ಶಂಕರ ಅವರು ಅದೇ ಚಿತ್ತರಗಿ ಕಂಪನಿಯಲ್ಲಿ ವ್ಯವಸ್ಥಾಪಕರಾಗಿ (ಮ್ಯಾನೆಜರ್) ಸೇವೆ ಸಲ್ಲಿಸತೊಡಗಿದರು.

ರೇಣಮ್ಮ ಒಳ್ಳೇ ಭರತನಾಟ್ಯ ಕಲಾವಿದೆ. ಅಜ್ಜ (ಗಂಗಾಧರಶಾಸ್ತ್ರಿಗಳು) ಅಪ್ಪನ ಗರಡಿಯಲ್ಲಿ ಬೆಳೆದ ಈ ಹುಡುಗಿ ತನ್ನ ಎಂಟನೇಯ ವಯಸ್ಸಿನಲ್ಲಿಯೇ ನಾಟ್ಯ ಮಯೂರಿ ಬಿರುದು ಪಡೆದಳು. "ಭಾಗ್ಯ ಬಂತು ಬುದ್ಧಿ ಹೋಯ್ತು" ಈ ನಾಟಕದಲ್ಲಿ ಒಂದು ಚಿಕ್ಕ ಪಾತ್ರ ಮಾಡಿದ್ದುಂಟು. ಆದಾದ ನಂತರ ಯಾಕೋ ಏನೋ ರೇಣಮ್ಮ ಮುಖಕ್ಕೆ ಬಣ್ಣ ಹಚ್ಚಲಿಲ್ಲ. ತೆರೆಯ ಮರೆಯಲ್ಲಿಯೇ ಎಲೆಮರೆಯ ಕಾಯಿಯಂತೆ ಉಳಿದು ಬಿಟ್ಟರು. ಗಂಡ ಶಂಕರರಿಗೆ ಸ್ಫೂರ್ತಿಯಾಗಿ. ಗಂಗಾಧರಶಾಸ್ತ್ರಿಗಳು ಆ ಕಂಪನಿಯ ಸಂಪೂರ್ಣ ಮಾಲಿಕತ್ವವನ್ನು ಕೆ. ಬಿ. ಶಂಕರ ಅವರಿಗೆ ವಹಿಸಿಕೊಡುತ್ತಾರೆ. ಆಗ ಕಂಪನಿಯ ಹೆಸರಿನಲ್ಲಿ ಸ್ವಲ್ಪ ಬದಲಾವಣೆ ಮಾಡುತ್ತಾರೆ. "ಕುಮಾರ ವಿಜಯ ನಾಟಕ ಸಂಘ" ಎಂದು. ಒಂದು ಕಾಲಕ್ಕೆ ಐದು ಕಂಪನಿಯ ಮಾಲೀಕರು ಈ ಶಂಕರ. ಒಂದಿದ್ದ ಕಂಪನಿಯನ್ನು ಐದು ಶಾಖೆಗಳಾಗಿ ಬೆಳೆಯಲು ಕಾರಣ ರೇಣಮ್ಮನವರ ಸ್ಫೂರ್ತಿ.

ಒಬ್ಬ ನಟನ ಮಗಳಾಗಿ, ಕಂಪನಿ ಮಾಲೀಕನ ಹೆಂಡತಿಯಾಗಿ. ಏನೋ ಒಂದು ತೃಪ್ತಿಯನ್ನು ರಂಗಭೂಮಿಯಲ್ಲಿ ಕಂಡುಕೊಂಡಿದ್ದಾರೆ. ರಂಗಭೂಮಿಯಲ್ಲಿ ಹಿರೋಯಿನ್ ಆಗದಿದ್ದರೂ ಬದುಕಿನಲ್ಲಾದರೂ ಹಿರೋಯಿನ್ ಆಗಿ ಬದುಕಬೇಕೆಂಬ ಛಲ ಇವರದು. ಬೆಟ್ಟದಷ್ಟು ಕಷ್ಟಗಳನ್ನು ಸಾಸಿವೆ ಮಾಡಿ ನುಂಗಿದ್ದಾರೆ.

ಸೊರಬದಲ್ಲಿ ಕಂಪನಿ ಕ್ಯಾಂಪ ಹಾಕಿದಾಗ ಬೋರ್ಡಿಂಗಗೆ ಕಟ್ಟಿಗೆ ಇರಲಿಲ್ಲ. ಕಾಡಿಗೆ ಹೋಗಿ ಕಟ್ಟಿಗೆ ತಂದದುಂಟು. ಅನ್ನಪೂರ್ಣೆಯಾಗಿ ಕಂಪನಿಯ ಕೆಲಸಗಾರರಿಗೆ, ನಟ ನಟಿಯರಿಗೆ ಅಡುಗೆ ಮಾಡಿ ತಮ್ಮ ಕೈ ರುಚಿ ತೋರಿಸುವುದರೊಂದಿಗೆ, ತಾಯಿ ವಾತ್ಸಲ್ಯದಿಂದ ನೋಡುವ ಗುಣ ಅವರದು.

ಕಲೆಕ್ಷನ್ ಕಡಿಮೆ ಇದ್ದಾಗ ಕಂಪನಿ ಕೆಲಸಗಾರರ ಪೇಮೆಂಟ್ ಜಾಸ್ತಿ ಇದ್ದಾಗ ಶಂಕರ ಅವರು ಅವತ್ತಿನ ದುಡ್ಡನ್ನು ರೇಣಮ್ಮನವರ ಕೈಯಲ್ಲಿ ಕೊಡುತ್ತಿದ್ದರಂತೆ. ಕಂಪನಿಯ ಪ್ರತಿಯೊಬ್ಬ ಕೆಲಸಗಾರರನ್ನು ಸಂಬಾಳಿಸಿಕೊಂಡು ಹೋಗುವ ವಿಶೇಷಗುಣ ರೇಣಮ್ಮನವರಲ್ಲಿತ್ತು. ಈಗಲೂ ಇದೆ.

ಯಾವದೇ ನಾಟಕ 25 ಪ್ರದರ್ಶನಗಳನ್ನು ಕಂಡರೆ, ಎಲ್ಲ ಕಲಾವಿದರಿಗೂ ಹೊಸಬಟ್ಟೆ ಕೊಡಿಸಿ ಸಿಹಿ ಹಂಚುವುದು ಇವರ ಪದ್ಧತಿ.

18 ವರ್ಷದ ಹಿಂದೆ ಹೊಸರಿತ್ತಿಯಲ್ಲಿ ನಡೆದ ಘಟನೆ ಕಲಾವಿದರಿಗಂತ ಬಟ್ಟೆ ತರಲು ಅರಿವೆ ಅಂಗಡಿಗೆ ಹೋದಾಗ ಇವರು ನಾಟಕದವರು ಅಂತಾ ಗೊತ್ತಾದಾಗ ಅಂಗಡಿಯವರು ಉದ್ರಿ ಕೊಡಲು ಒಪ್ಪಲಿಲ್ಲ. ಆದರೆ ಇವರಿಗೆ ಬಟ್ಟೆಯ ಅವಶ್ಯಕತೆಯಿತ್ತು. ರೇಣಮ್ಮನವರ ಜೊತೆಗೆ ಚಂದ್ರಮ್ಮ ಎಂಬ ಕಲಾವಿದೆ ಹೋಗಿದ್ದಳು. ಅವಳು ತನ್ನ ಕೊರಳಲ್ಲಿಯ ಬಂಗಾರದ ಚೈನನ್ನು ತೆಗೆದುಕೊಟ್ಟಳು. ಅಷ್ಟು ಅಭಿಮಾನ ಇವರ ಮೇಲೆ.

ಇವರ ಸಹಾಯ, ಸಹಕಾರ, ಪ್ರೀತಿಯಿಂದ ಶಂಕರ ಅವರು 35 ವರ್ಷ ಕಂಪನಿಯನ್ನು ನಡೆಸಿಕೊಂಡು ಬಂದರು. ಗಂಡ ಶಂಕರ ಅವರ ಜೊತೆಗೆ ಪೇಟಿಂಗ್ ಮಾಡಿದ ಅನುಭವವೂ ಉಂಟು. ಬಹುಮುಖ ವ್ಯಕ್ತಿತ್ವ ಈ ರೇಣಮ್ಮಳದು. ಆರೋಗ್ಯ ಸರಿಯಿರದಿದ್ದರೆ ವೈದ್ಯಳಾಗಿ ಇಂಜೆಕ್ಷನ್ ಕೂಡಾ ಮಾಡುತ್ತಾಳೆ. ಜೊತೆಗೆ ಒಬ್ಬ ಒಳ್ಳೆಯ ವಿಮರ್ಶಕಿಯೂ ಕೂಡಾ. ತಂದೆ ಜಾಲಿಹಾಳ ವೀರಯ್ಯನವರು ನಾಟಕದಲ್ಲಿ ಪಾತ್ರ ಮಾಡುವಾಗ ಅವರ ದೋಷಗಳನ್ನು ಎತ್ತಿತೋರಿಸುವುದರ ಜೊತೆಗೆ ಹೀಗೆ ಮಾಡಬೇಕಾಗಿತ್ತು ಎಂಬ ಸಲಹೆಯನ್ನು ಕೊಡುತ್ತಿದ್ದರಂತೆ.

ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ, ವೈದ್ಯಳಾಗಿ, ವಿಮರ್ಶಕಿಯಾಗಿ ಬಹುಮುಖ ಪ್ರತಿಭೆ ಇವಳದು.

ಶಂಕರ ಅವರ ಆರೋಗ್ಯ ಸರಿಇಲ್ಲದಾಗ, ಹಾಗೂ ಅವರು ತೀರಿಕೊಂಡಾಗಿನಿಂದ ಅಂದರೆ ಸುಮಾರು ಮೂರುವರ್ಷಗಳಿಂದ ಕಂಪನಿಯ ಸಂಪೂರ್ಣ ಜವಾಬ್ದಾರಿ ರೇಣಮ್ಮಳದು. ಸುಮಾರು ಜನ ಮಹಿಳೆಯರು ಕಂಪನಿ ಕಟ್ಟಿದ್ದಾರೆ. ನಡೆಸಿಕೊಂಡು ಬಂದಿದ್ದಾರೆ. ಆದರೆ ಅವರೆಲ್ಲ ಕಲಾವಿದೆಯರು. ಬಣ್ಣದ ಗೀಳು ಇಲ್ಲದೆ ಒಂದು ಕಂಪನಿಯನ್ನು ಉಳಿಸಿಕೊಂಡು ಬೆಳೆಸಿಕೊಂಡು, ನೂರಾರು ಜನರಿಗೆ ಕೆಲಸಕೊಟ್ಟು ಅನ್ನ ಕೊಟ್ಟು, ಏನೂ ಗೊತ್ತಿಲ್ಲದ ಒಬ್ಬ ಮಹಿಳೆ ಯಾರಿಗೂ ಗೊತ್ತಾಗದಂತೆ, ಯಾವ ಪ್ರಚಾರವೂ ಇಲ್ಲದೆ ಈ ಕಂಪನಿಯ ಉಳಿವಿಗಾಗಿ ದುಡಿತಾ ಇರುವುದು ನಿಜವಾಗಿಯೂ ಸಂತೋಷದ ವಿಷಯ. ಇವರ ಕಂಪನಿಯ ಮೇಲೆ ಎಲ್ಲರಿಗೂ ಗೌರವ, ವಿಶ್ವಾಸ, ಹಂಚಿಕೊಂಡು ತಿನ್ನುವ ಮನಸು ಇವರದು. ಕೂಡಿಡುವ ಸಂಗ್ರಹಬುದ್ಧಿ ಇವರದಲ್ಲ.

ಶರಣರ ದಾರಿಯಲ್ಲಿ ನಡೆದ ಒಬ್ಬ ಮಹಾ ಶರಣೆ ರೇಣಮ್ಮ. ಈಗಲೂ ಕಂಪನಿ ಚನ್ನಾಗಿ ನಡೆದಿದೆ ಎಂದು ಬಹಳಷ್ಟು ಖುಷಿಯಿದ ಹೇಳುತ್ತಾರೆ ರೇಣಮ್ಮ.

ದಿನಾಂಕ : 9-7-2010 ರಂದು ಕಂಪನಿ ನರಗುಂದದಲ್ಲಿ ಕ್ಯಾಂಪ ಹಾಕಿದಾಗ ಅವರನ್ನು ಭೇಟಿಯಾಗಿದ್ದೆ. ಮೂರು ತಾಸು ನಾನು ಅವರೊಂದಿಗಿದ್ದೆ. ರಾತ್ರಿ ಹತ್ತು ಗಂಟೆಯಾದರೂ ಹೊತ್ತು ಸರಿದದ್ದೇ ಗೊತ್ತಾಗಲಿಲ್ಲ. ಆ ಮಾತೃ ಹೃದಯಕ್ಕೆ ತಲೆ ಬಾಗಲೇ ಬೇಕು.[46]

### ಸಿ. ಎಸ್. ನಿರ್ಮಲಾ :

ತೆರೆಯ ಮರೆಯಲ್ಲಿದ್ದು ವೃತ್ತಿರಂಗಭೂಮಿಗೆ ದೊಡ್ಡ ಕೊಡುಗೆ ನೀಡಿದವರು ಸಿ. ಎಸ್. ನಿರ್ಮಲಾ. (ಅಂದರೆ ಚೆಂದೋಡಿ ಶ್ರೀಕಂಠೇಶ ನಿರ್ಮಲಾ). ಸುಶ್ರಾವ್ಯಕಂಠದಿಂದ ಕೇಳುಗರನ್ನು

---

[46] 9-7-2010 ಕಂಪನಿ ನರಗುಂದದಲ್ಲಿದ್ದಾಗ ಸಂದರ್ಶನ ಮಾಡಿದ್ದು.

ಮೋಡಿಮಾಡಿದವರು. ತಮ್ಮ ಹಾಡುಗಳಿಂದಲೇ ಪ್ರೇಕ್ಷಕರನ್ನು ಥೇಟರ್‌ಗಳತ್ತ ಸೆಳೆಯುವ ತಾಕತ್ತಿತ್ತು ಅವರ ಕಂಠಕ್ಕೆ. ಆದ್ದರಿಂದಲೇ ಶ್ರೀಕಂಠೇಶರ ವೃತ್ತಿ ಮಂಡಳಿಗೆ ಇವರೊಂದು ಅಮೂಲ್ಯ ಆಸ್ತಿಯಾಗಿದ್ದರು. ಸರಿಸುಮಾರು ಮೂವತ್ತು ವರ್ಷಗಳ ಕಾಲ ಇವರ ಸೇವೆಯನ್ನು ಚಿಂದೋಡಿ ಶ್ರೀಕಂಠೇಶರ ಮಂಡಳಿ ಬಳಸಿಕೊಂಡಿತು. ಬರೀ ಇಷ್ಟೇ ಆಗಿದ್ದರೆ ಇವರೂ ಕೂಡಾ ಹತ್ತರಲ್ಲಿ ಹನ್ನೊಂದಾಗುತ್ತಿದ್ದರೇನೋ? ಇವರು ಹಾಡಷ್ಟೇ ಅಲ್ಲ, ಕೀಬೋರ್ಡ್, ಹಾರ್ಮೋನಿಯಂ, ಗಿಟಾರ್ ಮ್ಯಾಂಡೋಲಿನ್, ತಬಲಾ ಡ್ರಮ್‌ಸೆಟ್, ಹೀಗೆ ಎಲ್ಲಾ ರೀತಿಯ ವಾದ್ಯಗಳನ್ನು ಪರಿಣಿತಿಯಿಂದ ನುಡಿಸಬಲ್ಲವರಾಗಿದ್ದರು. ಅಂತಃ ದೈತ್ಯಪ್ರತಿಭೆ ನಿರ್ಮಲಾರದ್ದು. ಇದೆಲ್ಲಕಿಂತ ಒಂದು ವಿಶೇಷ ಸಾಮರ್ಥ್ಯ ಇವರಿಗಿತ್ತು. ಇವತ್ತು ನಾವು ಅನೇಕ ಕಡೆ ಕೇಳುವಹಾಗೆ ಗಂಡಸರು ಹೆಂಗಸರ ಧ್ವನಿಯಲ್ಲಿ ಹಾಡಬಲ್ಲರು. ಆದರೆ ಹೆಣ್ಣು ಮಗಳೊಬ್ಬಳು ಗಂಡಿನ ಧ್ವನಿಯಲ್ಲಿ ಹಾಡುವುದು ಬಲು ಅಪರೂಪ. ಆದರೆ ಆ ಸಾಧನೆಯನ್ನು ಮಾಡಿದವರು ಸಿ. ಎಸ್. ನಿರ್ಮಲಾ. ಯುಗಳ ಗೀತೆಗಳನ್ನು ಹೆಣ್ಣು ಹಾಗೂ ಗಂಡಿನ ಧ್ವನಿಯಲ್ಲಿ ಲೀಲಾಜಾಲವಾಗಿ ಹಾಡುತ್ತಿದ್ದರು. ಇನ್ನು ಸಿನೇಮಾ ಹಾಡುಗಳಿದ್ದರಂತೂ ಅವರ ಧ್ವನಿ ಮೂಲ ಗಾಯಕರಂತೆ ಇರುತ್ತಿತ್ತು. ಅನೇಕ ಕ್ಯಾಂಪಗಳಲ್ಲಿ ನಾಟಕ, ಕಲಾವಿದರು, ಅಭಿನಯ, ಇವೆಲ್ಲಕ್ಕಿಂತ ನಿರ್ಮಲಾರವರೇ ಪ್ರಮುಖ ಆಕರ್ಷಣೆಯಾಗಿರುತ್ತಿದ್ದರು. ಪ್ರತಿನಾಟಕದ ಕೊನೆಯ ಸನ್ನಿವೇಶಕ್ಕೆ ಮೊದಲು ನಿರ್ಮಲಾ ವೇದಿಕೆಗೆ ಬರಬೇಕೆಂದು ಪ್ರೇಕ್ಷಕರು ಗಲಾಟೆ ಮಾಡುತ್ತಿದ್ದರು. (ನಾನೇ ನೋಡಿದ್ದೇನೆ) ಆಗ ಪ್ರೇಕ್ಷಕರ ಒತ್ತಾಯಕ್ಕೆ ಮಣಿದು ಗಿಟಾರ ಹಿಡಿದು ವೇದಿಕೆಗೆ ಬರುತ್ತಿದ್ದರು. 2–3 ಹಾಡುಗಳನ್ನು ಪ್ರೇಕ್ಷಕರ ಸಂತೋಷಕ್ಕಾಗಿ ಹಾಡುತ್ತಿದ್ದರು. ಮೈಮರೆತು ಕೇಳುತ್ತಿದ್ದ ಪ್ರೇಕ್ಷಕರು ಗಂಡುಧ್ವನಿ ಕೇಳಿದಾಗಲಂತೂ ಅಕ್ಷರಶಃ ಬೆಕ್ಕಸಬೆರಗಾಗುತ್ತಿದ್ದರು. ಮೂಲತಃ ಕೇರಳದವರಾದ ನಿರ್ಮಲಾ ಅವರ ತಂದೆತಾಯಿಗಳು ಹೊಟ್ಟೆ ಪಾಡಿಗಾಗಿ ಮಂಡ್ಯಕ್ಕೆ ಬಂದವರು. ಇಬ್ಬರೂ ಸಂಗೀತ ಮತ್ತು ವಾದ್ಯಗಳಲ್ಲಿ ಪರಿಣಿತರು. ನಾಲ್ಕುಜನ ಗಂಡು ಮಕ್ಕಳು ಇಬ್ಬರುಹೆಣ್ಣು ಮಕ್ಕಳ ದೊಡ್ಡಕುಟುಂಬ. ಹೊಟ್ಟೆಪಾಡಿಗಾಗಿ ಏನಾದರೂ ಮಾಡಲೇ ಬೇಕಿತ್ತು. ತಂದೆ ತಾಯಿ ತಮ್ಮಲ್ಲಿದ್ದ ಸಂಗೀತ ಮತ್ತು ವಾದ್ಯ ನುಡಿಸುವ ಕಲೆಯನ್ನು ಎಲ್ಲಾಮಕ್ಕಳಿಗೂ ಕಲಿಸಿದವರು. ಅಕ್ಕ ಫಾತೀಮಾ ಕಾಂಗೋ ನುಡಿಸಿದರೆ, ಅಲೆಕ್ಸಾಂಡರ್ ಕೀಬೋರ್ಡ್ ನುಡಿಸ್ತಾ ಹಾಡುತ್ತಿದ್ದರು. ಮೇರಿದಾಸ್ ಕಾಂಗೋ, ತಬಲಾ ಎರಡನ್ನು ನುಡಿಸಿದರೆ ಇನ್ನೊಬ್ಬ ಅಣ್ಣ ಏನ್ನಿ (ಏನ್ನಿಸನ್) ಗಿಟಾರ್ ನುಡಿಸುತ್ತಿದ್ದರು. ಆದರೆ ಕಿರಿಯವಳಾದ ನಿರ್ಮಲಾ ಇವೆಲ್ಲವನ್ನೂ ಕಲಿತು ಅತ್ಯಂತ ಚುರಾಕ್ಯವಾಗಿ ಹಾಡುತ್ತಿದ್ದಳು. ಹೀಗೆ ಮನೆ ಮಂದಿಯಲ್ಲ ಸೇರಿ "ಮ್ಯುಜಿಕಲ್ ನೈಟ್" ಕಾರ್ಯ ಕ್ರಮಕೊಡುತ್ತ ಜೀವನ ನಿರ್ವಹಿಸುತ್ತಿದ್ದರು. ಇದೇ ಹೊತ್ತಿನಲ್ಲಿ ಚಿಂದೋಡಿ ಶ್ರೀಕಂಠೇಶರ ಕಣ್ಣಿಗೆ ಬಿದ್ದರು ನಿರ್ಮಲಾ. 1979ರಲ್ಲಿ ಇವರು ವೃತ್ತಿಮಂಡಳಿಗೆ ಬಂದರು. 1981ರಲ್ಲಿ ಶ್ರೀಕಂಠೇಶರನ್ನು

ಮದುವೆಯಾದರು. ಇಡೀ ಮಂಡಳಿಯೇ ಒಂದು ತೂಕವಾದರೇ ಅದರ ಇನ್ನೊಂದು ತೂಕವಾಗಿ 2008ರ ವರೆಗೂ ಮಂಡಳಿಗಾಗಿ ಹಾಡಿದರು. ಯಾವ ವಾದ್ಯಗಾರನಾದರೂ ಕೈಕೊಟ್ಟರೆ ಕೂಡಲೇ ಆ ಸ್ಥಾನ ತುಂಬುತ್ತಿದ್ದರು ನಿರ್ಮಲಾ. ಹೀಗೆ ಜೀವನದುದ್ದಕ್ಕೂ ಉತ್ತರ ಕರ್ನಾಟಕದ ವೃತ್ತಿ ಮಂಡಳಿಯೊಂದಕ್ಕೆ ದುಡಿದ ನಿರ್ಮಲಾ ತೀವ್ರ ಅನಾರೋಗ್ಯದಿಂದ ಇತ್ತೀಚಿಗೆ ಬೆಂಗಳೂರಿನಲ್ಲಿ ತೀರಿಕೊಂಡರು. ಇವರು ನಿಧನರಾಗುವುದಕ್ಕೆ ಕೆಲವೇ ದಿನಗಳ ಮೊದಲು ನಾನಿವರನ್ನು ಬೆಂಗಳೂರಿನ ಗುಬ್ಬಿವೀರಣ್ಣ ರಂಗಮಂದಿರದಲ್ಲಿ ಭೇಟಿಯಾಗಿದ್ದೆ. ಅನಾರೋಗ್ಯದಿಂದ ತುಂಬ ಕೃಷರಾಗಿದ್ದ ನಿರ್ಮಲಾ ತಮ್ಮ ವೃತ್ತಿ ಜೀವನದ ವಿವರಗಳನ್ನು ಸಂತೋಷವಾಗಿ ಹಂಚಿಕೊಂಡಿದ್ದಳು. ಮಗ ಕಿಶೋರ, ಮಗಳು ಕಾಂಚನಾಳನ್ನು ಕರೆದು ಪರಿಚಯಿಸಿದ್ದಳು. (ಇವರೂ ಇದೇ ವೃತ್ತಿಮಂಡಳಿಯ ಕಲಾವಿದರಾಗಿದ್ದಾರೆ).[47]

---

[47] 27-11-2008 ರಂದು ಬೆಂಗಳೂರಿನ ಗುಬ್ಬಿ ರಂಗಮಂದಿರದಲ್ಲಿ ಸಂದರ್ಶನ.

# 9. ವಿಶೇಷ ಪಾತ್ರಕ್ಕೆ ಹೆಸರಾದವರು

1. ಸಾವಿತ್ರಮ್ಮ ಬ್ಯಾಡಗಿ
2. ರೂಪಾ ಶಿಗ್ಗಾಂವ

**ಸಾವಿತ್ರಮ್ಮ ಬ್ಯಾಡಗಿ :**

ಕಿತ್ತು ತಿನ್ನುವ ಬಡತನ, ಆರ್ಥಿಕ ಅಭದ್ರತೆ, ಸಂಸಾರದ ತಾಪತ್ರಯ, ಹೀಗೆ ಹತ್ತು ಹಲವು ತೊಂದರೆಗಳಿಗೆ ಸಿಕ್ಕು ನರಳುತ್ತಿರುವವರಿಗೆ ರಂಗಭೂಮಿ ಒಂದು ಆಶ್ರಯ ತಾಣವಾಗಿತ್ತು. ಅದರಲ್ಲೂ ಮೂವತ್ತರ ದಶಕ ರಂಗಭೂಮಿಯಲ್ಲಿ ಮಹಿಳೆಯರ ಸಂಖ್ಯೆ ಅಷ್ಟಕ್ಕಷ್ಟೇ. ಮಹಿಳೆಯರ ಪಾತ್ರವನ್ನು ಪುರುಷರೇ ಮಾಡುವಂತಹ ಕಾಲ. ಅಂತಹ ಒಂದು ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ತಾನು ಇಷ್ಟ ಪಟ್ಟೊ? ಇಲ್ಲ ಪರಿಸ್ಥಿತಿಯ ಒತ್ತಡಕ್ಕೆ ಮಣಿದೋ 7 ವರ್ಷದವಳಿದ್ದಾಗ ವಿನೋದಪಟು ಎಂಬ ಬಿರುದಿಗೆ ಭಾಜನರಾದ ಹಲಗೇರಿ ಜಟ್ಟೆಪ್ಪನವರ ಕಂಪನಿಯಿಂದ ಇವರ ಬಣ್ಣದ ಬದುಕು ಪ್ರಾರಂಭವಾಯ್ತು. ಹಾವೇರಿ ಜಿಲ್ಲೆಯ ಬ್ಯಾಡಗಿಯವಳಾದ ಸಾವಿತ್ರಮ್ಮ ಕೊಟ್ಟೂರೇಶ್ವರ ಕಂಪನಿಯಲ್ಲಿಯೂ ಸ್ವಲ್ಪ ದಿನ ಬಣ್ಣ ಹಚ್ಚಿದಳು. ಇವರಿಗೊಂದು ನಿರ್ದಿಷ್ಟ ಗೊತ್ತು ಗುರಿ ಎನ್ನುವುದೇ ಇರುವುದಿಲ್ಲ. ನಟನೆಯೊಂದನ್ನು ಬಿಟ್ಟರೆ ಮತ್ತೇನು ಗೊತ್ತಿರುವುದಿಲ್ಲ. ಒಂದು ಪಕ್ಷದಿಂದ ಇನ್ನೊಂದು ಪಕ್ಷಕ್ಕೆ ಜಿಗಿಯುವ ರಾಜಕಾರಣಿಗಳಂತೆ ಇವರು ಮತ್ತೊಂದು ಕಂಪನಿಯನ್ನು ಅರಸಿಕೊಂಡುಹೋಗುವುದು ಅನಿವಾರ್ಯ.

ತಮ್ಮ ಕಂಪನಿಯಲ್ಲಿ ಮಹಿಳೆಯರಿಗೆ ಅವಕಾಶ ಕೊಡದೇ ಸ್ತ್ರೀ ವಿರೋಧಿ ನೀತಿಯನ್ನು ಅಳವಡಿಸಿಕೊಂಡಂತಹ ಗರುಡ ಸದಾಶಿವರಾಯರ ದತ್ತಾತ್ರೆಯ ಸಂಗೀತ ನಾಟಕ ಮಂಡಳಿಯ ಮೊದಲನೇ ನಟಿ ನರಸಾಸಾನಿಯಾದರೆ, ಎರಡನೇ ನಟಿ ಈ ಬ್ಯಾಡಗಿ ಸಾವಿತ್ರಮ್ಮಳೇ ಇರಬಹುದು. ಕರ್ನಾಟಕ ಸಂಗೀತದಲ್ಲಿ ವಿಶಿಷ್ಟ ಸಾಧನೆ ಮಾಡಿದ ಸಾವಿತ್ರಮ್ಮಳಿಗೆ ಒಬ್ಬ ಸಮರ್ಥ ಕಲಾವಿದೆಯಾಗಿ ಬೆಳೆಯಲು ಗರುಡ ಸದಾಶಿವರಾಯರ ಕಂಪನಿ ಸ್ಫೂರ್ತಿಯ ಸೆಲೆಯಾಯಿತು.

ನೃತ್ಯ, ಅಭಿನಯ, ಸಂಗೀತ ಮೂರು ಮುಪ್ಪುರಿಗೊಂಡು ಪ್ರೇಕ್ಷಕರ ಹೃದಯಕ್ಕೆ ಕಿಚ್ಚು ಹಚ್ಚಿದ ಈ ಕಲಾವಿದೆ ಸತ್ಯ ಸಂಕಲ್ಪ (ಮನೋರಮೆ), ವಿಷಮ ವಿವಾಹ (ಶರಾವತಿ), ಬಸ್ಮಾಸುರ ಮೋಹಿನಿ ಈ ಹಲವು ನಾಟಕಗಳು ಜಯಭೇರಿ ಬಾರಿಸಿದವು. ಇವಳು ದತ್ತಾತ್ರೆಯ ಕಂಪನಿಗೆ ಬರುವುದಕ್ಕಿಂತ ಪೂರ್ವದಲ್ಲಿ ಎಲ್ಲ ನಾಟಕಗಳ ಸ್ತ್ರೀ ಪಾತ್ರಗಳನ್ನು ಹಮ್ಮಿಗಿ ನೀಲಕಂಠಪ್ಪನವರು ನಿಭಾಯಿಸಿಕೊಂಡು ಹೋಗುತ್ತಿದ್ದರು. ಸಾವಿತ್ರಮ್ಮ ಆ ಪಾತ್ರಗಳನ್ನು ಶುರು ಮಾಡಿದ ಮೇಲೆ ಅವಳ ಪ್ರೌಢ ಅಭಿನಯದಿಂದ ಆ ಪಾತ್ರಗಳು ಇನ್ನಷ್ಟು ಮೆಚ್ಚುಗೆಯನ್ನು ಗಳಿಸಿದವು. ಸುಮಾರು 8 ವರ್ಷಗಳ ವರೆಗೆ ಗರುಡರ

ಗರಡಿಯಲ್ಲಿ ಪಳಗಿದ ಸಾವಿತ್ರಮ್ಮ ಆ ಕಂಪನಿ ನಿಂತಮೇಲೆ "ಕಲಾ ವೈಭವ ನಾಟ್ಯ ಸಂಘ," "ಶಾರದಾ ಸಂಗೀತ ನಾಟಕ ಮಂಡಳಿ," "ಗುಬ್ಬಿ ಕಂಪನಿ," "ದೊಡ್ಡವಾಡ ಕಂಪನಿ," ಹೀಗೆ ಹಲವು ಕಂಪನಿಗಳಲ್ಲಿ ತನ್ನ ವಿಶೇಷ ನಟನೆಯಿಂದ ಹೆಸರನ್ನು ಗಳಿಸಿದಳು.

ಲಂಕಾದಹನ ನಾಟಕದಲ್ಲಿನ ಆಂಜನೆಯ ಪಾತ್ರವನ್ನು ಮಾಡಿ ಕೀರ್ತಿ ಪತಾಕೆಯನ್ನು ಹಾರಿಸಿದಳು. ಬಣ್ಣದ ಬದುಕಿನಲ್ಲಿ ಆ ಪಾತ್ರವನ್ನು ಮೊದಲು ನಂಜುಂಡ ಸ್ವಾಮಿಎನ್ನುವವರು ಮಾಡುತ್ತಿದ್ದರಂತೆ. ಆನಂತರ ಯಾರೂ ಮಾಡದೇ ಇರುವಂತಹ ಅಂತ ವಿಶೇಷ ಪಾತ್ರವನ್ನು ಈ ಸಾವಿತ್ರಮ್ಮ ಮಾಡುತ್ತಿದ್ದಳಂತೆ. ಪ್ರೇಕ್ಷಕರ ನೂಕು ನುಗ್ಗಲಿನಲ್ಲಿ ರಂಗಮಂದಿರ ಕಿಕ್ಕಿರಿದು ತುಂಬುವದರೊಂದಿಗೆ, ಭರ್ಜರಿ ಕಲೆಕ್ಷನದೊಂದಿಗೆ ಕಂಪನಿ ಮಾಲೀಕರು ಮುಂದಿನ ಊರಿಗೆ ಪ್ರಯಾಣ ಬೆಳೆಸುತ್ತಿದ್ದರಂತೆ. ಕಂಪನಿಗಳು ನಷ್ಟದಲ್ಲಿ ಇದ್ದಾಗ "ಲಂಕಾ ದಹನ" ನಾಟಕವನ್ನು ಹಾಕಿ ಹೆಚ್ಚಿನ ಕಲೆಕ್ಷನ ಸಲುವಾಗಿ ಸಾವಿತ್ರಮ್ಮಳನ್ನು ಕರೆಸುತ್ತಿದ್ದರಂತೆ. ಮಾಲೀಕರ ಗಲ್ಲಾಪೆಟ್ಟಿಗೆ ತುಂಬುವುದರೊಂದಿಗೆ 'ಆಧುನಿಕ ಆಂಜನೇಯ' ಎಂಬು ಬಿರುದಿಗೆ ಪಾತ್ರಳಾದ ಸಾವಿತ್ರಮ್ಮ 80ರ ದಶಕದಲ್ಲಿನೇ ಬಣ್ಣದ ಬದುಕಿಗೆ ವಿದಾಯ ಹೇಳಿದ್ದಳು. ಅದು ಆಂಜನೇಯನ ವಾರ ಶನಿವಾರದಂದು.

**ರೂಪಾ ಶಿಗ್ಗಾಂವ :**

ನಾಟಕ ನಟನೆಯನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿದ್ದರೂ ಕೆಲ ಕಲಾವಿದೆಯರು ಯಾವದೋ ಒಂದು ವಿಶೇಷ ಪಾತ್ರಕ್ಕೆ ಬ್ರ್ಯಾಂಡಾಗಿ ಬಿಟ್ಟಿರುತ್ತಾರೆ. ಆ ಒಂದು ಪಾತ್ರದಿಂದಲೇ ಅವರು ಖ್ಯಾತಿಯನ್ನು ಪಡೆಯುವದರ ಜೊತೆಗೆ ಅವರೇ ಆ ಪಾತ್ರವಾಗಿ ಬಿಡುತ್ತಾರೆ. ಪ್ರೇಕ್ಷಕವರ್ಗ ಅವರ ಒಡನಾಡಿಗಳು ಅವರನ್ನು ಮೂಲ ಹೆಸರಿನಿಂದ ಗುರುತಿಸದೆ ಪಾತ್ರದ ಅನ್ವರ್ಥ ನಾಮದಿಂದಲೇ ಪ್ರಸಿದ್ಧಿಗೆ ಬಂದು ಬಿಡುತ್ತಾರೆ. ಅಂಥವರಲ್ಲಿ ರೂಪಾ ಶಿಗ್ಗಾಂವ ಕೂಡಾ ಒಬ್ಬಳು.

ಕಲಾವಿದರ ಮನೆತನದಲ್ಲಿ ಹುಟ್ಟಿ ಬೆಳದವಳು ರೂಪಾ. ತಾಯಿ ಶಾರಮ್ಮ ಶಿಗ್ಗಾಂವ ಹಾಗೂ ನಾಗೇಶ ಬೇವಿನಕಟ್ಟಿ ಇವರ ನಾಲ್ಕು ಜನ ಮಕ್ಕಳಲ್ಲಿ ಇವಳು ಒಬ್ಬಳು. ಇವಳನ್ನು ಎಲ್ಲರೂ ಜ್ಯೂನಿಯರ್ ಶೃತಿ ಅಂತಲೇ ಕರೆಯುತ್ತಾರೆ. ಮೇಕಪ್‌ನಲ್ಲಿ ಶೃತಿಯವರಂತೆ ಕಾಣುವುದರಿಂದಲೇ ಹಾಗೆ ಕರೆಯುತ್ತಿರಬಹುದೇನೋ? ಇವಳು ಒಳ್ಳೆಯ ಹಾಡುಗಾರ್ತಿ. ಜೊತೆಗೆ ಒಳ್ಳೆಯ ಡ್ಯಾನ್ಸರ್ ಕೂಡಾ. ಕೆಲವರಿಗೆ ನೃತ್ಯ ಬಂದರೆ ಸಂಗೀತ ಬರುವದಿಲ್ಲ. ಸಂಗೀತ ಬಂದರೆ ನೃತ್ಯ ಬರುವುದಿಲ್ಲ. ಇವೆರಡೂ ಒಂದೆಡೆ ಇರುವುದು ಅಪರೂಪ. ಅವೆರಡೂ ಕಲೆ ಇವಳಿಗೆ ದೈವದತ್ತವಾಗಿವೆ. ಮರೋಳ ವಿಜಯಪ್ಪನವರ ಮಾರ್ಗದರ್ಶನದಲ್ಲಿ ಈ ಕಲಾವಿದೆ ಬೆಳೆದವಳು.

ಬಿ. ಆರ್. ಅರಿಶಿನಗೋಡಿ ವಿರಚಿತ ಬಸ್ ಕಂಡಕ್ಟರ್ ನಾಟಕದಲ್ಲಿನ 'ಖಾನಾವಳಿ ಚನ್ನಿ' ಪಾತ್ರ ವಿಶೇಷವಾದದ್ದು. ಅರ್ಧ ನಾಟಕದ ಯಶಸ್ಸು ಈ ಪಾತ್ರದ ಮೇಲೆನೆ ನಿಂತಿದೆ. ಇದೊಂದು ಹಾಸ್ಯ ಪಾತ್ರ, ಮೊದಲೆಲ್ಲಾ ಈ ಪಾತ್ರಕ್ಕೆ ಚಿತ್ರತಾರೆ ಉಮಾಶ್ರೀ ಅವರನ್ನು ಬುಕ್ ಮಾಡುತ್ತಿದ್ದರು. ಆ ಪಾತ್ರಕ್ಕೆ ಜೀವ ತುಂಬವ ಕೆಲಸವನ್ನು ಉಮಾಶ್ರೀ ಅಲ್ಲದೆ ಮತ್ತಾರೂ ತುಂಬಲು ಸಾಧ್ಯವಿರಲಿಲ್ಲ. ಆದರೆ ಇತ್ತಿತ್ತಲಾಗಿ ಸುಮಾರು ವರ್ಷಗಳಿಂದ ಆ ಖಾನಾವಳಿ ಚನ್ನಿಯ ಪಾತ್ರಕ್ಕೆ ಮರುಜೀವ ತುಂಬುವ ಕೆಲಸ ಈ ರೂಪಾ ಶಿಗ್ಗಾಂವ ಮುಂದುವರಿಸಿದ್ದಾರೆ. ಆ ನಾಟಕದ ಚನ್ನಿಯ ಪಾತ್ರಕ್ಕೆ ಕರ್ನಾಟಕದ ಯಾವ ಮೂಲೆಯಲ್ಲಿದ್ದರೂ ಇವಳನ್ನು ಕಂಪನಿ ಮಾಲೀಕರು ಕರೆಯಿಸುತ್ತಾರೆ. ಏನಿಲ್ಲವೆಂದರೂ ಒಂದು ಪ್ರದರ್ಶನಕ್ಕೆ 20 ರಿಂದ 30ಸಾವಿರ ರೂಪಾಯಿ ಕಲೆಕ್ಷನ್ ಸಹಜವಾಗಿ ಆಗುತ್ತದೆ. ಇವಳದು ಕ್ಯಾಂಪ್ ಕ್ಲೋಜ್ ನಟನೆ. ಉಮಾಶ್ರೀಗಾದರೂ ಸಿನಿಮಾರಂಗದ ಹಿನ್ನಲೆಯಿತ್ತು. ಆದರೆ ಇವಳಿಗೆ ಯಾವ ಹಿನ್ನಲೆ ಇದೆ ಹೇಳಿ? ಆದಾಗ್ಯೂ ಇಷ್ಟು ಎತ್ತರಕ್ಕೆ ಬೆಳೆದಿದ್ದಾಳೆ.

ಗುಡಗೇರಿ ಕಂಪನಿ, ಕುಂಟೋಜಿ ಕಂಪನಿ, ಮಂಡಳಗೇರಿ ಕಂಪನಿ, ಕುಮಾರೇಶ್ವರ ನಾಟ್ಯಸಂಘ ಹಾನಗಲ್ಲ ಈ ಮುಂತಾದ ಕಂಪನಿಗಳಲ್ಲಿ ನಟಿಸಿದ ಅನುಭವ ಇವಳದು.

ಇತ್ತಿತ್ತಲಾಗಿ ರಂಗಭೂಮಿ ಅವಹೇಳನ, ಅಪಹಾಸ್ಯಕ್ಕೆ ಈಡಾಗುತ್ತಿರುವ ಸಮಯದಲ್ಲಿ ತನ್ನ ವಿಶೇಷ ನಟನೆಯಿಂದ ಪ್ರೇಕ್ಷರನ್ನು ಸೂಜಿಗಲ್ಲಿನಂತೆ ಸೆಳೆದಿದ್ದಾಳೆ.[48]

---

[48] 9-7-2010 ಹುಬ್ಬಳ್ಳಿಯಲ್ಲಿ ಸಂದರ್ಶನ

# 10. ಸಂಗೀತಗಾರ್ತಿಯರಾಗಿ ಮಿಂಚಿದವರು

1. ಗೋಹರಜಾನ್ ಕರ್ನಾಟಕಿ
2. ಸುಭದ್ರಮ್ಮ ಮನಸೂರ
3. ಸರೋಜಮ್ಮ ಧುತ್ತರಗಿ

**ಗೋಹರಜಾನ್ ಕರ್ನಾಟಕಿ :**

ಒಂದು ಕಾಲಕ್ಕೆ ತನ್ನ ಮೋಹಕ ಮೈಮಾಟ ಕಂಚಿನ ಕಂಠದಿಂದ ನಾಡಿನಾದ್ಯಂತ ಜನತೆಯ ಮನಕ್ಕೆ ಕಿಚ್ಚುಹಚ್ಚಿದ ಬೆಡಗಿ ಅಮೀರಬಾಯಿ ಕರ್ನಾಟಕಿ. ಅವಳ ಸಹೋದರಿ ಈ ಗೋಹರಜಾನ್. ಬಾಗಲಕೋಟ ಜಿಲ್ಲೆಯ ಬೀಳಗಿಯಲ್ಲಿ ತಂದೆ ಹುಸೇನಸಾಬ ತಾಯಿ ಅಮೀನಮ್ಮಾ ದಂಪತಿಗಳಿಗೆ ಹುಟ್ಟಿದ ಈ ಗೋಹರಜಾನ ಸಂಗೀತದ ಜೋಗುಳವನ್ನು ಕೇಳುತ್ತಲೆ ಬೆಳೆದಳು. ತಂದೆ ಹಾರ್ಮೋನಿಯಂ ವಾದಕ ಹೀಗಾಗಿ ಈ ಹುಡುಗಿಯ ರಕ್ತದ ಕಣಕಣದಲ್ಲಿಯೂ ಸಪ್ತಸ್ವರಗಳ ನಾದ ಹರೀತಾಯಿತ್ತು. ಶ್ರದ್ಧೆ, ಆಸಕ್ತಿಯಿಂದ ಇನ್ನಷ್ಟು ಎತ್ತರಕ್ಕೆ ಬೆಳೆದು ನಿಂತಳು ಗೋಹರಜಾನ್.

ಸಂಗೀತ ಬಲ್ಲವರಿಗೆ ರಂಗಭೂಮಿ ಆಶ್ರಯ ನೀಡುತ್ತಿತ್ತು. 1923ರಲ್ಲಿ ಪ್ರಾರಂಭವಾದ ಏರಾಶಿ ಭರಮಪ್ಪನವರ "ಶ್ರೀ ವಾಣಿವಿಲಾಸ ಕಂಪನಿ" ಯಲ್ಲಿ ಅಕ್ಕ ಅಮೀರಬಾಯಿ ಕರ್ನಾಟಕಿ, ಕಿತ್ತೂರ ರುದ್ರಮ್ಮ ನಾಟಕದಲ್ಲಿ ರುದ್ರಮ್ಮನ ಪಾತ್ರವನ್ನು ಮಾಡುತ್ತಿದ್ದಳು. ಅವಳು ಮುಂಬಯಿಯ ಚಿತ್ರಜಗತ್ತಿಗೆ ಕಾಲಿಟ್ಟಾಗ ತೆರವಾದ ಆ ಸ್ಥಾನವನ್ನು ಗೋಹರಜಾನ ತುಂಬಿದಳು. ಮನಸೂರು ಹಾಗೂ ನೀಲಕಂಠಬುವಾ ಮಿರಜಕರ ಅವರ ಚಾಲ್ ಇವಳ ಮೋಹಕ ಧ್ವನಿಯಿಂದ ರಂಗಮಂದಿರ ಕಿಕ್ಕಿರಿದು ತುಂಬಿರುತ್ತಿತ್ತು.

ಇದೇ ಕಂಪನಿಯ ಇನ್ನೊಂದು ನಾಟಕ 'ವರ ಪ್ರಧಾನದಲ್ಲಿ' ಗೋಹರಜಾನ ಲಲಿತಾಳ ಪಾತ್ರವನ್ನು ನಿಭಾಯಿಸುತ್ತಿದ್ದಳು. ಈ ನಾಟಕವೂ ಇವಳು ಹಾಡಿದ ರಂಗಗೀತೆಗಳಿಂದ ರಂಗೇರಿತು. ಬಹಳ ಕಾಲ ಇವಳು ಕನ್ನಡ ರಂಗಭೂಮಿಯಲ್ಲಿ ಉಳಿಯದಿದ್ದರೂ ಇದ್ದಷ್ಟು ದಿನ ಕನ್ನಡ ರಂಗಭೂಮಿಯ ಒಂದು ಆಸ್ತಿಯೇ ಆಗಿದ್ದಳು. ಅಕ್ಕನ ಪ್ರಭಾವಕ್ಕೆ ಒಳಗಾಗಿ ಇವಳೂ ಮುಂಬಯಿ ಪಟ್ಟಣದ ಚಿತ್ರಜಗತ್ತಿಗೆ ಕಾಲಿಡುತ್ತಾಳೆ. ಮುಂಬಯಿ ಪಟ್ಟಣ ಅವಳನ್ನು ಬಹುಕಾಲ ಉಳಿಸಿಕೊಳ್ಳಲಿಲ್ಲ.

ಬಾಲಗಂಧರ್ವರ ಪ್ರೇರಣೆಯಿಂದ ಮುಂದೆ ಮರಾಠಿ ರಂಗಭೂಮಿಗೆ ಮುಖಮಾಡುತ್ತಾಳೆ. ಮರಾಠಿ ರಂಗಭೂಮಿಯಲ್ಲಿ ಬಾಲಗಂಧರ್ವರ ಹೆಸರನ್ನು ಹಾಲು ಕುಡಿಯುವ ಹಸುಳೆ ಕೂಡಾ ಹೇಳುತ್ತಿತ್ತು. ಸಂಗೀತದ ಮೇರು ಪರ್ವತವೇ ಅವರಾಗಿದ್ದರು. ಅಂಥವರ ಒಡನಾಟ ಗೋಹರಜಾನಳಿಗೆ ಸಿಕ್ಕಾಗ ಅದಕ್ಕಿಂತ ದೊಡ್ಡ ಭಾಗ್ಯಯಾವುದಿದೆ? ಮರಾಠಿ ರಂಗಭೂಮಿಯಲ್ಲಿ ಇವಳಿಗೆ ಹಲವಾರು

ಅವಕಾಶಗಳು ತಾನಾಗಿಯೇ ಹರಿದುಬಂದವು. ಬಾಲಗಂಧರ್ವರು ಅಭಿನಯಿಸುತ್ತಿದ್ದ ಎಲ್ಲ ಸ್ತ್ರೀ ಪಾತ್ರಗಳನ್ನು ಗೋಹರಜಾನ ಮಾಡಿ ಮರಾಠಿಗರ ಮನಗೆದ್ದಳು. ಒಬ್ಬ ಕರ್ನಾಟಕದ ಅದರಲ್ಲೂ ಒಬ್ಬ ಮುಸ್ಲಿಂ ಮಹಿಳೆಯನ್ನು ಮರಾಠಿ ಜನ ತಮ್ಮ ನೆಲದಲ್ಲಿ ಆಶ್ರಯಕೊಟ್ಟು ಅವಳನ್ನು ತುಂಬುಹೃದಯದಿಂದ ಸ್ವೀಕರಿಸಿದ್ದರೆಂದರೆ ಅವಳ ಅದ್ಭುತ ನಟನೆ ಮೋಹಕ ಕಂಠವಲ್ಲದೇ ಮತ್ತೇನೂ ಅಲ್ಲ.

ಅಷ್ಟೇ ಅಲ್ಲ ಬಾಲಗಂಧರ್ವರ ಕಂಪನಿ ಸಾಲದಲ್ಲಿದ್ದಾಗ ಒಂದು ಲಕ್ಷರೂಪಾಯಿ ಕೊಟ್ಟು ಮುಳುಗುವ ಕಂಪನಿಯನ್ನು ತೇಲಿಸುತ್ತಾಳೆ. ಒಬ್ಬ ಕನ್ನಡದ ಹೆಣ್ಣು ಮಗಳು ಮರಾಠಿ ಕಂಪನಿಯ ಉಳಿವಿಗೆ ಕಾರಣಳಾಗುತ್ತಾಳೆ. ದೇಶ ಭಾಷೆಯನ್ನು ಮೀರಿ ಬೆಳೆಯುತ್ತಾಳೆ. ಕಂಪನಿಯ ಉಳಿವಿಗಾಗಿ ಹಗಲಿರುಳು ಶ್ರಮಿಸುತ್ತಾಳೆ. ಬಾಲಗಂಧರ್ವರದು ಗೋಹರಜಾನಳದು ಸಂಗೀತದಲ್ಲಷ್ಟೇ ಸರಿಗಮ ಇರದೇ ಜೀವನದಲ್ಲಿಯೂ ಸರಿಗಮದ ಸ್ವರಗಳ ಶೃತಿ ಇತ್ತು. ಗಂಧರ್ವರ ಬಗೆಗೆ ಅವಳಿಗೆಷ್ಟು ಅಭಿಮಾನವಿತ್ತೋ ಅಷ್ಟೇ ಅಭಿಮಾನ ಮರಾಠಿ, ಮರಾಠಿರಂಗಭೂಮಿಯ ಬಗ್ಗೆ ಇತ್ತು.

ಮರಾಠಿ ಕನ್ನಡದ ಎರಡು ಹಕ್ಕಿಗಳು ಬದುಕಿನ ಕೊನೆಯ ದಿನಗಳ ತನಕ ಒಂದಾಗಿ ತಾಳ ಹಾಕಿದವು. ಒಮ್ಮೆಯೂ ಅಪಸ್ವರ, ಅಪಶೃತಿ ಕೇಳಿಸಲಿಲ್ಲ. ಬಾಲಗಂಧರ್ವರು ಅನಾರೋಗ್ಯದಿಂದ ಹಾಸಿಗೆ ಹಿಡಿದಾಗ, ಅವರಿಗೆ ಹಾಡಲಿಕ್ಕಾಗದೆ ಅರ್ಧಕ್ಕೆ ನಿಂತಾಗ ಆ ರಾಗವನ್ನು ಸ್ವತಃ ಗೋಹರಜಾನ ಪೂರ್ಣಗೊಳಿಸುತ್ತಿದ್ದಳು. ಕಲೆ, ಸಂಗೀತ ಎಲ್ಲವನ್ನು ಮೀರಿ ಬೆಳೆದದ್ದು ಒಬ್ಬ ಮುಸ್ಲಿಂ ಮಹಿಳೆಯಾಗಿ ಮರಾಠಿ ಕನ್ನಡ ರಂಗಭೂಮಿಗೆ ಇವಳ ಕೊಡುಗೆ ಅಪಾರ.

ಈ ರೀತಿಯಾಗಿ ರಂಗಭೂಮಿಗೆ ಸಂಬಂಧಿಸಿದಂತೆ ವಿವಿಧ ರೀತಿಯಲ್ಲಿ ಸೇವೆಸಲ್ಲಿಸಿದವರು ಮಹಿಳೆಯರು. ಪ್ರಾತಿನಿಧಿಕವಾಗಿ ಹಲವಾರು ಜನರ ಸೇವೆಯನ್ನು ಗಮನಿಸಿದ ನಾವು ಈಗ ರಂಗಭೂಮಿಗೆ ಮಹಿಳೆಯರು ನೀಡಿದ ಕೊಡುಗೆ ಕಡೆಗೆ ಕೂಡ ಗಮನಹರಿಸಬೇಕಾಗುತ್ತದೆ. ಈ ಕೊಡುಗೆಗಳನ್ನು ಈ ರೀತಿಯಲ್ಲಿ ಹೇಳಬಹುದು.

**ಸುಭದ್ರಮ್ಮ ಮನಸೂರು :**

ಕೆಲವೊಬ್ಬರು ಹುಟ್ಟುವಾಗಲೇ ಬಾಯಲ್ಲಿ ಬಂಗಾರದ ಚಮಚೆಯನ್ನು ಇಟ್ಟುಕೊಂಡು ಹುಟ್ಟಿರುತ್ತಾರಂತೆ. ಇನ್ನೂ ಕೆಲವರು ದಾರಿದ್ರ್ಯವನ್ನೇ ಬೆನ್ನಿಗೆ ಕಟ್ಟಿಕೊಂಡು ಬರುತ್ತಾರಂತೆ.

ಇಂದಿನ ಸಮಾಜದಲ್ಲಿ ಒಬ್ಬ ವ್ಯಕ್ತಿ ಮುಂದೆಬರಲು ಒಂದು ಅಂತಸ್ತು ಇನ್ನೊಂದು ಜಾತಿ ಇವೆರಡರಲ್ಲಿ ಯಾವುದಾದರೂ ಒಂದು ಇದ್ದರೆ ಅವನು ಆಕಾಶಕ್ಕೆ ಏಣಿಹಚ್ಚುತ್ತಾನೆ.

ಆದರೆ ನಮ್ಮ ಈ ರಂಗನಾಯಕಿಗೆ ಗಾನಕೋಗಿಲೆಗೆ ಯಾವ ಬಲ ಇತ್ತು? ಬಳ್ಳಾರಿಯಂಥ ಬಿರುಬಿಸಿಲಿನ ನಾಡಿನಲ್ಲಿ, ತುಂಗೆಯ ಮಡಿಲಲ್ಲಿ ದೇವದಾಸಿ ಕುಟುಂಬದಲ್ಲಿ, ಭಾಗ್ಯಮ್ಮನವರ ಮಗಳಾಗಿ ಹುಟ್ಟಿದ್ದೇ ತಪ್ಪಾಯಿತೇನೋ? ತಾಯಿ ಭಾಗ್ಯಮ್ಮ ರಂಗಭೂಮಿ ನಟಿಯಲ್ಲ. ಆದರೂ ಶಾಸ್ತ್ರೀಯ ಸಂಗೀತದಲ್ಲಿ ಅಪಾರವಾದ ಪಾಂಡಿತ್ಯವಿತ್ತು. ಅವಳ ಕಂಠ ಎಷ್ಟು ಸುಂದರವಾಗಿತ್ತೋ ಅವಳ ರೂಪವೂ ಕೂಡಾ ಅಷ್ಟೇ ಮೋಹಕವಾಗಿತ್ತು. ಇಂಥ ಒಬ್ಬ ಮಹಾನ್ ಸಂಗೀತಗಾರಳ ಮಗಳಾಗಿ 1939ರಲ್ಲಿ ಸಂಗೀತ ಲೋಕದ ಮೇರುನಟಿ ಸುಭದ್ರಮ್ಮ ಹುಟ್ಟಿದ್ದು. ಇವಳು ಹುಟ್ಟಿದಮೇಲೆ ಇನ್ನಷ್ಟು ದಾರಿದ್ರ್ಯ ಕಾಲುಮುರಿದುಕೊಂಡು ಬಿದ್ದಿತು. ಆ ಸಂದರ್ಭದಲ್ಲಿ ಭಾಗ್ಯಮ್ಮನಿಗೆ ಆಸ್ತಿಯಾಗಿ ನಿಂತದ್ದು ಅವಳ ಸಂಗೀತ. ಈ ಸುಭದ್ರಮ್ಮ ಇನ್ನೂ ಚಿಕ್ಕವಳು, ತಾಯಿ ಅನಾರೋಗ್ಯದಿಂದ ನರಳಿದಾಗ ಅವರಿವರ ಮನೆಯ ಕಸ ಮುಸರೆಮಾಡಿ ಈ ಹುಡುಗಿ ಸುಭದ್ರಮ್ಮ ಮುಳುಗುವ ದೋಣಿಯ ರಂಧ್ರಮುಚ್ಚುವ ಸಾಹಸಮಾಡುತ್ತಾಳೆ.

ಎಲ್ಲಾ ಮಕ್ಕಳಿಗೂ ಇರುವಂಥ ಸಹಜ ಆಸೆ, ಕನಸುಗಳು ಇವಳಲ್ಲಿಯೂ ಮೊಳಕೆಯೊಡೆಯಲು ಆರಂಭಿಸಿದ್ದವು. ಅವೇನೂ ದುಬಾರಿಯಾಗಿರಲಿಲ್ಲ. ತಾಯಿಯ ಸಹಜ ಗುಣಗಳು ರಕ್ತದಲ್ಲಿ ಹರಿದು ಬಂದಿದ್ದವು. ನಾಟಕ ಸಂಗೀತದ ಬಗ್ಗೆ ವಿಶೇಷ ಒಲವನ್ನು ಬೆಳೆಯಿಸಿಕೊಂಡ ಸುಭದ್ರಮ್ಮನಿಗೆ ನಾಟಕಗಳನ್ನು ನೋಡುವ ಅದಮ್ಯ ಬಯಕೆ ಮನೆಮಾಡಿಕೊಂಡಿತ್ತು.

ಅಂದಿನ ಕಾಲದಲ್ಲಿ ಹೆಣ್ಣು ಮಕ್ಕಳು ಒಬ್ಬರೇ ಹೊರಗಡೆ ಹೋಗುವುದು ಎಂದರೆ ಒಂದು ಅಪರಾಧ. ಇನ್ನು ಹೇಳದೆ ಕೇಳದೆ ಸಿನೇಮಾ, ನಾಟಕ ನೋಡಲು ಹೋದರೆ ದೇವರೇಗತಿ. ಸುಭದ್ರಮ್ಮ ಚಿಕ್ಕವಳಿದ್ದಾಗ ಈ ರೀತಿ ತಂದೆ ಜ್ವಾಲಾಪತಿಯವರ ಕಣ್ತಪ್ಪಿಸಿ ನಾಟಕ ನೋಡಲು ಹೋಗಿ ಅವರ ಕೆಂಗೆಣ್ಣಿಗೆ ಗುರಿಯಾದುದುಂಟು. ಆದರೆ ಮಗಳ ಮನಸ್ಸನ್ನರಿತ ಭಾಗ್ಯಮ್ಮ ಅವಳನ್ನು ನಾಟಕ ಕಂಪನಿಗೆ ಸೇರಿಸುವ ಆಲೋಚನೆ ಮಾಡುತ್ತಾಳೆ. ಅದೇ ಸಮಯಕ್ಕೆ ಮಂಗಳೂರಿನ "ಸುಮಂಗಲಿ ನಾಟ್ಯ ಸಂಘ" ಬಳ್ಳಾರಿಗೆ ಕ್ಯಾಂಪ ಹಾಕಿತ್ತು. ಅದರ ಮಾಲೀಕರು ಶ್ರೀಧರ ಅಂತ. ಅವರ ನಾಟಕಕ್ಕೆ ಬಾಲಪಾತ್ರಗಳ ಅವಶ್ಯಕತೆಯಿತ್ತು. ರೋಗಿ ಬಯಸಿದ್ದು ಅದೇ ತಾನೇ? ಕೂಡಲೇ ಭಾಗ್ಯಮ್ಮ ಮಗಳನ್ನು ಆ ಕಂಪನಿಗೆ ಕರೆದುಕೊಂಡು ಹೋದರು. ಹುಡುಗಿಯೇನೋ ಚೆನ್ನಾಗಿದ್ದಾಳೆ. ಆದರೆ ಕಂಠಮಾಧುರ್ಯ ಹೇಗಿದೆಯೋ? ಆವತ್ತಿನ ನಾಟಕಗಳು ಸಂಗೀತಪ್ರಧಾನವಾದಂತ ನಾಟಕಗಳಾಗಿದ್ದವು. ಮೊದಲೇ ಈ ಹುಡುಗಿ ಸಂಗೀತ ನಾಟಕದ ಗೀಳನ್ನು ಅಂಟಿಸಿಕೊಂಡಿದ್ದಳು. ಜೊತೆಗೆ ತಾಯಿಯ ಸಹಜ ಪ್ರತಿಭೆ ಇವಳಲ್ಲಿ ರಕ್ತಗತವಾಗಿತ್ತು. ಇನ್ನೇನು ಬೇಕು? ಒಂದು ಹಾಡನ್ನು ಹೇಳಿ ಕಂಪನಿ ಮಾಲೀಕರ ಮೆಚ್ಚುಗೆಗೆ ಪಾತ್ರಳಾದಳು.

'ಸುಮಂಗಲಿ' ನಾಟ್ಯಸಂಘದ ಬಾಲಪಾತ್ರದ ಮೂಲಕ ಈ ಹುಡುಗಿಯ ಬಣ್ಣದ ಬದುಕು ಆರಂಭವಾಯ್ತು. ಡಾ. ಮಾರ್‍ಲಾ ಅವರ ಮಾಲೀಕತ್ವದ "ಶ್ರೀ ಕಟೀಲುದುರ್ಗಾ ಪರಮೇಶ್ವರಿ" ಮಂಡಳಿಯಲ್ಲಿ ಸುಲ್ತಾನನ ಮಗನ ಪಾತ್ರದಲ್ಲಿ, ಚೆನ್ನಿ ಪಾತ್ರದಲ್ಲಿ, ಬಾಲ ಮಹಾರಾಜನ ಪಾತ್ರದಲ್ಲಿ ಮಿಂಚಿದ ಸುಭದ್ರಮ್ಮ ಹಂತ ಹಂತವಾಗಿ ನಟನಾ ಕೌಶಲ್ಯವನ್ನು ಬೆಳೆಯಿಸಿಕೊಂಡಳು. ಕುರುಕ್ಷೇತ್ರ ನಾಟಕದಲ್ಲಿ ಲಿಂಗರಾಜ ಮನ್ನೂರರು ಭೀಮನ ಪಾತ್ರ ಮಾಡಿದರೆ, ಸುಭದ್ರಮ್ಮ 'ಮಾಯಾ' ಎಂಬ ಪಾತ್ರವನ್ನು ಮಾಡುತ್ತಿದ್ದಳು. ಅತ್ಯಂತ ಕಿರಿಯ ವಯಸ್ಸಿನಲ್ಲಿ ಪ್ರೇಕ್ಷಕರ ಮನಗೆದ್ದಳು. ಆದರೆ ಅವಳಿಗೆ ಸಿಗುತ್ತಿದ್ದ ಸಂಬಳ ಕೇವಲ ಒಂದು ರೂಪಾಯಿ ವಾರಕ್ಕೆ. ಊಟ, ವಸತಿ ಸಿಗುತ್ತದೆಂಬ ಸಮಾಧಾನ ಒಂದೆಡೆಗಿದ್ದರೆ, ಇನ್ನೊಂದೆಡೆ ಬಣ್ಣದ ಗೀಳು. ಎಷ್ಟೇ ತೊಂದರೆಯಾದರೂ ಬಿಡುವಂತಿರಲಿಲ್ಲ.

ಕನ್ನಡ, ತೆಲುಗು ಎರಡು ಭಾಷೆಯನ್ನು ಸರಾಗವಾಗಿ ಮಾತನಾಡುವ ಈ ಕಲಾವಿದೆಗೆ ಯಾವ ಪಾತ್ರವನ್ನು ಕೊಟ್ಟರೂ ಅದಕ್ಕೆ ನ್ಯಾಯ ಒದಗಿಸುತ್ತಿದ್ದಳು. ಇದನ್ನೆಲ್ಲವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಲಿಂಗರಾಜ ಮನ್ನೂರರಿಗೆ ಒಳಗೊಳಗೆ ಮನುಷ್ಯ ಸಹಜ ಬಯಕೆಗಳು ಅಂಕುರಿಸತೊಡಗಿದವು. ತಮ್ಮ ಮನದಿಂಗಿತವನ್ನು ಭಾಗ್ಯಮ್ಮನವರಿಗೆ ತಿಳಿಸಿ ವಿವಾಹ ಬಂಧನಕ್ಕೆ ಕಾಲಿರಿಸಿದರು. ಗಂಡ, ಮದುವೆ ಎಂದರೇನೆಂದು ತಿಳಿಯುವ ಮೊದಲೇ ಸುಭದ್ರಮ್ಮ ವೈವಾಹಿಕ ಬಂಧನದಲ್ಲಿ ಸಿಲುಕಿ ಸುಭದ್ರಮ್ಮ ಮನ್ನೂರ ಎಂಬ ಹೆಸರು ಪಡೆದಳು.

ಮುಂದೆ ಈ ರಂಗಜೋಡಿ ಡಾ. ಮಾರ್‍ಲಾ ಅವರ "ಶ್ರೀ ಕಟೀಲು ದುರ್ಗಾ ಪರಮೇಶ್ವರಿ" ಕಂಪನಿಯನ್ನು ಬಿಟ್ಟು ಬೆಳಗಾಂವಿಯ ಏಣಗಿ ಬಾಳಪ್ಪನವರ "ಕಲಾವೈಭವ" ನಾಟ್ಯ ಸಂಘದಲ್ಲಿ ತಮ್ಮ ಬಣ್ಣದ ಬದುಕನ್ನು ಮುಂದುವರಿಸಿದರು.

ಕಲಾವೈಭವ ನಾಟ್ಯಸಂಘದಲ್ಲಿ "ಜಗಜ್ಯೋತಿ ಬಸವೇಶ್ವರ" ನಾಟಕದಲ್ಲಿ ಬಾಳಪ್ಪನವರು ಬಸವಣ್ಣನ ಪಾತ್ರದಲ್ಲಿ, ಲಿಂಗರಾಜ ಮನ್ನೂರರು ಬಿಜ್ಜಳನ ಪಾತ್ರದಲ್ಲಿ ಸುಭದ್ರಮ್ಮ ಗಂಗಾಂಬಿಕೆ ಹಾಗೂ ಕಲಾವತಿಯ ಪಾತ್ರದಲ್ಲಿ ನಟಿಸುತ್ತಿದ್ದರು. ಸಭಿಕರ ಗಡಚಿಕ್ಕುವ ಚಪ್ಪಾಳೆ. ಒನ್ಸಮೋರ್‌ಗಳ ಸುರಿಮಳೆ ದಿನವೂ ಇದ್ದದ್ದೇ.

ಇದೇ ಕಂಪನಿಯ ಇನ್ನೊಂದು ಪ್ರಮುಖ ನಾಟಕ 'ಹೇಮರಡ್ಡಿ ಮಲ್ಲಮ್ಮ" ಈ ಭಕ್ತಿಪ್ರಧಾನವಾದ ನಾಟಕದಲ್ಲಿ ಸುಬದ್ರಮ್ಮ 'ಮಲ್ಲಮ್ಮನ' ಪಾತ್ರ ಮಾಡುತ್ತಿದ್ದಳು. ಈ ಪಾತ್ರ ಪ್ರೇಕ್ಷಕರ ಮೇಲೆ ಎಂಥ ಪರಿಣಾಮ ಬೀರಿತ್ತೆಂದರೆ. ಮಲ್ಲಮ್ಮನ ಪಾತ್ರವನ್ನು ನೋಡುವದಕ್ಕಾಗಿಯೇ ಜನ ಗುಂಪು ಗುಂಪಾಗಿ ಬರುತ್ತಿದ್ದರಂತೆ. ಯಾವ ಪಾತ್ರವೇ ಇರಲಿ ಅದಕ್ಕೆ ಜೀವ ತುಂಬುವ ಒಬ್ಬ ಭರವಸೆಯ ನಟಿಯಾಗಿ ಬೆಳೆದಳು ಸುಭದ್ರಮ್ಮ. 'ಕುಂಕುಮ'ದಲ್ಲಿ ಭರಣಿ. ಅನುರಾಧ. 'ಲಗ್ನಬಂಧನ'ದಲ್ಲಿ ಶೀಲಾ.

'ಭಕ್ತ ಕುಂಬಾರ'ದಲ್ಲಿ ಕುಂಬಾರನ ಹೆಂಡತಿ, 'ಕುರುಕ್ಷೇತ್ರ'ದಲ್ಲಿ ದ್ರೌಪದಿ, 'ರಾಮಾಯಣ'ದಲ್ಲಿ ಸೀತಾ ಹೀಗೆ ಕಲಾವೈಭವ ನಾಟ್ಯ ಸಂಘದಲ್ಲಿ ಸತತವಾಗಿ 7-8 ವರ್ಷಗಳ ತನಕ ದುಡಿದು ಕಂಪನಿಗೆ ಲಾಭ ತಂದುಕೊಟ್ಟ ಸುಭದ್ರಮ್ಮ ಮುಂದೆ ಮಾ। ಹಿರಣ್ಣಯ್ಯನವರ ಕಂಪನಿಯಲ್ಲಿ 150ರೂ ಸಂಭಾವನೆಯ ಮೇಲೆ ಬಣ್ಣದ ಬದುಕು ಸಾಗುತ್ತದೆ.

ಮಾ। ಹಿರಣ್ಣಯ್ಯನವರ 'ಲಂಚಾವತಾರ' ನಾಟಕದಿಂದ ಸುಭದ್ರಮ್ಮನ ಲಕ್ಕೀ ಬದಲಾಯಿತು. ಈ ಲಂಚಾವತಾರ ನಾಟಕಕ್ಕೆ ಸಂಗೀತ ಸಂಯೋಜನೆ ಮಾಡಿದವರು ಯೋಗಾನರಸಿಂಹರು. ಇವರು ಸಂಗೀತಗಾರರಾಗಿ, ನಟರಾಗಿ, ಕಂಪನಿ ಮಾಲೀಕರಾಗಿ, ಕವಿಯಾಗಿ ಬಾಳಿದ ವರ್ಣರಂಜಿತ ಬದುಕು ಇವರದು. ಅಕ್ಕಮಹಾದೇವಿಯ "ಬೆಟ್ಟದಾ ಮೇಲೊಂದು ಮನೆಯಮಾಡಿ" ಈ ವಚನಕ್ಕೆ ಸಂಗೀತ ಸಂಯೋಜನೆ ಯೋಗಾನರಸಿಂಹಯ್ಯನವರದು. ಅದನ್ನು ಸುಭದ್ರಮ್ಮನಕಡೆಯಿಂದ ಮೇಲಿಂದ ಮೇಲೆ ಹಾಡಿಸುತ್ತಿದ್ದರಂತೆ.

ಹೆಣ್ ಹರಾಜ, ಮಕಮಲ್ ಟೋಪಿ, ಸದಾರಮೆ, ಬಿಕನಾಸಿ, ಭ್ರಷ್ಟಾಚಾರ ಹೀಗೆ ಹಲವು ನಾಟಕಗಳಲ್ಲಿ ಬಿಡುವಿಲ್ಲದೆ ದುಡಿದಳು ಸುಭದ್ರಮ್ಮ.

ಭವಸಾಗರದಲ್ಲಿ ಬಿದ್ದಮೇಲೆ ಈಸಿ ದಡಮುಟ್ಟಲೇ ಬೇಕಲ್ಲ. ಅದಕ್ಕಾಗಿ ಸುಭದ್ರಮ್ಮ ವೃತ್ತಿಯಿಂದ ದೂರ ಸರಿದು ಹವ್ಯಾಸಿ ಕಲಾವಿದೆಯಾಗಿ ರಂಗ ಸೇವೆ ಮಾಡತೊಡಗಿದಳು. ಇಲ್ಲಿ ಸಂಭಾವನೆಯೂ ಚನ್ನಾಗಿತ್ತು. ಹೊಗಳಿಕೆಗೆ ಹಿಗ್ಗದ, ತೆಗಳಿಕೆಗೆ ಕುಗ್ಗದ ಸ್ಥಿತಪ್ರಜ್ಞಳು ಸುಭದ್ರಮ್ಮ. ತನ್ನ ಅಭಿನಯ ಚತುರತೆಯಿಂದ ಇಂಪಾದ ಕಂಠಶ್ರೀಯಿಂದ ಗ್ರಾಮೀಣ ಜನರ ಮನಸೂರೆಗೊಂಡಳು.

ಕಂದಗಲ್ ಹನುಮಂತರಾಯರ 'ರಕ್ತರಾತ್ರಿ' ನಾಟಕದಲ್ಲಿ ದ್ರೌಪದಿಯ ಪಾತ್ರದ ಆ ಸಂಭಾಷಣೆಯನ್ನು ಕೇಳಿದರೇನೆ ಮೈನವರೇಳುತ್ತದೆ. ರಂಗಗೀತೆ ಹಾಗೂ ಅಭಿನಯ ಎರಡಕ್ಕೂ ಹೆಸರಾದ ಹೆಸರಾಂತ ಪ್ರತಿಭಾನ್ವಿತ ನಟಿ ಇವಳು. ಹಲವಾರು ಪ್ರಶಸ್ತಿಗಳು ಇವರನ್ನು ಅರಸಿಕೊಂಡು ಬಂದಿವೆ. ಆದರೂ ಏನೋ ನಿರ್ಲಿಪ್ತ ಭಾವ ಈ ಸುಭದ್ರಮ್ಮನದು. ಇವರದು ತುಂಬು ಸಂಸಾರ ಮಕ್ಕಳು ಮೊಮ್ಮಕ್ಕಳೊಂದಿಗೆ ಬಳ್ಳಾರಿಯ ಕೌಲಬಜಾರಿನ ಒಂದು ಪುಟ್ಟ ಪೊಟರೆಯಲ್ಲಿ ಈ ಕೋಗಿಲೆ ಹಾಡುತ್ತ ದಿನಗಳನ್ನು ಕಳೆಯುತ್ತಲಿದೆ. ಇಂಥವರ ಬಗ್ಗೆ ಸರಕಾರ ಕಣ್ಣು ತೆರೆಯಬೇಕಾಗಿದೆ. ಆರ್ಥಿಕವಾಗಿ ಒಂದಷ್ಟು ಸಹಾಯ ಮಾಡಿದರೇನೆ ನಶಿಸುತ್ತಿರುವ ರಂಗಭೂಮಿ ರಂಗಗೀತೆ ಮತ್ತೆ ಚೇತರಿಸಿಕೊಳ್ಳಬಹುದು.

**ಸರೋಜಮ್ಮ ಧುತ್ತರಗಿ :**

ದಿನಾಂಕ : 18-5-2009 ರಂದು ಇಲಕಲ್‌ದಿಂದ ಸುಮಾರು 12 ಕಿ.ಮೀ. ಅಂತರದಲ್ಲಿರುವ ಹಣಮಸಾಗರಕ್ಕೆ ಹೋದೆ. 80ರ ಇಳಿವಯಸ್ಸಿನ ಸ್ಥೂಲಕಾಯದ ಸರೋಜಮ್ಮಳನ್ನು ಕಂಡಾಗ ಏನೋ ಖುಷಿ. ಆರೋಗ್ಯ ಸರಿಯಿಲ್ಲದಿದ್ದರೂ ನಾವು ಹೋದತಕ್ಷಣ ಗೆಲುವಾದರು.

ಒಂದು ಕಾಲಕ್ಕೆ ರಂಗಭೂಮಿಯ ಸಾಮ್ರಾಜ್ಞಿಯಾಗಿ ಮೆರೆದ ಪಿ.ಬಿ. ಧುತ್ತರಗಿಯಂಥ ಕವಿಗಳನ್ನು (ನಾಟಕಕಾರ) ಕೈ ಹಿಡಿದ ಸರೋಜಮ್ಮ ಇವಳೇನಾ? ಎಂಬ ಪ್ರಶ್ನೆಗಳು ನನ್ನನ್ನು ಕಾಡತೊಡಗಿದವು. ಗೆಜ್ಜೆಕಟ್ಟಿ ಹೆಜ್ಜೆಹಾಕಿದ ಕಾಲುಗಳು ಇಂದು ಆಸರೆಯನ್ನು ಬಯಸುತ್ತಿದ್ದವು. ವರ್ತಮಾನದಿಂದ ಭೂತಕ್ಕೆ ಒಯ್ದಾಗ ತಮ್ಮ ಮನದ ಪುಟಗಳನ್ನು ತೆರೆದಿಟ್ಟದ್ದು ಹೀಗೆ.

1930ರಲ್ಲಿ ಚಿತ್ರದುರ್ಗದಲ್ಲಿ ಒಕ್ಕಲಿಗರ ಕುಟುಂಬದಲ್ಲಿ ಜನಿಸಿದ ಸರೋಜಮ್ಮ 6ನೇಯ ಇಯತ್ತೆಯವರೆಗೆ ಶಿಕ್ಷಣ. ಜೊತೆಗೆ ಕ್ಲಾಸಿಕಲ್ ಸಂಗೀತದಲ್ಲಿ ಸೀನಿಯರ್ ಮಾಡಿಕೊಂಡಳು. ಆದರೂ ಕಲಿಯುವ ದಾಹ ಹಿಂಗಲಿಲ್ಲ. ಮತ್ತೆ ಹದಿಮೂರು ವರ್ಷ ಕಥಕ್ಕಳಿ ನೃತ್ಯವನ್ನು ಅಭ್ಯಾಸ ಮಾಡಿದಳು.

ಹೆಣ್ಣುಮಕ್ಕಳು ಹೊಸ್ತಿಲು ಧಾಟಿ ಹೊರಬರುವುದೇ ದುಸ್ತರವಾದಂತ ಒಂದು ಕಾಲ ಇತ್ತು. ಸಂಪ್ರದಾಯದ ಬೇಲಿಯನ್ನು ದಾಟಿ ತನ್ನ ಮನದಿಚ್ಛೆಯಂತೆ ತನ್ನ ಆಸಕ್ತಿ ಕ್ಷೇತ್ರದಲ್ಲಿ ವಿಶಿಷ್ಟ ಸಾಧನೆ ಮಾಡಿದ ಮಹಿಳೆ ಸರೋಜಮ್ಮ. ಸಂಗೀತ, ನೃತ್ಯ ಎಂದರೇನೇ ಮೂಗುಮುರಿಯುವ ಮಡಿವಂತಿಕೆಯ ಸಮಾಜ ಒಂದೆಡೆಯಿತ್ತು. ದಾಸರು, ಪಾತ್ರದವರಿಗೆ ಮಾತ್ರ ಸೀಮಿತವಾದ ಈ ಕ್ಷೇತ್ರ, ಅಂಥವರನ್ನು ಅಗೌರವ ತಿರಸ್ಕಾರದಿಂದಲೇ ನೋಡುವಂತ ಒಂದು ಕಾಲ ಇತ್ತು. ಸರೋಜಮ್ಮ ಅದ್ಯಾವುದನ್ನು ಲೆಕ್ಕಿಸದೇ ವೈಚಾರಿಕ ನೆಲೆಗಟ್ಟಿನಲ್ಲಿ ನಿಂತವಳು. ತಾನು ಸಂತೋಷ ಪಡುವುದರ ಜೊತೆಗೆ ಜನರನ್ನು ಸಂತೋಷ ಪಡಿಸುವ ದಾರಿಯಲ್ಲಿ ಸಾಗುತ್ತಾಳೆ.

ಅಂದಿನ ವೃತ್ತಿರಂಗಭೂಮಿ ಸಂಗೀತ ಪ್ರಧಾನವಾದಂತ ಭೂಮಿಕೆಯಾಗಿತ್ತು. ಶಾಸ್ತ್ರೀಯ ಸಂಗೀತ, ನೃತ್ಯ ಎರಡನ್ನೂ ಮೇಳೈಸಿಕೊಂಡವಳು. ತನ್ನ 7ನೇ ವಯಸ್ಸಿನಿಂದಲೇ ರಂಗಭೂಮಿಗೆ ಪಾದಾರ್ಪಣೆ ಮಾಡುತ್ತಾಳೆ. ಗುಳೇದಗುಡ್ಡ ಹುಚ್ಚಪ್ಪ ಹಾಗೂ ದೇಶಪಾಂಡೆಯವರು ಕೂಡಿ ಮಾಡಿದ 'ಬೆಳಗಾಂವ ನಾಟಕ ಕಂಪನಿ', ಗುಬ್ಬಿ ವೀರಣ್ಣನವರ ಕಂಪನಿ, ಸುಬ್ಬಯ್ಯನಾಯ್ಡು ಕಂಪನಿ, ಮಾಸ್ಟರ್ ಹಿರಣ್ಣಯ್ಯನವರ ಕಂಪನಿ, ಗೋಕಾಕ ಕಂಪನಿ, ಹಲಗೇರಿ ಜಟ್ಟೆಪ್ಪನವರ ಕಂಪನಿ, ಕೆ.ಬಿ.ಆರ್. ಡ್ರಾಮಾ ಕಂಪನಿ ಹೀಗೆ ಹಲವಾರು ಕಂಪನಿಗಳಲ್ಲಿ ಪೌರಾಣಿಕ, ಸಾಮಾಜಿಕ, ಕೌಟುಂಬಿಕ, ನಾಟಕಗಳಲ್ಲಿ ಮಿಂಚಿ ತಮ್ಮದೇ ಛಾಪನ್ನು ಒತ್ತಿದ್ದಾರೆ. ಸಂಪತ್ತಿಗೆ ಸವಾಲ್, ಇಲಕಲ್ ಸೀರೆ, ಕುರುಕ್ಷೇತ್ರ, ರಕ್ತರಾತ್ರಿ, ನಾಟಕಗಳೂ ಒಳ್ಳೇಯ ಹೆಸರನ್ನು ತಂದುಕೊಟ್ಟವು. ಸರೋಜಮ್ಮನವರ ಕೈಯಲ್ಲಿ ಸಾವಿರಾರು ಜನರು ನೃತ್ಯವನ್ನು

ಕಲಿತಿದ್ದಾರೆ. ಜಯಲಕ್ಷ್ಮಿ ಪಾಟೀಲ, ಬದಾಮಿ ಪ್ರೇಮಾ, ಗುಳೇದಗುಡ್ಡ ಪ್ರೇಮಾ ಇವರೆಲ್ಲಾ ಇವರ ಗರಡಿಯಲ್ಲಿಯೇ ತಯ್ಯಾರಾದವರು.

ರಂಗಗೀತೆಗಳಿಂದ ರಂಗಭೂಮಿಯನ್ನು ರಂಗೇರಿಸಿದ ಪ್ರತಿಭಾನ್ವಿತ ನಟಿ. ಸರೋಜಮ್ಮ ತಮ್ಮ ವಿಶಿಷ್ಟ ನಟನೆಯಿಂದ ಪ್ರೇಕ್ಷಕರ ಮನಗೆದ್ದಿದ್ದಾರೆ. ಸರೋಜಮ್ಮಳದು ನಿಜವಾಗಿಯೂ ಕಂಚಿನ ಕಂಠ. 'ಕಿತ್ತೂರ ಚನ್ನಮ್ಮ' ನಾಟಕದಲ್ಲಿನ ಚನ್ನಮ್ಮನ ಒಂದು ಸಂಭಾಷಣೆಯನ್ನು ಕೇಳಿದಾಗ ಮೈನವಿರೆದ್ದಿತ್ತು. ರಂಗಗೀತೆಯನ್ನು ಕೇಳ್ತಾ ಇದ್ದರೆ ಇನ್ನೂ ಹಾಗೆ ಕೇಳಬೇಕೆನಿಸುತ್ತಿತ್ತು. ಆದರೆ ಆರೋಗ್ಯ ಸರಿ ಇಲ್ಲದ ಸರೋಜಮ್ಮನಿಗೆ ಹೆಚ್ಚು ತೊಂದರೆ ಕೊಡಲು ಮನಸ್ಸು ಒಪ್ಪಲಿಲ್ಲ.

1968–69ರಲ್ಲಿ ಸರೋಜಮ್ಮ ಒಂದುಕಂಪನಿ ಕಟ್ಟಿದ್ದಳು. "ತ್ರಿಪುರ ಸುಂದರಿ ನಾಟ್ಯ ಸಂಘ.' ಆದರೆ ಅದು ಬಹಳ ದಿನ ಉಳಿಯಲಿಲ್ಲ (ನಡೆಯಲಿಲ್ಲ). ಕೇವಲ ಒಂದೇ ಒಂದು ಕ್ಯಾಂಪದವರೆಗೆ ಇತ್ತು. ಒಬ್ಬ ಕಂಪನಿಯ ಮಾಲೀಕಳಾಗುವುದಕ್ಕಿಂತ ಒಬ್ಬ ಕಲಾವಿದೆಯಾಗಿರುವುದೇ ಸೂಕ್ತ ಎನಿಸಿರಬಹುದು. "ಅರಸನ ಅರಸಿಯಾಗಿರುವುದಕ್ಕಿಂತ ಬಡವನ ಹೆಂಡತಿಯಾಗಿರುವುದೇ ಲೇಸು" ಎಂಬ ಭಾವ ಅವಳದು.

ಈ ಇಳಿವಯಸ್ಸಿನಲ್ಲಿಯೂ ಕೂಡಾ ಇನ್ನೂ ಪಾತ್ರಮಾಡುವ ಹುಮ್ಮಸ್ಸು ಕಡಿಮೆಯಾಗಿಲ್ಲ. 2005ರಲ್ಲಿ "ನಿಸರ್ಗ ಸಂಗೀತ ವಿದ್ಯಾಲಯ" ಸ್ಥಾಪನೆ, ಅದರ ಮೂಲಕ ತಮ್ಮ ಸಂಗೀತ ಸೇವೆಯನ್ನು ಮುಂದುವರೆಸಿಕೊಂಡು ಹೊರಟಿದ್ದಾರೆ.

"ರಂಗಭೂಮಿ ನನಗೆ ನೆಮ್ಮದಿಯನ್ನು ಕೊಟ್ಟಿದೆ. ನಶಿಸುತ್ತಿರುವ ಈ ರಂಗಭೂಮಿ ಮತ್ತೆ ಮೊದಲಿನ ಸ್ಥಿತಿಗೆ ಬಂದೇ ಬರುತ್ತದೆ" ಎಂಬ ಭರವಸೆ ಇವರಿಗಿದೆ.

ಕಲೆಗೆ ಬೆಲೆ ಯಾವಾಗಲೂ ಇದ್ದೇ ಇದೆ. ಕೆಲಸದಲ್ಲಿ ನಿಷ್ಠೆ, ಭಯ, ಭಕ್ತಿ, ಛಲ ಎಲ್ಲಕ್ಕಿಂತ ಹೆಚ್ಚಾಗಿ ದೈವಬಲ ಬೇಕು ಎನ್ನುತ್ತಾರೆ. "ರೊಕ್ಕ ಇದ್ದಾಗ ಸೊಕ್ಕ ಇರ್ತದ ಇಳಿಯವಸ್ಸಿನ್ಯಾಗ ಅದ್ನ ಅನುಭವಿಸ್ತಿವಿ" ಎಂದು ಪ್ರಾಂಜಲ ಮನಸ್ಸಿನಿಂದ ಒಪ್ಪಕೊಳ್ಳುತ್ತಾರೆ ಸರೋಜಮ್ಮ.

ಒಂದು ಕಾಲಕ್ಕೆ ನಾಟಕದವರು ಅಂದ್ರೆ (ಅದರಲ್ಲೂ ಹೆಣ್ಣುಮಕ್ಕಳು) ಕೀಳಾಗಿ ಕಾಣುವ ಜನರೇ ಹೆಚ್ಚು. ಊಟಕ್ಕೆ ಕುಳಿತರೆ, ಕುಳಿತ ಜಾಗಕ್ಕೆ ನೀರು ಸಿಂಪಡಿಸುತ್ತಿದ್ದರು. ಸಾಮಾಜಿಕವಾಗಿ ನಾಟಕದ ಹೆಣ್ಣುಮಕ್ಕಳು ತಿರಸ್ಕಾರಕ್ಕೆ ಒಳಗಾದರೆ, ಸಾಂಸ್ಕೃತಿಕವಾಗಿ ಅವರಿಗೆ ಬೆಲೆ ಇತ್ತು. ಹೇಗೆಂದರೆ ನಾಟಕದಲ್ಲಿ ಹೆಣ್ಣುಮಕ್ಕಳು ಪಾತ್ರ ಮಾಡ್ತಾರೆ ಅಂದ್ರೆ ಕಲೆಕ್ಷನ್ ಚೆನ್ನಾಗಿ ಆಗುತ್ತಿತ್ತು. ಕಂಪನಿ ಬೆಳೀಲಿಕ್ಕೆ ಸ್ತ್ರೀ ಪಾತ್ರಧಾರಿಗಳೇ ಕಾರಣ. ಸ್ತ್ರೀಯರು ಇರದಿದ್ದರೆ ನಾಟಕ ನಿಲ್ಲುತ್ತದೆ ಎಂಬ ಸ್ಥಿತಿ ರಂಗಭೂಮಿಗೆ ಬಂತು

ಎಂದು ತಮ್ಮ ಅನುಭವಗಳನ್ನು ಹಂಚಿಕೊಂಡ ಸರೋಜಮ್ಮಗೆ ನಾಟಕ ಅಕ್ಯಾಡಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳು ಬಂದಿವೆ.

'ಹೆಣ್ ಹರಾಜ್' ನಾಟಕದಲ್ಲಿ ಚನ್ನಿಯ ಪಾತ್ರ ನೋಡಿ ದ.ರಾ. ಬೇಂದ್ರೆ ಇವರನ್ನು ಮನೆಗೆ ಕರೆದುಕೊಂಡು ಹೋಗಿದ್ದರಂತೆ. ಸಂಗೀತಗಾರ್ತಿಯಾಗಿ, ನಟಿಯಾಗಿ, ಕಂಪನಿಯ ಒಡತಿಯಾಗಿ ಒಬ್ಬ ನೃತ್ಯಗಾರ್ತಿಯಾಗಿ ಬಹುಮುಖ ಪ್ರತಿಭೆಯ ಒಂದು ಕಾಲಕ್ಕೆ ಬೇಡಿಕೆಯ ನಟಿಯಾಗಿದ್ದಳು ಸರೋಜಮ್ಮ.[49]

[49] 18-5-2009 ರಂದು ಜನಮಸಾಗರದಲ್ಲಿ ಸಂದರ್ಶನ ಮಾಡಿದ್ದು.

## ವೃತ್ತಿರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆಗಳು

ನಮ್ಮದು ಪುರುಷ ಪ್ರಧಾನವಾದ ಸಮಾಜ. ಎಲ್ಲಾ ಕ್ಷೇತ್ರಗಳಲ್ಲಿಯೂ ಮಹಿಳೆಯನ್ನು ಹತ್ತಿಕ್ಕಲು ಪ್ರಯತ್ನಿಸಲಾಗಿದೆ. ಇದಕ್ಕೆ ವೃತ್ತಿರಂಗಭೂಮಿಯೂ ಹೊರತಾಗಿಲ್ಲ.

ನಮ್ಮ ವೃತ್ತಿರಂಗಭೂಮಿಗೆ 130 ವರ್ಷಗಳ ಇತಿಹಾಸವಿದೆ. ಆದರೆ ಮಹಿಳೆಯೊಬ್ಬಳು ವೃತ್ತಿರಂಗಭೂಮಿಗೆ ಪ್ರವೇಶಿಸಲು 25 ವರ್ಷಗಳೇ ಬೇಕಾದವು. 1901 ರಿಂದ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಉತ್ತುಂಗದ ದಿನಗಳೆಂದು ಹೇಳಬಹುದು. 1945 ನೆಯ ಇಸ್ವಿಯವರೆಗೂ ಈ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಕೆಳವರ್ಗದ ಯಾವುದೇ ಕಟ್ಟುಪಾಡುಗಳಿಗೆ ಒಳಗಾಗದ ಮಹಿಳೆಯರೇ ಇದ್ದರು.

ಆರಂಭದಲ್ಲಿ ಇವರೆಲ್ಲಾ ಹೊಟ್ಟೆಪಾಡಿಗಾಗಿ ವೃತ್ತಿರಂಗಭೂಮಿಯನ್ನು ಆಶ್ರಯಿಸಿದ್ದರೂ, ಉತ್ತರ ಕರ್ನಾಟಕದ ವೃತ್ತಿರಂಗ ಭೂಮಿಗೆ ಇವರ ಕೊಡುಗೆ ಅಪಾರವಾಗಿದೆ. ದಲಿತರೂ, ಅನಕ್ಷರಸ್ಥರಾದ ಇವರು ತಮ್ಮ ಜೀವನವನ್ನೇ ವೃತ್ತಿರಂಗಭೂಮಿಗೆ ಸವೆಸಿದ್ದಾರೆ. ಇವರ ಬದುಕು, ಇವರು ಮಾಡಿದ ಸಾಧನೆ ಪಟ್ಟಿರುವ ಕಷ್ಟಗಳೇ ಇವರ ಕೊಡುಗೆಯನ್ನು ಸ್ಪಷ್ಟಪಡಿಸುತ್ತದೆ. ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

1) ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಮಹಿಳೆಯರಿಂದ ಏನನ್ನು ಪಡೆದುಕೊಂಡಿತೋ ಅದೆಲ್ಲವೂ ಮಹಿಳೆಯರ ಕೊಡುಗೆ ಎಂದು ಭಾವಿಸಬೇಕಾಗುತ್ತದೆ.

   1879 ರಿಂದ 1900 ರವರೆಗಿನ ಅವಧಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಪ್ರಾಯೋಗಿಕ ಕಾಲಘಟ್ಟವೆಂದು ಕರೆಯಲ್ಪಡುತ್ತದೆ. ಯಾಕೆಂದರೆ ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿಯನ್ನು ಪ್ರಾರಂಭಿಸಿದ ಸಕ್ಕರಿ ಬಾಳಾಚಾರ್ಯರು (ಶಾಂತ ಕವಿಗಳು) ವಾರದಲ್ಲಿ ಮೂರು ದಿನ ಮಾತ್ರ ನಾಟಕವಾಡುತ್ತಿದ್ದರು. ಹೀಗಾಗಿ ಅವು ಅವರಿಗೆ ಹಾಗೂ ಅವರ ತಂಡದವರಿಗೆ ಪೂರ್ಣ ಪ್ರಮಾಣದ ವೃತ್ತಿಯಾಗಿರಲಿಲ್ಲ. ಅಲ್ಲದೆ ನಟರೂ ಕೂಡಾ ನಾಟಕವಿಲ್ಲದ ದಿನಗಳಲ್ಲಿ ಧಾರ್ಮಿಕ ಬೋಧನಾ ಕಾರ್ಯ ಮಾಡಿಕೊಂಡಿರುತ್ತಿದ್ದರು. ನಾಟಕಗಳಿಗೆ ಹೆಚ್ಚಿನ ರಂಗ ಪರಿಕರಗಳಿರುತ್ತಿರಲಿಲ್ಲ. ಪ್ರದರ್ಶನ ಶುಲ್ಕ (ಟಿಕೇಟ್)ವಿರುತ್ತಿದ್ದುದರಿಂದ ವೃತ್ತಿ ಮಂಡಳಿ ಎಂದು ಹೇಳಬೇಕಾಗುತ್ತದೆ. ಆದ್ದರಿಂದ ಈ ಅವಧಿ ಪ್ರಾಯೋಗಿಕ ಘಟ್ಟವಾಗಿದೆ.

ಈ ಹಂತದಲ್ಲಿ ಮನರಂಜನೆಗಿಂತ ನೀತಿಬೋಧೆ ಪ್ರಧಾನವಾಗಿದ್ದರಿಂದ ಮಹಿಳೆಯರ ಪ್ರವೇಶವಾಗಲಿಲ್ಲ. ಕೆಲವು ನಾಟಕಗಳಲ್ಲಿ ಒಂದೋ ಎರಡೋ ಸ್ತ್ರೀ ಪಾತ್ರಗಳಿರುತ್ತಿದ್ದವು. ಅವುಗಳನ್ನು ಪುರುಷರೇ ಮಾಡಿಕೊಂಡು ಬರುತ್ತಿದ್ದರು.

1901 ರಲ್ಲಿ ಸುಸಜ್ಜಿತ ರಂಗಸಜ್ಜಿಕೆಯೊಂದಿಗೆ ವೃತ್ತಿರಂಗಭೂಮಿಗೆ ಮಹಿಳೆಯನ್ನು ಕರೆತಂದವರು ಶಿವಮೂರ್ತಿಸ್ವಾಮಿ ಕಣಬರಗಿಮಠರು. ಅಲ್ಲಿಯವರೆಗೂ ಕೆಲ ಮಂಡಳಿಗಳಲ್ಲಿ ಪುರುಷರೇ ಸ್ತ್ರೀ ಪಾತ್ರಗಳನ್ನು ಮಾಡಿಕೊಂಡಿರುತ್ತಿದ್ದರು. (ಅದರ ನಂತರವೂ ಕೂಡಾ) ಜಾಲಿಹಾಳ ವೀರಯ್ಯ, ನೀಲಕಂಠಪ್ಪ ಹಮ್ಮಿಗಿ, ಏಣಗಿ ಬಾಳಪ್ಪ ಮುಂತಾದವರು ಸ್ತ್ರೀ ಪಾತ್ರಗಳನ್ನು ಎಷ್ಟೇ ಸಮರ್ಥವಾಗಿ ಅಭಿನಯಿಸಿದರೂ ಕೂಡಾ ಸ್ತ್ರೀ ಸಹಜ ಹಾವಭಾವಗಳ ಕೊರತೆ ಪ್ರೇಕ್ಷಕರಿಗೆ ಎದ್ದು ಕಾಣುತ್ತಿತ್ತು. ಸ್ತ್ರೀ ಪಾತ್ರ ಮಾಡುವವರು ಪುರುಷರು ಎನ್ನುವ ವಿಷಯ ಪ್ರೇಕ್ಷಕರಿಗೆ ಮೊದಲೇ ಗೊತ್ತಿರುತ್ತಿತ್ತು. ಎಲ್ಲೋ ಒಂದು ಕಡೆ ಅವರಿಗೆ ಇರಿಸು ಮುರಿಸಾಗುತ್ತಿತ್ತು. ಎಷ್ಟೇ ಅಲಂಕಾರ ಮಾಡಿಕೊಂಡರೂ ಪ್ರಕೃತಿದತ್ತ ಸಹಜತೆ ಕಂಡು ಬರುತ್ತಿರಲಿಲ್ಲ. ಯಾವಾಗ ಮಹಿಳೆಯರು ವೃತ್ತಿರಂಗಭೂಮಿಗೆ ಪ್ರವೇಶಿಸಿದರೋ ಆಗ ಸ್ತ್ರೀ ಪಾತ್ರಗಳಿಗೆ ಸಹಜತೆ ಬಂತು. ಸ್ತ್ರೀ ಪಾತ್ರಗಳಿಗೆ ಸಹಜತೆ ತಂದು ಕೊಟ್ಟುದು ಮಹಿಳೆಯರ ಮೊದಲ ಕೊಡುಗೆ.

2. ಹಿಂದೆ ನಾವು ನೋಡಿದಂತೆ ರಾಧಾನಾಟ, ದಾಸರಾಟ, ಶ್ರೀ ಕೃಷ್ಣ ಪಾರಿಜಾತಗಳಲ್ಲಿ ಮಹಿಳೆ ಪಾತ್ರ ಮಾಡಿದ್ದುಂಟು. ಅದರಲ್ಲೂ ಶ್ರೀ ಕೃಷ್ಣ ಪಾರಿಜಾತವನ್ನು ಕರ್ನಾಟಕದ ಮೂಲೆ ಮೂಲೆಗೂ ತಲುಪಿಸಿದವಳು ಕೌಜಲಗಿ ನಿಂಗವ್ವ ಅಷ್ಟೇ ಅಲ್ಲ ಮುಂದೆ ವೃತ್ತಿರಂಗಭೂಮಿಯಲ್ಲೂ ಮಹಿಳೆಯರ ಪ್ರವೇಶಕ್ಕೆ ಪ್ರೇರಣೆಯಾದವಳು. ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಪ್ರವೇಶ ಆಕರ್ಷಕವಾಗಿಯೇ ಕಂಡಿರಬಹುದು. ಸ್ತ್ರೀ ಪಾತ್ರಗಳಲ್ಲಿ ಪುರುಷರನ್ನು ನೋಡಿದ್ದ ಪ್ರೇಕ್ಷಕರಿಗೆ ಮಹಿಳೆಯರ ಅಭಿನಯ ಸಹಜ ಕುತೂಹಲವನ್ನು ಕೆರಳಿಸಿರಬಹುದು. ಪ್ರಾರಂಭದಲ್ಲಿ ಮಹಿಳೆಯರು ಹೇಗೆ ಪಾತ್ರ ನಿರ್ವಹಿಸುತ್ತಾರೋ ಎಂದು ಜನ ನಾಟಕಗಳಿಗೆ ಬರತೊಡಗಿದರು. ನಂತರದಲ್ಲಿ ಅವರ ಸಂಗೀತ ಮೆಚ್ಚಿದವರು ಅನೇಕರು ಅಭಿನಯಕ್ಕೆ ಮಾರುಹೋದರು ಕೆಲವರು. ಸೌಂದರ್ಯಕ್ಕೆ ಮನಸೋತವರು ಕೆಲವರು. ಹೀಗೆ ನಾನಾ ಕಾರಣಗಳಿಗಾಗಿ ಜನ ನಾಟಕ ಪ್ರದರ್ಶನಗಳಿಗೆ ಬರತೊಡಗಿದರು. ಇದರಿಂದ ವೃತ್ತಿರಂಗಭೂಮಿಯೆಡೆಗೆ ಪ್ರೇಕ್ಷಕರ ಆಕರ್ಷಣೆ ಹೆಚ್ಚಾಯಿತೆಂದು ಹೇಳಬಹುದು. ಇದು ಕೂಡಾ ಮಹಿಳೆಯರ ಕೊಡುಗೆ ಎಂದೇ ಹೇಳಬಹುದು.

3. ವೃತ್ತಿ ಮಂಡಳಿಗಳ ಮಾಲೀಕರು ಮಂಡಳಿಯ ಆದಾಯ ಹೆಚ್ಚಿಸಲು ಅನೇಕ ಕಸರತ್ತುಗಳನ್ನು ಮಾಡುತ್ತಿದ್ದರು. ಆಕರ್ಷಕ ರಂಗಪರಿಕರಗಳನ್ನು ತಯ್ಯಾರಿಸುವುದರಿಂದ ಹಿಡಿದು ನಟರಿಗೆ ಬೆಲೆಬಾಳುವ ವಸ್ತ್ರಗಳನ್ನು (ಪ್ರಸಾದನ) ತರಿಸುತ್ತಿದ್ದರು. ಸೀಮೆ ಎಣ್ಣೆಯಿಂದ ಉರಿಯುವ ಗ್ಯಾಸಗಳ ಬದಲಿಗೆ ಡೈನಾಮೊ ತರಿಸಿ ಬಣ್ಣದ ಬೆಳಕಿನ ಚಮತ್ಕಾರ ತೋರಿಸಿದರು. ಗರುಡ ಸದಾಶಿವರಾಯರಂತೂ ಪೌರಾಣಿಕ ನಾಟಕದ ಸಿಂಹಾಸನಕ್ಕೆ ನಾಲ್ವತ್ತು ತೊಲಿ ಬಂಗಾರದ ತಗಡನ್ನೆ ಬಡಿಸಿದ್ದರಂತೆ. ಇನ್ನು ಕೆಲವರು ಯುದ್ಧದ ಸನ್ನಿವೇಶಗಳನ್ನು ವೈಭವಿಕರಿಸುವುದಕ್ಕೆ ಜೀವಂತ ಆನೆ, ಕುದುರೆಗಳನ್ನು ರಂಗದ ಮೇಲೆ ತಂದರು.

ಆದರೆ ಇವೆಲ್ಲವುಗಳನ್ನು ಮೀರಿ ಮಹಿಳೆಯರು ವೃತ್ತಿರಂಗಭೂಮಿಯಲ್ಲಿ ಹೆಚ್ಚು ಆಕರ್ಷಕವಾಗಿ ಬೆಳೆದರು. ಸಹಜ ಅಭಿನಯ, ಶರೀರ ಶಾರೀರ ಸೌಂದರ್ಯಗಳಿಂದ ಪ್ರೇಕ್ಷಕರನ್ನು ಸೆರೆಹಿಡಿದರು.

ಪ್ರಕಾಶ ಕಡಪಟ್ಟಿಯವರು ಹುಬ್ಬಳ್ಳಿಯಲ್ಲಿ 'ಚನ್ನಪ್ಪ ಚನ್ನಗೌಡ' ನಾಟಕವನ್ನು ವರ್ಷಾನುಗಟ್ಟಲೆ ಆಡಿದರು. ಈ ನಾಟಕದ ಪ್ರಮುಖ ಆಕರ್ಷಣೆ ಎಂದರೆ, ಸುನಂದಾ ಕಡಪಟ್ಟಿಯವರ ಪ್ರೌಢ ಅಭಿನಯವೇ ಕಾರಣ. ಇತ್ತೀಚಿನ ಉದಾರಹಣೆಯೆಂದರೆ, ಗುಲಬರ್ಗಾದಲ್ಲಿ ಒಂದು ಮಂಡಳಿ "ಎಚ್ಚರ ತಂಗಿ ಎಚ್ಚರ" ನಾಟಕ ಏಳುನೂರಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡಿತು. ಈ ನಾಟಕದಲ್ಲಿ ಅನ್ನಪೂರ್ಣಾ ಸಾಗರ ಎಂಬ ಕಲಾವಿದೆ ಗೋದಾವರಿ (ಖಳನಾಯಕಿಯ) ಪಾತ್ರ ಮಾಡುತ್ತಿದ್ದಳು. ಈ ನಾಟಕವನ್ನು ಒಬ್ಬ ಪ್ರೇಕ್ಷಕ ದಿನಾಲು ಬಂದು ನೋಡುತ್ತಿದ್ದನಂತೆ. ಆ ಪಾತ್ರದ ಪ್ರವೇಶವಾಗುತ್ತಲೇ ಪ್ರೇಕ್ಷಕ ಸಿಟ್ಟಿನಿಂದ "ಬಂದ್ಲ ನೋಡ್ರಿ ಹುಚ್ಚರಂಡೀ" ಎಂದು ಬಯ್ಯುತ್ತಿದ್ದನಂತೆ. ಆ ಕಲಾವಿದೆ ಪರದೆಯ ಹಿಂದುಗಡೆ ಹೋಗಿ ಅತ್ತು ಬಿಡುತ್ತಿದ್ದಳಂತೆ.

ಸ್ವಲ್ಪ ಹಿಂದಕ್ಕೆ ಹೋಗಿ ನೋಡಿದರೆ ದ್ರೌಪದಿ ಪಾತ್ರದಲ್ಲಿ ಸುಶೀಲ ಬಸರೂರ, ಕಿತ್ತೂರ ಚನ್ನಮ್ಮಳಾಗಿ ಗದಗ ರತ್ನಾ, ಚಿತ್ರಾಂಗದೆಯ ಪಾತ್ರದಲ್ಲಿ ವಜೀರಬಾಯಿ ಗದಗ ತುಂಬ ಹೆಸರು ಮಾಡಿದವರು. ಈ ರೀತಿಯಲ್ಲಿ ರಂಗಮಂದಿರಕ್ಕೆ ಪ್ರೇಕ್ಷಕರ ಆಗಮನ ಹೆಚ್ಚಿದಂತೆ ಮಂಡಳಿಗಳ ಆದಾಯ ಗಣನೀಯವಾಗಿ ಹೆಚ್ಚಾಗಿದ್ದು ಗೊತ್ತಾಗುತ್ತದೆ. ಇದು ಮಹಿಳೆಯರ ಮಹತ್ವದ ಕೊಡುಗೆಯಾಗಿ ಕಂಡುಬರುತ್ತದೆ.

4. ಮಹಿಳೆಯರ ಪ್ರವೇಶದ ನಂತರ ವೃತ್ತಿ ಮಂಡಳಿಗಳ ಸಂಖ್ಯೆ ಹೆಚ್ಚಾದುದು ಅಂಕಿ ಅಂಶಗಳಿಂದಲೇ ತಿಳಿದು ಬರುತ್ತದೆ. 1877 ರಿಂದ 1900 ರವರೆಗೆ ಕೇವಲ ನಾಲ್ಕು ಮಂಡಳಿಗಳು ಹುಟ್ಟಿಕೊಂಡಿದ್ದವು. 1901 ರ ನಂತರ ಅಂದರೆ ಮಹಿಳೆಯರ ಪ್ರವೇಶದ ನಂತರ ಅಂದರೆ 1909 ರ ವೇಳೆಗೆ

ಹೊಸದಾಗಿ 3 ಮಂಡಳಿಗಳು ಜನ್ಮತಾಳಿದವು. ಮುಂದಿನ ಹತ್ತು ವರ್ಷಗಳಲ್ಲಿ ಮತ್ತೆ 8 ಮಂಡಳಿಗಳು ಹುಟ್ಟಿಕೊಂಡರೆ, 1925 ರಿಂದ 1935 ರಷ್ಟೊತ್ತಿಗೆ ಹೊಸದಾಗಿ 25 ಮಂಡಳಿಗಳು ಸ್ಥಾಪನೆಯಾದವು.

ಉತ್ತರ ಕರ್ನಾಟಕದ ಈ ಅಂಕಿ ಸಂಖ್ಯೆಗಳು ಪ್ರಮುಖ ಹಾಗೂ ಹೆಚ್ಚು ಅವಧಿ ಬಾಳಿದ ಮಂಡಳಿಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ಹೊಸ ಹುರುಪಿನಲ್ಲಿ ಮಂಡಳಿಗಳನ್ನು ಸ್ಥಾಪಿಸಿ ಮಂಡಳಿಗಳನ್ನು ಮುಂದುವರಿಸಿಕೊಂಡು ಹೋಗಲು ಅಸಮರ್ಥವಾಗಿ ಅಲ್ಪಾವಧಿಯಲ್ಲೇ ಮುಚ್ಚಿಹೋದ ಮಂಡಳಿಗಳು ಅದೆಷ್ಟೋ ಇವೆ. ಈ ಅಂಕಿಅಂಶಗಳಿಂದ ನಮಗೆ ತಿಳಿದು ಬರುವುದೇನೆಂದರೆ, ಮಹಿಳೆಯರ ಪ್ರವೇಶದ ನಂತರ ವೃತ್ತಿ ಮಂಡಳಿಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಾದವು.

5. ಉತ್ತರ ಕರ್ನಾಟಕದಾದ್ಯಂತ ವೃತ್ತಿಮಂಡಳಿಗಳು ಹೆಚ್ಚಾದಂತೆ ವೃತ್ತಿ ರಂಗಭೂಮಿಯು ಜನಪ್ರಿಯ ಮನರಂಜನಾ ಸಾಧನವಾಗಿ ಜನಮಾನಸದಲ್ಲಿ ನೆಲೆಯೂರಿತು. ಮಂಡಳಿಗಳು ಹೆಚ್ಚಾದಂತೆ ಮಹಿಳೆಯರಿಗೂ ಬೇಡಿಕೆ ಹೆಚ್ಚಾಯಿತು. ಈ ಬೇಡಿಕೆಯನ್ನು ಯಾರು ಬೇಕಾದವರು ಪೂರೈಸುವುದಕ್ಕಾಗುತ್ತಿರಲಿಲ್ಲ. ಅಭಿನಯದ ಅನುಭವ ಇದ್ದವರು ವೃತ್ತಿರಂಗಭೂಮಿಗೆ ಅಗತ್ಯವಿತ್ತು. ಈ ಅಗತ್ಯವನ್ನು ಪೂರೈಸಲು ವೃತ್ತಿಮಂಡಳಿಗಳೇ ಮಂಡಳಿಯಲ್ಲಿ ತರಬೇತಿ ಶಾಲೆಯನ್ನು ನಡೆಸುತ್ತಿದ್ದರು. ಇಂಥ ತರಬೇತಿಗೆ ಹೆಚ್ಚು ಮಹತ್ವ ನೀಡಿದವರೆಂದರೆ, ಕೊಣ್ಣೂರು ಮಂಡಳಿಯ ಶಿವಮೂರ್ತಿ ಸ್ವಾಮಿಗಳು, ಗೋಕಾಕ ಕಂಪನಿಯ ಬಸವಣ್ಣೆಪ್ಪನವರು, ಶಿರಹಟ್ಟಿ ಮಂಡಳಿಯ ವೆಂಕೋಬರಾಯರು, ಗರುಡ ಸದಾಶಿವರಾಯರು ಇತ್ಯಾದಿ.

ಇವರೆಲ್ಲ ನಾಟಕ ಪ್ರದರ್ಶನದ ನಂತರ ಉಳಿದ ಅವಧಿಯನ್ನು ಸಂಗೀತ, ವಾದ್ಯ, ಅಭಿನಯ ಮುಂತಾದವುಗಳ ತರಬೇತಿಗಾಗಿ ಬಳಸುತ್ತಿದ್ದರು. ಈ ರೀತಿಯಾಗಿ ತರಬೇತಿ ಪಡೆದವರು ನಾಡಿನಾದ್ಯಂತ ಬೇರೆ ಬೇರೆ ವೃತ್ತಿ ಮಂಡಳಿಗಳಲ್ಲಿ ಸೇರಿ ರಂಗಭೂಮಿಗಾಗಿ ದುಡಿದದ್ದನ್ನು ಕಾಣಬಹುದಾಗಿದೆ. ಇದರಲ್ಲಿ ಮಹಿಳೆಯರೂ ಇದ್ದರೆಂಬುದನ್ನು ಗಮನಿಸಬಹುದು. ಇದರಿಂದಾಗಿ ಮಹಿಳೆಯರ ಅಭಿನಯವೂ ವೃತ್ತಿರಂಗಭೂಮಿಯಲ್ಲಿ ಒಂದು ವೃತ್ತಿಯಾಗಿ ಪರಿವರ್ತನೆಗೊಂಡದ್ದನ್ನು ನಾವು ಕಾಣಬಹುದು.

6. ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರು ರಂಗಭೂಮಿಯನ್ನು ಜನಪ್ರಿಯಗೊಳಿಸಿದರು. ಆಕರ್ಷಕ ಕ್ಷೇತ್ರವನ್ನಾಗಿಸಿದರು. ಜೊತೆಗೆ ಒಳ್ಳೊಳ್ಳೆ ಹೆಸರುವಾಸಿ ಕಲಾವಿದರೆನಿಸಿಕೊಂಡರು. ಇದರಿಂದಾಗಿ ಮಂಡಳಿಗಳಿಗೆ ಹಣವು ಸಾಕಷ್ಟು ಹರಿದು

ಬರುವಂತಾಯಿತು. ಮಂಡಳಿಯ ಮಾಲೀಕರು ಕಲಾವಿದರಿಗೆ ಸಂಬಳ ರೂಪದಲ್ಲಿ ಸ್ವಲ್ಪ ಹಣಕೊಟ್ಟು ತಾವು ಆಸ್ತಿಪಾಸ್ತಿ ಮಾಡಿಕೊಳ್ಳತೊಡಗಿದರು. ಆಗ ತಾವು ಶೋಷಣೆಗೆ ಒಳಗಾಗುತ್ತಿರುವುದು ಕೆಲವು ಮಹಿಳಾ ಕಲಾವಿದೆಯರ ಗಮನಕ್ಕೆ ಬಂದಿರಬಹುದು. ಹೀಗೆ ಬೇರೆಯವರ ಮಂಡಳಿಗಳಲ್ಲಿ ದುಡಿದು ಸೂಕ್ತ ಪ್ರತಿಫಲವಿಲ್ಲದೆ ಒದ್ದಾಡುವುದು ಬೇಡವೆಂದು ಕೆಲವರಿಗೆ ಅನಿಸಿರಬಹುದು. ಇಂಥ ಕೆಲವು ಧೈರ್ಯವಂತ ಮಹಿಳಾ ಕಲಾವಿದರು ತಾವೇ ಸ್ವತಃ ಕಂಪನಿ ಕಟ್ಟಲು ಮುಂದಾದರು.

ಹೀಗೆ ಮುನ್ನುಗ್ಗಿದವರಲ್ಲಿ ಲಕ್ಷ್ಮೇಶ್ವರದ ಬಚ್ಚಾಸಾನಿ ಮೊದಲಿಗಳು. ರಂಗಭೂಮಿಯ ಎಲ್ಲಾ ಕೆಲಸ ಕಾರ್ಯಗಳಿಗೂ ಮಹಿಳೆಯರನ್ನೇ ನೇಮಿಸಿಕೊಂಡಿದ್ದೊಂದು ವಿಶೇಷ. ಮಂಡಳಿಯನ್ನು ಕಟ್ಟಿದ ಮೊದಲ ಮಹಿಳೆ ಎಂಬ ಹೆಗ್ಗಳಿಕೆಗೂ ಇವಳು ಪಾತ್ರಳಾದಳು.

ಇವಳ ನಂತರ ವಾಮನರಾವ್ ಮಾಸ್ತರರ "ವಿಶ್ವಗುಣಾದರ್ಶ ಮಂಡಳಿ"ಯಲ್ಲಿದ್ದ ಗಂಗೂಬಾಯಿ ಗುಳೇದಗುಡ್ಡಳು ಮಂಡಳಿ ಸ್ಥಾಪಿಸಲು ನಿರ್ಧರಿಸಿದಳು. 1925ರಲ್ಲಿ ಶ್ರೀಕೃಷ್ಣ ನಾಟಕ ಮಂಡಳಿಯನ್ನು ಸ್ಥಾಪಿಸಿ ಯಶಸ್ವಿಯಾಗಿ ಮುನ್ನಡೆಸಿದಳು.

ಇವರಿಬ್ಬರಿಂದ ಪ್ರೇರಣೆ ಪಡೆದ ಅನೇಕ ಮಹಿಳಾ ಕಲಾವಿದೆಯರು ಮಂಡಳಿಗಳನ್ನು ಕಟ್ಟಲು ಮುಂದಾದರು. ಸೋನುಬಾಯಿ ದೊಡ್ಡಮನಿ, ರಹೆಮಾನವ್ವ ಕುಕನೂರು, ಸುಮಿತ್ರ ಕುಂದಾಪೂರ, ಚಿಂದೋಡಿ ಲೀಲಾ ಮುಂತಾದವರು ಪ್ರಮುಖರು. ಹೀಗೆ ತಾವೇ ಮಂಡಳಿಗಳನ್ನು ಕಟ್ಟಿ ಬೆಳೆಸಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯನ್ನು ಶ್ರೀಮಂತಗೊಳಿಸಿದ ಕೀರ್ತಿ ಈ ಮಹಿಳೆಯರಿಗೆ ಸಲ್ಲುತ್ತದೆ. ಇದೊಂದು ಅತಿ ಮಹತ್ವದ ಕೊಡುಗೆಯೆಂದು ಹೇಳಿದರೆ ತಪ್ಪಾಗಲಾರದು.

7. ಉತ್ತರ ಕರ್ನಾಟಕದ ಆರಂಭದ ಕಾಲಘಟ್ಟದಲ್ಲಿ ಸಂಗೀತಕ್ಕೆ ಪ್ರಾಧಾನ್ಯತೆ ಇತ್ತು. ಅದು ಮಂಡಳಿಯ ಹೆಸರಿನಲ್ಲಿಯೇ ಕಾಣುತ್ತಿತ್ತು. ಉದಾಹರಣೆಗೆ 'ಶ್ರೀ ಮಹಾಲಕ್ಷ್ಮೀ ಪ್ರಸಾದಿತ ಸಂಗೀತನಾಟಕ ಮಂಡಳ' ಆರ್ಯ ಸಂಗೀತ ನಾಟಕ ಮಂಡಳಿ, ದತ್ತಾತ್ರೇಯ ಸಂಗೀತ ನಾಟಕ ಮಂಡಳಿ ಹೀಗೆ ಮಂಡಳಿಯ ಹೆಸರಿನ ಮೊದಲಿನ ಪದವೇ ಸಂಗೀತ ಎಂದಿರುತ್ತಿತ್ತು. ನಂತರದ ದಿನಗಳಲ್ಲಿ ಸಂಗೀತ ಪದ ಮಾಯವಾಗಿ ನಾಟ್ಯ ಸಂಘ ಎಂದಾಯಿತು. ಉದಾ: ಕಲಾವೈಭವ ನಾಟ್ಯಸಂಘ ಪಣಿಗಿ. ಹುಚ್ಚೇಶ್ವರ ನಾಟ್ಯಸಂಘ ಕಮತಗಿ.

ಇದರಿಂದ ನಮಗೆ ತಿಳಿದು ಬರುವುದೇನೆಂದರೆ, ಆರಂಭದಲ್ಲಿ ವೃತ್ತಿರಂಗಭೂಮಿಯಲ್ಲಿ ಸಂಗೀತಕ್ಕೆ ಮಹತ್ವದ ಸ್ಥಾನವಿತ್ತು. ಹೀಗಾಗಿ ಪಾತ್ರಧಾರಿಗಳು ಸಂಗೀತವನ್ನು ಕಡ್ಡಾಯವಾಗಿ ಕಲಿಯಬೇಕಾಗುತ್ತಿತ್ತು. ಇದರ ಪ್ರಯೋಜನದಿಂದ ಅದೆಷ್ಟೋ ಕಲಾವಿದೆಯರು

ಸಂಗೀತಗಾರ್ತಿಯರಾಗಿ ಹೆಸರು ಮಾಡಿದರು. ಉತ್ತರ ಕರ್ನಾಟಕದ ವಿರಾಶಿಭರಮಪ್ಪನವರ ಮಂಡಳಿಯಲ್ಲಿ ಅಭಿನಯಿಸಿದ ಅಮೀರಬಾಯಿ ಕರ್ನಾಟಕಿ ಮುಂದೆ ಹಿಂದಿ ಚಿತ್ರ ರಂಗಕ್ಕೆ ಕಾಲಿಟ್ಟಳು. ಅಲ್ಲಿ ಅವಳು ಹಿನ್ನೆಲೆ ಗಾಯಕಿಯಾಗಿಯೇ ಹೆಸರು ಮಾಡಿದಳು. ಅವರ ತಂಗಿ ಗೋಹರಜಾನ್ ಕರ್ನಾಟಕಿ ಕೂಡಾ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಿಂದ ಮರಾಠಿ ರಂಗಭೂಮಿಗೆ ವಲಸೆ ಹೋದವಳು. ಅಲ್ಲಿ ಬಾಲಗಂಧರ್ವರಂಥ ಮಹಾನ ನಟ, ಸಂಗೀತಗಾರರೊಂದಿಗೆ ಸರಿಸಮವಾಗಿ ಬೆಳೆದವರು. ಸುಭದ್ರಮ್ಮ ಮನ್ಸೂರು, ಸೋನುಬಾಯಿ ದೊಡ್ಡಮನಿ, ಸರೋಜಮ್ಮ ಧುತ್ತರಗಿ ಹೀಗೆ ಹಲವಾರು ಕಲಾವಿದೆಯರು ಅಭಿನಯದ ಜೊತೆ ಜೊತೆಗೆ ಸಂಗೀತಗಾರ್ತಿಯರಾಗಿ ಸಾಧನೆ ಮಾಡಿದರು. ಇವರ ಈ ಸಾಧನೆ ರಂಗಭೂಮಿಗೆ ಗಮನಾರ್ಹವಾದ ಕೊಡುಗೆಯಾಗಿದೆ.

8. ನಮ್ಮ ಸಮಾಜದಲ್ಲಿ ಆದಿ ಕಾಲದಿಂದಲೂ ವರ್ಗ ಸಂಘರ್ಷ ಮತ್ತು ವರ್ಣ ಸಂಘರ್ಷ ನಡೆಯುತ್ತಲೇ ಇದೆ. ಈ ಪೀಡೆಗಳಿಂದ ಸಮಾಜವನ್ನು ಮುಕ್ತಗೊಳಿಸಲು ಅನೇಕರು ಹೋರಾಟ ಮಾಡಿದ್ದಾರೆ. ಹನ್ನೆರಡನೆಯ ಶತಮಾನದ ಜಗಜ್ಯೋತಿ ಬಸವಣ್ಣನವರು ವರ್ಗ ಮತ್ತು ವರ್ಣಗಳ ವಿರುದ್ಧ ಹೋರಾಡಿದ್ದನ್ನು ನಮಗೆ ಇತಿಹಾಸ ಹೇಳುತ್ತದೆ. ಇಷ್ಟಾಗಿಯೂ ಅಸಮಾನತೆ, ಜಾತೀಯತೆ, ಇನ್ನೂ ನಮ್ಮ ಸಮಾಜದಲ್ಲಿ ಉಳಿದುಕೊಂಡಿದೆ. ಆದರೆ ವೃತ್ತಿರಂಗಭೂಮಿಯ ಪರಿಸರದಲ್ಲಿ ಈ ಅನಿಷ್ಟಗಳು ಸದ್ದಿಲ್ಲದೆ ಮಾಯವಾಗಿದ್ದನ್ನು ನಾವು ವಿಶೇಷವಾಗಿ ಗಮನಿಸಬೇಕು. ಇದೂ ಕೂಡಾ ಮಹಿಳಾ ಕಲಾವಿದೆಯರಿಂದಲೇ ಸಾಧ್ಯವಾಯಿತೆನ್ನುವುದು ಅಷ್ಟೇ ಸತ್ಯ.

ಮಹಿಳೆಯರ ಪ್ರವೇಶದ ಮೊದಲು ವೃತ್ತಿರಂಗಭೂಮಿ ಧರ್ಮ ಜಾಗೃತಿ ಮತ್ತು ನೀತಿಬೋಧೆಯ ಉದ್ದೇಶದಿಂದ ಕೂಡಿತ್ತು. ಮಹಿಳೆಯರ ಪ್ರವೇಶದ ನಂತರವೇ ರಂಗಭೂಮಿಯಲ್ಲಿ ಸಂಸಾರಗಳೂ ಹುಟ್ಟಿಕೊಂಡವು. ಹೀಗೆ ತಾವು ತಾವೆ ಒಪ್ಪಿಕೊಂಡು ಮಾಡಿಕೊಂಡ ಮದುವೆಗಳಿಗೆ ಸಮಾಜದಲ್ಲಿರುವ ಆಸ್ತಿ ಅಂತಸ್ತಿನ ಬೇಧವಾಗಲಿ ಜಾತಿಯತೆಯ ತಾರತಮ್ಯವಾಗಲಿ ಯಾವುದೂ ಅಡ್ಡಬರಲಿಲ್ಲ. ವೃತ್ತಿರಂಗಭೂಮಿಯಲ್ಲಿ ಇದುವರೆಗೆ ನಡೆದಿರುವ ಮದುವೆಗಳಲ್ಲಿ ಹೆಚ್ಚಿನವು ಅಂತರ್‌ಜಾತಿಯ ಮದುವೆಗಳೇ ಆಗಿದ್ದು ಕಂಡು ಬರುತ್ತದೆ.

ಇದರಿಂದ ಯಾವಾಗ ವೃತ್ತಿರಂಗಭೂಮಿಗೆ ಮಹಿಳೆಯರ ಪ್ರವೇಶವಾಯ್ತೋ ಆಗ ವೃತ್ತಿರಂಗ ಭೂಮಿಯಲ್ಲಿ ಜಾತ್ಯಾತೀತ ವಾತಾವರಣ ನಿರ್ಮಾಣವಾದುದನ್ನು ಕಾಣಬಹುದಾಗಿದೆ.

9. ರಂಗದ ಮೇಲೆ ಬಾರದೇ ತೆರೆಯ ಮರೆಯಲ್ಲಿದ್ದುಕೊಂಡೆ ರಂಗಭೂಮಿಗೆ ಅನನ್ಯ ಸೇವೆ ಸಲ್ಲಿಸಿದ ಮಹಿಳೆಯರೂ ಇದ್ದಾರೆ. ಇವರಲ್ಲಿ ತಬಲಾ ಹಾರ್ಮೋನಿಯಂ ವಾದ್ಯ ನುಡಿಸಿ ಹೆಸರಾದ 'ಶಿವೂಬಾಯಿ ಹುಕ್ಕೇರಿ' ಇರಬಹುದು. ಏಣಗಿ ಬಾಳಪ್ಪನವರು ಮಂಡಳಿ ಆರಂಭಿಸುವಾಗ ತವರು ಮನೆಯಿಂದ ದುಡ್ಡು ತಂದುಕೊಟ್ಟ ಬಾಳಪ್ಪನವರ ಪತ್ನಿ ಸಾವಿತ್ರಿಬಾಯಿ ಏಣಗಿ ಇರಬಹುದು.

ತನ್ನ ಆಭರಣಗಳನ್ನು ಕೊಟ್ಟು ಕಂಪನಿ ಕಟ್ಟಲು ಗರುಡರ ಕನಸನ್ನು ನನಸಾಗಿಸಿದ ಅವರ ಪತ್ನಿ ಭೀಮಾಬಾಯಿ ಗರುಡ, ಹೆಣ್ಣು ಧ್ವನಿಯಲ್ಲಷ್ಟೇ ಅಲ್ಲದೆ, ಗಂಡು ಧ್ವನಿಯಲ್ಲಿಯೂ ಹಾಡಿದ ಸಿ. ಎಸ್. ನಿರ್ಮಲಾ ಅವರು ಎಲ್ಲಾ ನಮೂನೆಯ ವಾದ್ಯಗಳನ್ನು ನುಡಿಸಿದರು. ಚಿತ್ತರಗಿ ಮಂಡಳಿಯ ಆಧಾರಸ್ತಂಭವೇ ಆದ ಚಿತ್ತರಗಿ ರೇಣಮ್ಮ, ಮೊದಲಾದವರು ವೃತ್ತಿರಂಗಭೂಮಿಗೆ ಅನನ್ಯ ಕೊಡುಗೆ ನೀಡಿದ್ದಾರೆ.

10. ಚಲನಚಿತ್ರರಂಗದಲ್ಲಿ ಡಾ. ರಾಜ್‌ಗೆ ಸರಿಸಮನಟನಾಗುವ ಭರವಸೆ ಹುಟ್ಟಿಸಿದ್ದ, ವೃತ್ತಿರಂಗಭೂಮಿಯ ಮಹಾನಟ ಎಲಿವಾಳ ಸಿದ್ಧಯ್ಯನವರು ಚಲನಚಿತ್ರರಂಗದಲ್ಲಿ ಅವಕಾಶ ವಂಚಿತರಾಗಿ ರಂಗಭೂಮಿಯಲ್ಲೇ ಉಳಿಯುವಂತಾಯಿತು. ವೃತ್ತಿರಂಗಭೂಮಿಯಲ್ಲಿ ಎಲಿವಾಳ ಸಿದ್ಧಯ್ಯನವರು ಅಪಾರ ಪ್ರತಿಭೆ ಅದ್ಭುತ ನಟನೆಯಿಂದ ಅತ್ಯಂತ ಜನಪ್ರಿಯರಾಗಿದ್ದರು.

ಇದೇ ರೀತಿ ಉತ್ತರ ಕರ್ನಾಟಕದ ರಾಜಕುಮಾರ ಎಂದೇ ಹೆಸರಾದ ಗುಡಗೇರಿ ಬಸವರಾಜರೂ ಒಬ್ಬರು. ವೃತ್ತಿಮಂಡಳಿ ಕಟ್ಟಿ ಅದನ್ನು ಮೂರು ಶಾಖೆಗಳಾಗಿ ಬೆಳೆಸಿದವರು ಬಸವರಾಜರು. ಸುಮಾರು ಐದು ದಶಕಗಳ ಕಾಲ ಇವರು ವೃತ್ತಿರಂಗಭೂಮಿಯಲ್ಲಿ ರಾಜಕುಮಾರನಂತೆ ಮೆರೆದರು.

ಈ ಮೇಲೆ ಹೆಸರಿಸಿದ ಎಲಿವಾಳ ಸಿದ್ಧಯ್ಯನವರನ್ನೂ ಮತ್ತು ಗುಡಗೇರಿ ಬಸವರಾಜರನ್ನು ವೃತ್ತಿರಂಗಭೂಮಿಗೆ ಪರಿಚಯಸಿದ್ದು ಒಬ್ಬ ಮಹಿಳೆ. ಆ ಮಹಿಳೆಯೇ ಸುಮಿತ್ರಮ್ಮ ಕುಂದಾಪೂರ.

ಕಂದಗಲ್ ಹಣಮಂತರಾಯರು ವೃತ್ತಿರಂಗಭೂಮಿಯಲ್ಲಿ ನಾಟಕ ರಚನಾಕಾರರಾಗಿ, ನಿರ್ದೇಶಕರಾಗಿ, ನಟರಾಗಿ ಪ್ರಸಿದ್ಧಿ ಪಡೆದವರು. ಅದರಂತೆ ಉತ್ತರ ಕರ್ನಾಟಕದ ಇನ್ನೊಬ್ಬ ಮಹಾನ್ ನಟ ಹಂದಿಗನೂರು ಸಿದ್ರಾಮಪ್ಪನವರ ಬಗ್ಗೆ ಅನೇಕರಿಗೆ ಗೊತ್ತು. ಇಂಥ ಮಹಾನ್ ಕಲಾವಿದರನ್ನು ವೃತ್ತಿರಂಗಭೂಮಿಗೆ ಪರಿಚಯಿಸಿ ಪ್ರೋತ್ಸಾಹಸಿದವಳು ಗಂಗೂಬಾಯಿ ಗುಳೇದಗುಡ್ಡ.

ಇವು ಕೂಡಾ ಉತ್ತರ ಕರ್ನಾಟಕದ ಮಹಿಳೆಯರು ವೃತ್ತಿರಂಗಭೂಮಿಗೆ ನೀಡಿದ ಮಹತ್ವದ ಕೊಡುಗೆ ಎಂದು ಹೇಳಬಹುದು.

11. ಕರ್ನಾಟಕದಲ್ಲಿ ವೃತ್ತಿರಂಗಭೂಮಿ ಜನಪ್ರಿಯವಾದಂತೆ ಅದರ ಪ್ರಭಾವ ಗ್ರಾಮೀಣ ಪ್ರದೇಶಕ್ಕೂ ವಿಸ್ತರಿಸಿತು. ಕಲೆಯ ಬಗ್ಗೆ ಆಸಕ್ತಿ ಇರುವ ಗ್ರಾಮದ ಯುವಕರು ಸೇರಿ ವೃತ್ತಿ ಮಂಡಳಿಗಳು ಆಡುವ ನಾಟಕಗಳನ್ನು ಅವರೂ ಆಡತೊಡಗಿದರು.

ಮೊದ ಮೊದಲು ಸ್ತ್ರೀ ಮತ್ತು ಪುರುಷ ಪಾತ್ರಗಳನ್ನು ಪುರುಷರೇ ಮಾಡುತ್ತಿದ್ದರು. ನಂತರದ ದಿನಗಳಲ್ಲಿ ಮಹಿಳೆಯರೂ ಗ್ರಾಮೀಣ ರಂಗಭೂಮಿಗೆ ಕಾಲಿಟ್ಟರು. ವೃತ್ತರಂಗಭೂಮಿಯ ಕಲಾವಿದರೇ ಗ್ರಾಮೀಣ ರಂಗಭೂಮಿಯಲ್ಲಿ ಅಭಿನಯಿಸಿದರು. ಗ್ರಾಮೀಣ ರಂಗಭೂಮಿಯಲ್ಲಿ ಮಹಿಳೆಯ ಬೇಡಿಕೆ ಹೆಚ್ಚಾದಂತೆ ವೃತ್ತಿರಂಗಭೂಮಿಯನ್ನು ಅನೇಕ ಮಹಿಳೆಯರು ತ್ಯಜಿಸಿ ಅಮೆಚೂರ ನಟಿಯರಾಗಿ ಬಿಟ್ಟರು. ಇನ್ನು ಕೆಲವರು ಯಾವುದೇ ವೃತ್ತಿರಂಗಭೂಮಿಯಲ್ಲಿ ಅಭಿನಯಿಸದೇ ಗ್ರಾಮೀಣ ರಂಗಭೂಮಿಗೆ ಕಾಲಿಟ್ಟರು. ಇಂಥ ನಟಿಯರು ಹಂಸನೂರ, ಇಳಕಲ್, ಗದಗ, ಹುಬ್ಬಳ್ಳಿ, ಮರಿಯಮ್ಮನಹಳ್ಳಿ, ಕೂಡ್ಲಿಗಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಇರುವುದನ್ನು ನಾವು ಇವತ್ತಿಗೂ ನೋಡಬಹುದು.

ಹೀಗಾಗಿ ಉತ್ತರ ಕರ್ನಾಟಕದ ಗ್ರಾಮೀಣ ರಂಗಭೂಮಿಯಲ್ಲಿ ರಂಗಚಟುವಟಿಕೆ ಹೆಚ್ಚಿಸಲು ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ ಸಾಕಷ್ಟಿದೆ ಎಂಬುದು ಗೊತ್ತಾಗುತ್ತದೆ.

# ಅಧ್ಯಾಯ-5

## ಸಮಾರೋಪ

ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಹಂತ ಹಂತವಾಗಿ ಬೆಳೆದು ಬಂದುದರ ಕುರಿತು ಅಧ್ಯಯನ ಕೈಕೊಳ್ಳುವಾಗ ಇತಿಹಾಸದ ಕಾಲಘಟ್ಟಗಳ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ. ಅಧ್ಯಯನದ ಅನುಕೂಲತೆಗಾಗಿ ಐದು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಿಂದ ಕೆಳಗಿನ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

'ರಂಗಭೂಮಿಯ ಉಗಮ ಮತ್ತು ವಿಕಾಸ' ಎನ್ನುವ ಮೊದಲ ಅಧ್ಯಾಯದಲ್ಲಿ ರಂಗಭೂಮಿ ಕಾವ್ಯ ಮತ್ತು ಶಾಸನಗಳಲ್ಲಿ ಯಾವ ರೀತಿ ಪ್ರಸ್ತಾಪಗೊಂಡಿದೆ, ಎಂಬ ವಿಶ್ಲೇಷಣೆಯೊಂದಿಗೆ ಪ್ರಾರಂಭವಾಗಿ ಕವಿರಾಜಮಾರ್ಗವನ್ನು ಆಧಾರವಾಗಿಟ್ಟುಕೊಂಡು, ನಾಟಕ ಎಂಬ ಪ್ರಕಾರ 9ನೇ ಶತಮಾನಕ್ಕೂ ಮೊದಲು ಇತ್ತೆಂದು ಗುರುತಿಸಲಾಗಿದೆ.

ನಂತರದಲ್ಲಿ ರಂಗಭೂಮಿಯು ಜನಪದರಲ್ಲಿ ಯಾವ ರೀತಿಯಾಗಿ ಅಸ್ತಿತ್ವದಲ್ಲಿತ್ತು ಮತ್ತು ಹಾಡು, ಕುಣಿತ, ಸಣ್ಣಾಟ-ದೊಡ್ಡಾಟಗಳ ಮೂಲಕ ಹೇಗೆ ವಿಕಾಸಗೊಂಡಿತು, ಎನ್ನುವುದರ ವಿವರಣೆಗಳಿವೆ.

ಪಾಶ್ಚಾತ್ಯ ದೇಶಗಳಲ್ಲಿ ರಂಗಭೂಮಿಗೆ ಶತಮಾನಗಳ ಇತಿಹಾಸವಿದ್ದರೂ ನಮ್ಮ ದೇಶದ ರಂಗಭೂಮಿಗೆ ಅಂಥ ಇತಿಹಾಸವಿದ್ದುದು ತಿಳಿದು ಬರುವುದಿಲ್ಲ. ಇದಕ್ಕೆ ಕಾರಣವೆಂದರೆ ನಮ್ಮ ರಂಗಭೂಮಿ ಪಾಶ್ಚಾತ್ಯ ರಂಗಭೂಮಿಯ ಪ್ರಭಾವದಿಂದಾಗಿ ಜನಪದ ರಂಗಭೂಮಿಯ ಬದಲಾಗಿ ಹೊಸರೂಪವನ್ನು ಹೇಗೆ ಪಡೆದುಕೊಂಡಿತು ಎಂಬುದರ ವಿಶ್ಲೇಷಣೆ ಮಾಡಲಾಗಿದೆ.

ಇಂಗ್ಲೀಷರು ನಮ್ಮ ದೇಶವನ್ನಾಳುತ್ತಿದ್ದ ದಿನಗಳಲ್ಲಿ ತಮ್ಮ ಮನರಂಜನೆಗಾಗಿ ಇಂಗ್ಲೆಂಡಿನ ನಾಟಕ ತಂಡಗಳನ್ನು ಕರೆಸಿ ಆಡಿಸುತ್ತಿದ್ದರು. ನಂತರ ಇಂಗ್ಲೆಂಡಿನಿಂದ ಬಂದು ಕಲಕತ್ತೆಯಲ್ಲಿ ನೆಲೆಸಿದ ವ್ಯಾಪಾರಿ ಸಂಸ್ಥೆಗಳ ಕಲಾವಿದರು ನಾಟಕಗಳನ್ನಾಡ ತೊಡಗಿದರು. ಈ ನಾಟಕಗಳಿಂದ ಪ್ರಭಾವಿತರಾಗಿ ಕಲಕತ್ತೆಯ ಶ್ರೀಮಂತ ಜಮೀನುದಾರರು ಬಂಗಾಲಿ ನಾಟಕಗಳನ್ನಾಡಲು ಪ್ರಯತ್ನಿಸಿದರು. ಅದರ ಫಲವಾಗಿ 1835 ರಲ್ಲಿ ಎರಡು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ರಂಗಮಂದಿರ ಸಿದ್ಧವಾದುದನ್ನು ಕಾಣುತ್ತೇವೆ. ಆ ರಂಗ ಮಂದಿರದಲ್ಲಿ 'ವಿದ್ಯಾಸುಂದರ' ಎಂಬ ನಾಟಕದ ಪ್ರಯೋಗವೂ ಆಗುತ್ತದೆ. ಹೀಗೆ ಬಂಗಾಳಿ ಭಾಷೆಯ ಮೂಲಕ ಭಾರತದಲ್ಲಿ ರಂಗಭೂಮಿ ಕಾಲೂರಿದ್ದು ಕಂಡುಬರುತ್ತದೆ. ನಂತರ ಪಾರ್ಶಿಗಳ ಮೂಲಕ

ಮುಂಬೈಗೆ ಬಂದು ವ್ಯಾಪಾರೀಕರಣದ ಸ್ವರೂಪ ಪಡೆಯಿತು. ನಂತರದಲ್ಲಿ ದೇಶಾದ್ಯಂತ ಪ್ರಾದೇಶಿಕ ಭಾಷೆಗಳ ಮೂಲಕ ಅಭಿವೃದ್ಧಿ ಹೊಂದಿದ್ದನ್ನು ಕಾಣುತ್ತೇವೆ. ಜೊತೆಗೆ ರಂಗಭೂಮಿ ವೃತ್ತಿರಂಗಭೂಮಿಯಾಗಿ ಪರಿವರ್ತನೆಯಾಯಿತು.

'ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಚರಿತ್ರೆ' ಇಲ್ಲಿ ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ರಂಗಭೂಮಿ ಬಹುದೊಡ್ಡ ಚಳುವಳಿಯನ್ನೇ ಮಾಡಿದ್ದರೂ, ಕನ್ನಡ ಸಾಹಿತ್ಯಕ್ಕೆ ಇರುವಷ್ಟು ಚರಿತ್ರೆ ರಂಗಭೂಮಿಗಿಲ್ಲ. 1670ರಲ್ಲಿ ರಚನೆಯಾದ ಸಿಂಘಿರಾರ್ಯನ 'ಮಿತ್ರವಿಂದಾಗೋವಿಂದ' ನಾಟಕವೇ ಕನ್ನಡದ ಮೊದಲ ನಾಟಕ. ಮತ್ತೆ ಎರಡನೂರು ವರ್ಷಗಳ ನಂತರ ಕರ್ಕಿ ವೆಂಕಟರಮಣ ಶಾಸ್ತ್ರಿಗಳ 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ಕನ್ನಡದ ಮೊದಲ ಸ್ವತಂತ್ರ ಕೃತಿ ರಚನೆಯಾಯಿತು. ಹೀಗಾಗಿ ಕನ್ನಡ ರಂಗಭೂಮಿಯ ಚರಿತ್ರೆ 150 ವರ್ಷಗಳ ಇತ್ತೀಚಿನದು. ಪಾರ್ಶಿ ಕಂಪನಿಗಳ ಮೂಲಕ ವ್ಯಾಪಾರೀಕರಣಗೊಂಡು ಕಲಕತ್ತೆಯಿಂದ ಮುಂಬೈಗೆ ಕಾಲಿಟ್ಟ ವೃತ್ತಿರಂಗಭೂಮಿ, ಮರಾಠಿ ವೃತ್ತಿರಂಗಭೂಮಿಯ ಹುಟ್ಟಿಗೆ ಕಾರಣವಾಗಿ, ಅದು ಕರ್ನಾಟಕಕ್ಕೆ ಕಾಲಿಟ್ಟಿತು. ಮರಾಠಿ ಮಂಡಳಿಗಳ ಪ್ರಭಾವದಿಂದಾಗಿ ಉತ್ತರ ಕರ್ನಾಟಕದಲ್ಲಿ ವೃತ್ತಿಮಂಡಳಿಗಳು ಹುಟ್ಟಿಕೊಂಡವು.

1877ರಲ್ಲಿ ಗದುಗಿನ 'ಶ್ರೀ ವೀರನಾರಾಯಣ ಪ್ರಸಾದಿತ ಕೃತಪುರ' ನಾಟಕ ಮಂಡಳಿಯನ್ನು ಶಾಂತಕವಿ (ಸಕ್ಕರಿ ಬಾಳಾಚಾರ್ಯ)ಗಳು ಸ್ಥಾಪಿಸಿ, ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಮೊದಲ ಪ್ರವರ್ತಕರೆನಿಸಿದರು. ಹೀಗಾಗಿ ಉತ್ತರ ಕರ್ನಾಟಕ ವೃತ್ತಿರಂಗಭೂಮಿಗೆ 130 ವರ್ಷಗಳ ಇತಿಹಾಸವಿರುವುದು ಕಂಡುಬರುತ್ತದೆ.

ಹೀಗೆ ಆರಂಭಗೊಂಡು ಶಿವಮೂರ್ತಿಸ್ವಾಮಿ ಕಣಬರ್ಗಿಮಠ ಹಾಗೂ ಶಿರಹಟ್ಟಿ ವೆಂಕೋಬರಾಯರ ತನಕ ತನ್ನ ಮೂಲರೂಪ ಬದಲಿಸಿಕೊಂಡು, ವೈಭವ ಮತ್ತು ಆಕರ್ಷಣೆ ಹೆಚ್ಚಿಸಿಕೊಂಡು ಜನಪ್ರಿಯ ಮಾಧ್ಯಮವಾಗಿ ಉತ್ತರ ಕರ್ನಾಟಕ ವೃತ್ತಿರಂಗಭೂಮಿ ಬೆಳೆಯುತ್ತಿರುವಾಗಲೇ ಇದಕ್ಕೆ ಪ್ರತಿಸ್ಪರ್ಧಿಯಾಗಿ ಹವ್ಯಾಸಿ ರಂಗಭೂಮಿಯೊಂದು ಹುಟ್ಟಿಕೊಂಡಿತು. ಮುದವೀಡು ಕೃಷ್ಣರಾಯರು 1905ರಲ್ಲಿ ಧಾರವಾಡದಲ್ಲಿ ಸ್ಥಾಪಿಸಿದ "ಭಾರತ ಕಲೋತ್ತೇಜಕ ಸಂಗೀತ ಸಮಾಜ" ಎಂಬ ಮಂಡಳಿಯೇ ಉತ್ತರ ಕರ್ನಾಟಕದ ಮೊದಲ ಹವ್ಯಾಸಿ ಮಂಡಳಿ. ವೃತ್ತಿರಂಗಭೂಮಿಯನ್ನು ಟೀಕಿಸಲೆಂದೇ ಹುಟ್ಟಿಕೊಂಡ ಹವ್ಯಾಸಿ ರಂಗಭೂಮಿ ವಿದ್ಯಾವಂತ ಮತ್ತು ಪ್ರಜ್ಞಾವಂತ ಜನರಿಗಾಗಿ ವಿಚಾರ ಪ್ರಚೋದಕ ನಾಟಕಗಳನ್ನು ಪ್ರದರ್ಶಿಸತೊಡಗಿತು. ವೃತ್ತಿರಂಗಭೂಮಿಯ ಮನರಂಜನೆಯ

ಪ್ರಧಾನ ಗುಣವನ್ನು ತಿರಸ್ಕರಿಸಿತು. ಶ್ರೀರಂಗ, ಕೈಲಾಸಂ ರಂಥವರು ಹೊಸ ಅಲೆಯ ನಾಟಕಗಳನ್ನು ಬರೆದು, ರಂಗದ ಮೇಲೆ ಪ್ರಯೋಗ ಮಾಡಿದರು.

ವೃತ್ತಿರಂಗಭೂಮಿಯನ್ನು ಅಣಕು ಮಾಡಲೆಂದೇ ಹುಟ್ಟಿಕೊಂಡ ಹವ್ಯಾಸಿ ರಂಗಭೂಮಿ ಜನಸಾಮಾನ್ಯರನ್ನು ತಲುಪದೆ ನಗರಪ್ರದೇಶಗಳಿಗಷ್ಟೇ ಸೀಮಿತವಾಯಿತು. ಆದ್ದರಿಂದ ಇದರ ಪರಿಣಾಮ ವೃತ್ತಿ ರಂಗಭೂಮಿಯ ಮೇಲೆ ಆಗಲಿಲ್ಲವೆನಿಸುತ್ತದೆ.

ಉತ್ತರ ಕರ್ನಾಟಕದ ವೃತ್ತಿರಂಗಭೂಮಿಗೆ ಹೊಸ ಸ್ವರೂಪ ಕೊಟ್ಟ ಶಿವಮೂರ್ತಿ ಸ್ವಾಮಿ ಕಣಬರ್ಗಿಮಠರವರು, ಪಾರ್ಶಿ ನಾಟಕಗಳ ರಂಗ ವೈಭವವನ್ನು ಕನ್ನಡಕ್ಕೆ ತಂದರು. ಸಂಗೀತ ಅಭಿನಯಗಳ ತರಬೇತಿ, ಆಕರ್ಷಕವಾದ ರಂಗಪರಿಕರಗಳು, ವೇಷಭೂಷಣ, ಮಹಿಳೆಯರ ಪ್ರವೇಶ ಹೀಗೆ ಹಲವಾರು ವಿಷಯಗಳಲ್ಲಿ ಮೊದಲಿಗರೆನಿಸಿದರು.

ಇವರ ನಂತರ ಶಿರಹಟ್ಟಿ ವಂಕೋಬರಾಯರು, ರಾಮದುರ್ಗದ ನೇಕಾರ ಬಂಧುಗಳು, ಲಕ್ಷ್ಮೇಶ್ವರದ ಬಚ್ಚಾಸಾನಿ, ವಾಮನರಾವ ಮಾಸ್ತರು, ಗರುಡ ಸದಾಶಿವರಾಯರ ಮೂಲಕ ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಸಮರೋಪಾದಿಯಲ್ಲಿ ಬೆಳೆದು ನಿಂತಿತು. ಹೀಗೆ 1940 ರ ವರೆಗೆ ಏರುಮುಖವಾಗಿ ಬೆಳೆದ ವೃತ್ತಿರಂಗಭೂಮಿ ನಂತರದ ದಿನಗಳಲ್ಲಿ ಅನೇಕ ಕಾರಣಗಳಿಂದ ಇಳಿಮುಖವಾಗತೊಡಗಿತು. ವೃತ್ತಿರಂಗಭೂಮಿ ಇಲ್ಲಿ ಸೊರಗಿತಾದರೂ ಸಾಯಲಿಲ್ಲ. ನಂತರದ ದಿನಗಳಲ್ಲಿ ಗದುಗಿನ ಗಾನಯೋಗಿ ಲಿಂ. ಪಂಚಾಕ್ಷರಿ ಗವಾಯಿಗಳು, ಏಣಗಿ ಬಾಳಪ್ಪ, ಚಿತ್ತರಗಿ ಗಂಗಾಧರ ಶಾಸ್ತ್ರಿಗಳು, ಕುಕನೂರು ರಹೆಮಾನವ್ವ, ಬಿ. ಆರ್. ಅರಿಶಿನಗೋಡಿ, ಗುಡಗೇರಿಯ ಎನ್. ಬಸವರಾಜ, ಪ್ರಕಾಶ ಕಡಪಟ್ಟಿಯವರು ತಮ್ಮ ಮಂಡಳಿಯ ಮೂಲಕ ವೃತ್ತಿರಂಗಭೂಮಿಯನ್ನು ಬೆಳೆಸಲು ಶ್ರಮಿಸಿದರು.

ಮೂರನೆಯ ಅಧ್ಯಾಯ 'ಉತ್ತರ ಕರ್ನಾಟಕದ ವೃತ್ತಿರಂಗ ಭೂಮಿಗೆ ಮಹಿಳೆಯರ ಪ್ರವೇಶ ಹಾಗೂ ಪ್ರಾಧಾನ್ಯತೆ.'

ಶತಮಾನಗಳಿಂದ ಲಿಂಗತಾರತಮ್ಯಕ್ಕೆ ಒಳಗಾದ ಮಹಿಳೆಯರು, ಪುರುಷನ ಕೈಗೊಂಬೆಯಾಗಿ ಭೋಗದ ವಸ್ತುವಾಗಿ ಹೆರುವ ಯಂತ್ರವಾಗಿ ಗಾಣದೆತ್ತಿನಂತೆ ದುಡಿದಿದ್ದನ್ನು ಕಾಣುತ್ತೇವೆ. ಹೀಗೆ ಅವಳ ಶ್ರಮ ಎಷ್ಟೇ ಇದ್ದರೂ ಅದು ಎದ್ದು ಕಾಣದಂತಾಗಿ ಹೋಗಿತ್ತು. ಇಂಥ ವ್ಯವಸ್ಥೆಯಲ್ಲಿ ಮಹಿಳೆಯರು ರಂಗದ ಮೇಲೆ ಬಂದು ಪ್ರೇಕ್ಷಕ ಸಮೂಹದ ಎದುರು ಅಭಿನಯಿಸಿ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸುವುದು ಅಸಾಧ್ಯದ ಮಾತೆ ಆಗಿತ್ತು. ಆದರೆ ಕೆಳವರ್ಗದ ಮಹಿಳೆಯರಿಗೆ ಅಂಥ ಕಟ್ಟು

ಪಾಡುಗಳೇನಿರಲಿಲ್ಲ. ಹೀಗಾಗಿ ಕೌಜಲಗಿ ನಿಂಗವ್ವನಂಥವರು ಪಾರಿಜಾತ ಆಟದಲ್ಲಿ ತನ್ನ ಪ್ರತಿಭೆಯನ್ನು ಮೆರೆಯಲು ಸಾಧ್ಯವಾಯಿತು. ಇದಕ್ಕೂ ಮೊದಲು ರಾಧಾನಾಟಗಳಂಥ ಬಯಲಾಟಗಳಲ್ಲಿ ಈ ಕೆಳವರ್ಗದ ಮಹಿಳೆಯರು ಪ್ರವೇಶಿಸಿದ್ದರು. ಉತ್ತರ ಕರ್ನಾಟಕದ ವೃತ್ತಿ ಮಂಡಳಿಗೆ ಮೊದಲು ಪ್ರವೇಶಿಸಿದ ಮೊದಲ ಮಹಿಳೆ ಎಲ್ಲೂಬಾಯಿ ಗುಳೇದಗುಡ್ಡ, ಇವಳೂ ಕೂಡಾ ಕೆಳವರ್ಗದಿಂದ ಬಂದವಳೆ. ಇದಕ್ಕೆ ಅವಕಾಶ ಕೊಟ್ಟವರು ಶಿವಮೂರ್ತಿಸ್ವಾಮಿ ಕಣಬರಗಿಮಠ ಅವರು.

ನಂತರದಲ್ಲಿ ಮಹಿಳೆಯರ ಮಹಾಪೂರವೇ ವೃತ್ತಿರಂಗಭೂಮಿಗೆ ಹರಿದು ಬಂತು. ಹೀಗೆ ಮಹಿಳೆಯರು ವೃತ್ತಿರಂಗಭೂಮಿಯ ಅವಿಭಾಜ್ಯ ಅಂಗವಾಗಿ ನೆಲೆಯೂರಿದರು. ವೃತ್ತಿರಂಗಭೂಮಿಯಲ್ಲಿ ನೆಲೆಕಂಡುಕೊಂಡ ಮಹಿಳೆಯರು ತಮ್ಮ ಪ್ರತಿಭೆ ಸಾಮರ್ಥ್ಯಗಳನ್ನು ಮೆರೆದರು. ಆದರೆ ಮಂಡಳಿಯೊಂದಿಗೆ ಊರೂರು ಅಲೆಯುತ್ತ ಒಂದು ರೀತಿಯಲ್ಲಿ ಅಲೆಮಾರಿಗಳಾದರು. ಒಂದೇ ಕಡೆ ನೆಲೆ ಇಲ್ಲದೆ ಇವರ ಮಕ್ಕಳು ಶಿಕ್ಷಣದಿಂದ ವಂಚಿತರಾದರು. ಊಟ, ವಸತಿ, ಎಲ್ಲವೂ ಮಂಡಳಿಯಲ್ಲೇ ಇರುತ್ತಿದ್ದರಿಂದ ಈ ಮಹಿಳೆಯರು ಸಮಾಜದ ಮುಖ್ಯವಾಹಿನಿಯಿಂದ ವಿಮುಖವಾಗಿ ಭಿನ್ನರಾಗೆ ಉಳಿದರು. ರಂಗಭೂಮಿ ಇಳಿಮುಖವಾದಾಗ ಅಭಿನಯ ಬಿಟ್ಟು ಬೇರೆ ಏನೂ ಗೊತ್ತಿರದ ಕಲಾವಿದೆಯರು ನಿರುದ್ಯೋಗ ಸಮಸ್ಯೆ ಎದುರಿಸಬೇಕಾಯಿತು. ಆರ್ಥಿಕ ದುಃಸ್ಥಿತಿಗೆ ಸಿಲುಕಿದರು. ಸಮಾಜದಲ್ಲಿ ಈ ಮಹಿಳೆಯರು ಚರಿತ್ರಹೀನರೆಂದು ಗುರುತಿಸಲ್ಪಟ್ಟು ಅಸಡ್ಡೆಗೆ ಒಳಗಾದರು. ಮಂಡಳಿಗಳ ಆರ್ಥಿಕ ಕುಸಿತ ಕಲಾವಿದೆಯರ ಮೇಲೆ ಪರಿಣಾಮ ಬೀರಿತು.

ಆದಾಗ್ಯೂ ವೃತ್ತಿರಂಗ ಭೂಮಿಯಲ್ಲಿ ತಮ್ಮ ಪ್ರತಿಭೆ ಮೆರೆದು ಹೆಸರು ಗಳಿಸಿದರು. ಜನಮಾನಸದಲ್ಲಿ ಹಸಿರಾಗಿ ಉಳಿದರು. ಕೊನೆಕೊನೆಗೆ ವೃತ್ತಿರಂಗಭೂಮಿಯಲ್ಲಿ ಅವಕಾಶ ಕುಸಿದಾಗ ಗ್ರಾಮೀಣ ರಂಗಭೂಮಿಯತ್ತವಾಲಿದರು.

ಇನ್ನು ಅಧ್ಯಾಯ ನಾಲ್ಕು "ಉತ್ತರ ಕರ್ನಾಟಕದ ವೃತ್ತಿರಂಗ ಭೂಮಿಯಲ್ಲಿ ಮಹಿಳೆಯರು ಹಾಗೂ ಅವರ ಕೊಡುಗೆ." ಉತ್ತರ ಕರ್ನಾಟಕದ ವೃತ್ತಿರಂಗಭೂಮಿಗೆ ಮಹಿಳೆಯರು ಸಲ್ಲಿಸಿದ ಸೇವೆ ಅನುಪಮ ಹಾಗೂ ಅಮೋಘವಾದದ್ದು. ಅನೇಕರು ಅಭಿನೇತ್ರಿಯರಾಗಿ ತಮ್ಮ ಪರಿಶ್ರಮ ಮತ್ತು ಪ್ರತಿಭೆಯನ್ನು ಧಾರೆ ಎರೆದು ವೃತ್ತಿರಂಗಭೂಮಿಯನ್ನು ಶ್ರೀಮಂತಗೊಳಿಸಿದರು. ಮೊದಲ ಕಲಾವಿದೆ ಗಂಗೂಬಾಯಿ ಗುಳೇದಗುಡ್ಡರಿಂದ ಆರಂಭಗೊಂಡ ಈ ಪರಂಪರೆ ಇತ್ತೀಚಿನ ಮೈಸೂರು ಹೇಲನ್‌ವರೆಗೂ ಮುಂದುವರಿದಿದೆ, ಮುಂದುವರಿಯುತ್ತಲಿದೆ.

ಅಭಿನಯದ ಜೊತೆಗೆ ಒಳ್ಳೆಯ ಸಂಗೀತಗಾರ್ತಿಯರಾಗಿ ಹೊರಹೊಮ್ಮಿದವರು ಹಲವರು. ಅಮೀರಬಾಯಿ ಕರ್ನಾಟಕಿ ಮುಂಬೈನ ಚಿತ್ರರಂಗದಲ್ಲಿ ಅಭಿನೇತ್ರಿಯಾಗಷ್ಟೇ ಅಲ್ಲ; ಹಿನ್ನೆಲೆ ಗಾಯಕಿಯಾಗಿ ಹೆಸರಾದವರು. ಇವರು ಮೂಲತಃ ಉತ್ತರ ಕರ್ನಾಟಕದ ವೃತ್ತಿರಂಗ ಭೂಮಿಯಿಂದ ಬಂದವರು. ಇವರ ಸಾಲಿನಲ್ಲಿ ಸಂಗೀತಗಾರ್ತಿಯರಾಗಿ ಹೆಸರು ಮಾಡಿದವರು. ಜುಬೇದಾಬಾಯಿ ಸವಣೂರ, ಸುಭದ್ರಮ್ಮ ಮನಸೂರು, ಗಂಗೂಬಾಯಿ ಗುಳೇದಗುಡ್ಡ, ಮುಂತಾದವರಿದ್ದಾರೆ. ಉತ್ತರ ಕರ್ನಾಟಕ ಮತ್ತು ಮರಾಠಿ ವೃತ್ತಿರಂಗಭೂಮಿಯಲ್ಲಿ ದುಡಿದ ನಟಿ ಸಂಗೀತಗಾರ್ತಿ ಗೋಹರಜಾನ ಕರ್ನಾಟಕಿ.

ನಟಿಯರಾಗಿ, ಸಂಗೀತಗಾರ್ತಿಯರಾಗಿ ಅಷ್ಟೇ ಅಲ್ಲ, ಸ್ವತಃ ಮಂಡಳಿಗಳನ್ನು ಕಟ್ಟಿ ಬೆಳೆಸಿ ತಮ್ಮ ಅದ್ಭುತ ಸಂಘಟನಾ ಸಾಮರ್ಥ್ಯವನ್ನು ಮಹಿಳೆಯರು ಪ್ರದರ್ಶಿಸಿದರು. ಲಕ್ಷ್ಮೇಶ್ವರದ ಬಚ್ಚಾಸಾನಿ, ಗಂಗೂಬಾಯಿ ಗುಳೇದಗುಡ್ಡ, ಸೋನುಬಾಯಿ ದೊಡ್ಡಮನಿ, ಕುಕನೂರ ರಹೆಮಾನವ್ವ, ಕುಂದಾಪೂರ ಸುಮಿತ್ರಮ್ಮ, ಚಂದೋಡಿ ಲೀಲಮ್ಮ, ಹೀಗೆ ಹಲವು ಮಹಿಳೆಯರು ಈ ಪರಂಪರೆಗೆ ಸೇರುತ್ತಾರೆ.

ಕೆಲವರು ಯಾವುದಾದರೂ ಒಂದು ಪಾತ್ರದಲ್ಲಿ ವಿಶೇಷ ಅಭಿನಯ ಮಾಡಿ ಪ್ರೇಕ್ಷಕರ ಮನಗೆಲ್ಲುತ್ತಾರೆ. ಇವರ ಅಭಿನಯವನ್ನು ನೋಡಲೆಂದೇ ಜನ ಬರುತ್ತಾರೆ. ಅಂಥ ಕಲಾವಿದೆಯರನ್ನೂ ಈ ಕ್ಷೇತ್ರದಲ್ಲಿ ಗುರುತಿಸಲಾಗಿದೆ.

ತೀರ ಕೆಳವರ್ಗದವರಷ್ಟೇ ಅಲ್ಲ; ಕಟ್ಟಾ ಸಂಪ್ರದಾಯದ ಮುಸ್ಲಿಂ ಮಹಿಳೆಯರೂ ವೃತ್ತಿರಂಗಭೂಮಿಗೆ ಪ್ರವೇಶಿಸಿದ್ದಾರೆ. ತಮ್ಮ ಪ್ರತಿಭೆಯ ಮೂಲಕ ವೃತ್ತಿರಂಗಭೂಮಿಯಲ್ಲಿ ಇತಿಹಾಸ ಸೃಷ್ಟಿಸಿದ್ದಾರೆ.

ರಂಗದ ಮೇಲೆ ಬಾರದೆ ತೆರೆಯ ಹಿಂದಿದ್ದುಕೊಂಡೇ ರಂಗಭೂಮಿಗೆ ಹೊಸತಿರುವು ಕೊಟ್ಟಿರುವ ಮಹಿಳೆಯರೂ ಇದ್ದಾರೆ. ಅದ್ಭುತ ನಟ, ನಾಟಕಕಾರ, ನಿರ್ದೇಶಕ ಗರುಡ ಸದಾಶಿವರಾಯರಿಗೆ, ಮಂಡಳಿ ಕಟ್ಟುವ ಕನಸಿತ್ತಾದರೂ ಅದಕ್ಕೆ ಬೇಕಾಗುವಷ್ಟು ಹಣವಿರಲಿಲ್ಲ. ತಮ್ಮ ಆಭರಣ ಕೊಟ್ಟು ಮಂಡಳಿ ಕಟ್ಟಲು ಪ್ರೇರೇಪಿಸಿದವರು ಅವರ ಪತ್ನಿ ಭೀಮಾಬಾಯಿ ಗರುಡರು. ಈಗ ನೋಡಿದರೆ ಗರುಡರ ಮಂಡಳಿ ಇಲ್ಲದೆ ವೃತ್ತಿರಂಗಭೂಮಿಯ ಇತಿಹಾಸವನ್ನು ಕಲ್ಪನೆ ಮಾಡಿಕೊಳ್ಳಲೂ ಸಾಧ್ಯವಿಲ್ಲ. ಇಂಥವರು ಇನ್ನೂ ಅನೇಕರಿದ್ದಾರೆ.

ಕೆಲ ಮಹಿಳೆಯರು ತಮ್ಮ ಇಡೀ ಕುಟುಂಬವನ್ನೇ ವೃತ್ತಿರಂಗಭೂಮಿಯಲ್ಲಿ ತೊಡಗಿಸಿಕೊಂಡರೆ, ಇನ್ನು ಕೆಲ ಗ್ರಾಮಗಳು ವೃತ್ತಿರಂಗಭೂಮಿಗೆ ಹೆಚ್ಚಿನ ಸಂಖ್ಯೆಯ ಮಹಿಳೆಯರನ್ನು ನೀಡಿವೆ.

ಹೀಗೆ ವೃತ್ತಿರಂಗಭೂಮಿಗೆ ನಿಧಾನವಾಗಿ ಕಾಲಿಟ್ಟರೂ ಶರವೇಗದಲ್ಲಿ ಮಹಿಳೆಯರು ಬೆಳೆದುಬಂದ ಬಗೆ ನಿಜಕ್ಕೂ ಆಶ್ಚರ್ಯಕರವಾಗಿದೆ. ಅಷ್ಟೇ ಅಲ್ಲ. ಇಡೀ ಮಂಡಳಿ, ಮಾಲೀಕ, ನಾಟಕ, ನಾಟಕ ರಚನಾಕಾರರು ಇವರೆಲ್ಲ ಒಂದು ತೂಕವಾದರೆ ಮಂಡಳಿಯ ಮಹಿಳೆಯರೇ ಒಂದು ತೂಕವಾಗಿ ಬೆಳೆದು ನಿಂತಿದ್ದು ಕಂಡುಬರುತ್ತದೆ.

ಕಂಪನಿ ನಾಟಕಗಳು ಬಂದ ಬಂತರ, ರಂಗಭೂಮಿ, ಜನಪದ ಕಲೆಗಳು ಲವಲವಿಕೆ ಕಳೆದುಕೊಂಡವು. ಸಿನಿಮಾ ಬಂದ ನಂತರ ನಾಟಕಗಳು ನೀರಸವೆನಿಸಿದವು. ಟಿ.ವಿ.ಗಳು ಬಂದು ಸಿನಿಮಾಗಳು ಆಕರ್ಷಣೆ ಕಳೆದುಕೊಂಡವು. ಸಮಾಜ ನಿಂತ ನೀರಲ್ಲ. ಹರಿಯುವ ತೊರೆ. ಅಂತೆಯೇ ಈ ಧಾರಾವಾಹಿಗಳು ಕೂಡ ಜನರಲ್ಲಿ ಏಕಾತನತೆ ಮೂಡಿಸಿವೆ. ಹಾಗಾಗಿ ಜನಮತ್ತೆ ಬದಲಾವಣೆಗೆ ಕಾಯುತ್ತಿದ್ದಾರೆ. ಅದಕ್ಕಾಗಿ ವೃತ್ತಿರಂಗಭೂಮಿಯತ್ತ ವಾಲತೊಡಗಿದ್ದಾರೆ. ಆದ್ದರಿಂದಲೇನೋ ವೃತ್ತಿಮಂಡಳಿಯ ನಾಟಕಗಳಿಗೆ ಜನ ಬರುತ್ತಿದ್ದಾರೆ. ಇತ್ತೀಚಿನ ಮಂಡಳಿಗಳು ಆರ್ಥಿಕ ಗಳಿಕೆಯಲ್ಲಿ ಚೆನ್ನಾಗಿವೆ.

ಈ ಸಂಶೋಧನೆಯಿಂದ ವೃತ್ತಿರಂಗಭೂಮಿಯ ಮಹಿಳೆಯರ ಅಧ್ಯಯನ ಮುಗಿಯಲಿಲ್ಲವೇನೋ? ನಾನು ಹಾಕಿಕೊಂಡ ಮಿತಿಗೆ ಈ ಅಧ್ಯಯನ ಒಳಪಟ್ಟಿದೆ. ಈ ಮಿತಿಯನ್ನು ದಾಟ ಆಗಬೇಕಾದ ಅಧ್ಯಯನ ಇನ್ನೂ ಇದೆ ಎಂದು ಅನಿಸುತ್ತದೆ. ಅಧ್ಯಯನವನ್ನು ಮುಗಿಸಿದ ನಂತರವೂ ನನ್ನಲ್ಲಿ ಇನ್ನೂ ಅನೇಕ ಪ್ರಶ್ನೆಗಳು ಉಳಿದುಕೊಂಡಿವೆ. ಅವುಗಳೆಂದರೆ,

1) ಕಂಪನಿಗಳು ದಿವಾಳಿಯಾದಾಗ ಅಥವಾ ಮಹಿಳೆಯರ ನಿವೃತ್ತಿ ನಂತರ ಅವರ ಬದುಕು ಹೇಗೆ ನಡೆಯುತ್ತದೆ?
2) ಶಿಕ್ಷಣದಿಂದ ವಂಚಿತವಾದ ಈ ಕುಟುಂಬಗಳು ಎಂಥ ಸಮಸ್ಯೆಗೆ ಸಿಲುಕುತ್ತವೆ?
3) ಸಮಾಜಕ್ಕೆ ಇವರ ಕೊಡುಗೆ ಏನು? ಆರಂಭದಲ್ಲಿ ಚಿತ್ರರಂಗ ಇಂದು ಟಿ.ವಿ. ಮಾಧ್ಯಮಗಳಲ್ಲೂ ಇವರ ಕೊಡುಗೆ ಏನು?

ಇವುಗಳ ಕುರಿತು ವಿಸ್ತೃತ ಅಧ್ಯಯನ ನಡೆಯಬೇಕಾಗಿದೆ.

ಈ ಸಂಶೋಧನಾ ಅಧ್ಯಯನದಿಂದ ವಿಶೇಷವಾಗಿ ಕಂಡುಬರುವ ಅಂಶಗಳೆಂದರೆ, ಸಮಾಜದ ನಿರ್ಲಕ್ಷಕ್ಕೆ, ತುಳಿತಕ್ಕೆ, ಒಳಗಾದ ಮಹಿಳಾ ಕಲಾವಿದೆಯರು ತಮ್ಮ ಪ್ರತಿಭೆ ಹಾಗೂ ಸಾಧನೆಯ ಮೂಲಕ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಗೆ ಯಾವ ರೀತಿ ಅನಿವಾರ್ಯ ಅಂಗವಾದರು, ಎಂದು ಗುರುತಿಸುವುದರೊಂದಿಗೆ ಅವರನ್ನು ಬೆಳಕಿಗೆ ತರುವ ಪ್ರಯತ್ನವನ್ನು ಮಾಡಲಾಗಿದೆ.

ವೃತ್ತಿ ರಂಗಭೂಮಿಯು ಒಂದು ಸವಾಲಿನ ಕ್ಷೇತ್ರ. ಇಲ್ಲಿ ಸೌಂದರ್ಯ ಪ್ರತಿಭೆಗಳಿದ್ದರೆ ಸಾಲದು. ಬುದ್ಧಿವಂತಿಕೆಯೂ ಬೇಕು. ಪುರುಷರ ಹತೋಟಿಯಲ್ಲಿದ್ದ ವೃತ್ತಿ ರಂಗಭೂಮಿಯನ್ನು ಮಹಿಳೆಯರು ತಮ್ಮ ತೆಕ್ಕೆಗೆ ತೆಗೆದುಕೊಂಡದ್ದು ವಿಶೇಷ.

ಇದುವರೆಗೂ ವೃತ್ತಿ ರಂಗಭೂಮಿಗೆ ಸಂಬಂಧಪಟ್ಟಂತೆ ಅಧ್ಯಯನಗಳು ಆಗಿದ್ದರೂ, ಅವು ಬಿಡಿ ಬಿಡಿಯಾದ ಅಧ್ಯಯನಗಳಾಗಿವೆ. ಈ ಸಂಶೋಧನಾ ಪ್ರಬಂಧ ಇಡಿಯಾದ ಅಧ್ಯಯನವನ್ನು ಒಳಗೊಂಡಿದೆ.

ಹೀಗೆ ಉತ್ತರ ಕರ್ನಾಟಕ ಸಂಸ್ಕೃತಿಕವಾಗಿ ಯಾವ ರೀತಿ ತನ್ನ ಶ್ರೀಮಂತಿಕೆಯನ್ನು ಮೆರೆದಿದೆ ಎಂಬುದರ ಅವಲೋಕನವೇ ಈ ಪ್ರಬಂಧದ ವಿಶೇಷತೆಯಾಗಿದೆ.

# ಅಪರೂಪದ ಸಂಗ್ರಹ ಭಾವಚಿತ್ರಗಳು



ಗಂಗೂಬಾಯಿ ಗುಳೇದಗುಡ್ಡ



ಅಮೀರಜಾನ ಕರ್ನಾಟಕಿ



ಜುಬೇದಾಬಾಯಿ ಸವಣೂರ



ಗೋಹರಜಾನ್ ಅಮೀರಜಾನ್ ಕರ್ನಾಟಕಿ



ಹದಿಹರೆಯದಲ್ಲಿ ರೇಣುಕಮ್ಮ ಮುರುಗೋಡ

# ಅಭಿನಯನಿರತ ಕಲಾವಿದೆಯರು


ಚಂದೋಡಿ ಲೀಲಾ


ಪ್ರೇಮಾ ಬದಾಮಿ


ಅನ್ನಪೂರ್ಣ ಸಾಗರ


ಎಚ್. ಬಿ. ಸರೋಜಮ್ಮ


ರೇಣುಕಾ ಅಕ್ಕಲಕೋಟ


ಜನ್ನತಬಿ ಬಿಜಾಪೂರ

# ಅಭಿನಯನಿರತ ಕಲಾವಿದೆಯರು



ಜಯಲಕ್ಷ್ಮೀ ಪಾಟೀಲ



ಆಶಾರಾಣಿ ಬಿಜಾಪೂರ



ಶೈಲಮ್ಮ ಜತೋರ



ಥೆರೆಸಮ್ಮ ಡಿಸೋಜಾ



ಫ್ಲೋರಿನಾ ಗದಗ



ರಾಜಮ್ಮ ಹೆಗಡೆ

# ಅಭಿನಯನಿರತ ಕಲಾವಿದೆಯರು



ಪ್ರೇಮಾ ಗುಳೇದಗುಡ್ಡ



ಎನ್. ಬಸವರಾಜರೊಂದಿಗೆ ಪ್ರೇಮಾ ಬದಾಮಿ



ಹೆಲನ್ ಮೈಸೂರು



ಚಿಂದೋಡಿ ಲೀಲಾ



ಸಂದಾರಾಣಿ ಕಲ್ಕತ್ತಾ



ಸುಮತಿಶ್ರೀ ಹುಬ್ಬಳ್ಳಿ

# ಕಲಾವಿದೆಯರು



ಸುಭದ್ರಮ್ಮ ಮನ್ಸೂರ



ವಿಜಯಲಕ್ಷ್ಮಿ ಕಟ್ಟಿ



ಸರ್ವಮಂಗಳಾ ಮರಿಯಮ್ಮನಹಳ್ಳಿ



ಪುಷ್ಪಮಾಲಾ ಅಣ್ಣಿಗೇರಿ



ಜನ್ನತಬೇಗಂ ಇಲಕಲ್



ಭಾರತಿ ಶಿರಹಟ್ಟಿ, ಗದಗ



ಲಲಿತಮ್ಮ ದಾವಣಗೇರಿ



ಯಲ್ಲೂಬಾಯಿ ಚಿಮಲ



ಸರಸ್ವತಿ ಹುಬ್ಬಳ್ಳಿ



ಶಾರವ್ವ ಶಿಗ್ಗಾಂವ



ಮಾಲತಿ ಸುಧೀರ



ಸಚ್ಚಿದೇವಿ ಬಿಜಾಪೂರ

# ಕಲಾವಿದರೊಂದಿಗೆ ಸಂಶೋಧಕರು



ಮಾಲತಿ ಸುಧೀರ, ಬೆಂಗಳೂರು



ಲೋಲಮ್ಮ ಬೆಂಗಳೂರು, ಯೋಗಾಪೂರ (ಬಿಜಾಪೂರ)



ಆಶಾರಾಣಿ, ಬಿಜಾಪೂರ



ಶಿವೂಬಾಯಿ, ಹುಕ್ಕೇರಿ (ಹುಬ್ಬಳ್ಳಿ)



ಎಲ್ಲೂಬಾಯಿ ಚಿಮಲ್, ಹಂಸನೂರು



ಸಾವಿತ್ರಿ ಬಳ್ಳಾರಿ (ಗದಗ)

# ಕಲಾವಿದರೊಂದಿಗೆ ಸಂಶೋಧಕರು



ಜಯಲಕ್ಷ್ಮಿ ಪಾಟೀಲ



ಸುಮತಿಶ್ರೀ ನವಲಿಹಿರೇಮಠ, ಹುಬ್ಬಳ್ಳಿ



ನಂದಾ ಗೋಕಾಕ, ಬಾಗಲಕೋಟ



ಹೆಲನ್ ಮೈಸೂರು, ಹುಬ್ಬಳ್ಳಿ



ನಾಗರತ್ನಮ್ಮ, ಮರಿಯಮ್ಮನಹಳ್ಳಿ

# ಕಲಾವಿದರೊಂದಿಗೆ ಸಂಶೋಧಕರು



ಪರಿಮಳಾ ಕಲಾವಂತ, ಹುಬ್ಬಳ್ಳಿ



ಪ್ರೇಮಾ ಬದಾಮಿ, ಧಾರವಾಡ



ಅನ್ನಪೂರ್ಣಾ ಸಾಗರ, ಬೆಂಗಳೂರು



ಅಜಮತ್ ಬೇಗಂ, ಇಲಕಲ್



ಪ್ರೇಮಾ ಗುಳೇದಗುಡ್ಡ, ಗುಳೇದಗುಡ್ಡ



ಗುಡಿಹಳ್ಳಿ ನಾಗರಾಜ, ಬೆಂಗಳೂರು

# ಕಲಾವಿದರೊಂದಿಗೆ ಸಂಶೋಧಕರು



ಪುಷ್ಪಮಾಲಾ ಅಣ್ಣಿಗೇರಿ, ಹುಬ್ಬಳ್ಳಿ



ರೇಣಮ್ಮ ಚಿತ್ರರಗಿ, ನರಗುಂದ



ಸಚ್ಚಮ್ಮ ನಾಗರಾಳ ಯೋಗಾಪೂರ



ರಂಗಮ್ಮ ದೋತ್ರೆ (ಹಂಸನೂರು)



ಪ್ರಮಿಳಮ್ಮ ಗುಡೂರ

# ಕಲಾವಿದರೊಂದಿಗೆ ಸಂಶೋಧಕರು



ಲಕ್ಷ್ಮೀಬಾಯಿ ಏಣಗಿ, ಧಾರವಾಡ



ಸರೋಜಮ್ಮ ದುತ್ತರಗಿ (ಹಣಮಸಾಗರ)



ನಂದಾರಾಣಿ ಕಲ್ಕತ್ತಾ, ಬೆಂಗಳೂರು



ಪ್ಲೋರಿನಾ ಗದಗ



ಮಮತಾ ಗುಡೂರ, ಪ್ರಮೀಳಮ್ಮ ಗುಡೂರ ಸಹೋದರಿಯರು



ಸುಮಿತ್ರಮ್ಮ ಕುಂದಾಪೂರ, ಹುಬ್ಬಳ್ಳಿ

## ಕಲಾವಿದರೊಂದಿಗೆ ಸಂಶೋಧಕರು



ಮಾಲತಿ ಮೈಸೂರು



ಸರೋಜಮ್ಮ ಚಿತ್ತರಗಿ, ಇಲಕಲ್



ಮಾಲಾ ಕುಂದಾಪೂರ, ಹುಬ್ಬಳ್ಳಿ



ನಾಗರತ್ನಮ್ಮ ಹೊಸಮನಿ



ಥೇರಸಮ್ಮ ಡಿಸೋಜಾ



ಜನ್ನತ್ ಬೇಗಂ ಬದಾಮಿ, ಇಲಕಲ್

# ಅನುಬಂಧ-2ಅ

## ಸಂದರ್ಶಿಸಿದ ಕಲಾವಿದೆಯರು

| | ನಟಿಯರು | ದೂರವಾಣಿ ಸಂಖ್ಯೆ | ಊರು | ದಿನಾಂಕ |
|---|---|---|---|---|
| 1. | ಮಾಲತಿಶ್ರೀ ಮೈಸೂರು | 9448074796 | ಬೆಂಗಳೂರು | 27-11-2008 |
| 2. | ಮರಿಯಮ್ಮನ ಹಳ್ಳಿ ನಾಗರತ್ನಮ್ಮ | 9449312468 | ಬೆಂಗಳೂರು | 26-11-2008 |
| 3. | ಚಿಂದೋಡಿ ಲೀಲಾ | 94489233185 | ಬೆಂಗಳೂರು | 28-11-2008 |
| 4. | ಸಿ. ಎಸ್. ನಿರ್ಮಲಾ | 9448231715 | ಬೆಂಗಳೂರು | 28-11-2008 |
| 5. | ಸುಮಿತ್ರಮ್ಮ ಕುಂದಾಪೂರ | 9343871430 | ಹುಬ್ಬಳ್ಳಿ | 29-11-2008 |
| 6. | ಮಾಲಾ ಕುಂದಾಪೂರ | 9343871430 | ಹುಬ್ಬಳ್ಳಿ | 17-01-2009 |
| 7. | ಪ್ರೇಮಾ ಬದಾಮಿ | 8448118078 | ಧಾರವಾಡ | 19-01-2009 |
| 8. | ರೇಣುಕಾ ಅಕ್ಕಲಕೋಟಿ | 9902005955 | ಅಥಣಿ | 12-04-2009 |
| 9. | ಮಮತಾ ಗುಡೂರ | | ಗುಡೂರು | 17-05-2009 |
| 10. | ಪ್ರಮಿಳಮ್ಮ ಗುಡೂರ | 9480198363 | ಗುಡೂರು | 17-05-2009 |
| 11. | ಜನ್ನತ್ ಬೇಗಂ ಬದಾಮಿ | 9741274717 | ಇಲಕಲ್ | 18-05-2009 |
| 12. | ಸರೋಜಮ್ಮ ಚಿತ್ತರಗಿ | | ಇಲಕಲ್ | 18-05-2009 |
| 13. | ಅಜಮತ್ ಬೇಗಂ | | ಇಲಕಲ್ | 18-05-2009 |
| 14. | ಸರೋಜಮ್ಮ ಧುತ್ತರಗಿ | 9448746945 | ಹಣಮಸಾಗರ | 18-05-2009 |
| 15. | ರಂಗಮ್ಮ ಧೋತ್ರೆ | | ಹಂಸನೂರು | 19-05-2009 |
| 16. | ಎಲ್ಲೂಬಾಯಿ ಚಿಮ್ಮಲ್ | | ಹಂಸನೂರು | 19-05-2009 |
| 17. | ಅಂಬವ್ವ ಗುರಿಕಾರ | | ಹಂಸನೂರು | 19-05-2009 |
| 18. | ತಿಪ್ಪವ್ವ ಗುರಿಕಾರ | | ಹಂಸನೂರು | 19-05-2009 |
| 19. | ಪ್ಲೋರಿನಾ ಗದಗ | 9342483237 | ಗದಗ | 20-05-2009 |
| 20. | ಸಾವಿತ್ರಿ ಬಳ್ಳಾರಿ | 9945762979 | ಗದಗ | 20-05-2009 |
| 21. | ಸರಸ್ವತಿ ಬೆಂಗಳೂರು | | ಹುಬ್ಬಳ್ಳಿ | 22-05-2009 |
| 22. | ಎಚ್. ಬಿ. ಸರೋಜಮ್ಮ | 9448895812 | ಹುಬ್ಬಳ್ಳಿ | 22-05-2009 |
| 23. | ಗಂಗೂಬಾಯಿ ಹಾನಗಲ್ | | ಹುಬ್ಬಳ್ಳಿ | 22-05-2009 |
| 24. | ಶೈಲಮ್ಮಾ ರಾಮದುರ್ಗ | | ಚಿಕ್ಕೋಡಿ | 25-05-2009 |
| 25. | ಸುಮತಿಶ್ರೀ ನವಲಿಹಿರೇಮಠ | 9845885833 | ಹುಬ್ಬಳ್ಳಿ | 22-06-2009 |
| 26. | ಪರಿಮಳಾ ಕಲಾವಂತ | 9342136227 | ಹುಬ್ಬಳ್ಳಿ | 22-06-2009 |
| 27. | ಜಯಲಕ್ಷ್ಮೀ ಪಾಟೀಲ | 9448548901 | ಹುಬ್ಬಳ್ಳಿ | 28-06-2009 |
| 28. | ಪುಷ್ಪಮಾಲಾ ಅಣ್ಣಿಗೇರಿ | 9341220752 | ಹುಬ್ಬಳ್ಳಿ | 28-06-2009 |

| 29. | ಮಾಲತೀ ಸುಧೀರ | 9845245061 | ಬೆಂಗಳೂರು | 08-07-2009 |
|---|---|---|---|---|
| 30. | ನಂದಾರಾಣಿ ಕಲ್ಕತ್ತಾ | 9448243796 | ಬೆಂಗಳೂರು | 08-07-2009 |
| 31. | ಅನ್ನಪೂರ್ಣಾ ಸಾಗರ | 9448778966 | ಬೆಂಗಳೂರು | 08-07-2009 |
| 32. | ಲಲಿತಾ ದಾವಣಗೇರಿ | 9480071129 | ಬೆಂಗಳೂರು | 09-07-2009 |
| 33. | ನಂದಾ ಜಯರಾಜ | 99869881577 | ಬಾಗಲಕೋಟೆ | 11-07-2009 |
| 34. | ಲೋಲಾದೇವಿ ಬೆಂಗಳೂರು | 9901110864 | ಬಿಜಾಪೂರ | 12-07-2009 |
| 35. | ಸಚ್ಚಿದೇವಿ ನಾಗರಾಳ | 9008950602 | ಬಿಜಾಪೂರ | 12-07-2009 |
| 36. | ರಾಜಮ್ಮ ಹೆಗ್ಡೆ | | ಬಿಜಾಪೂರ | 12-07-2009 |
| 37. | ಆಶಾರಾಣಿ ಬಿಜಾಪೂರ | 9902835217 | ಬಿಜಾಪೂರ | 12-07-2009 |
| 38. | ಜನ್ನತಬಿ ಮುಲ್ಲಾ | 9611490144 | ಬಿಜಾಪೂರ | 12-07-2009 |
| 39. | ಶಿವೂಬಾಯಿ ಹುಕ್ಕೇರಿ | 9343478492 | ಹುಬ್ಬಳ್ಳಿ | 21-11-2009 |
| 40. | ಲಕ್ಷ್ಮೀಬಾಯಿ ಏಣಗಿ | 9845007191 | ಧಾರವಾಡ | 14-12-2009 |
| 41. | ನಾಗರತ್ನಮ್ಮ ಹೊಸಮನಿ | 9916057451 | ಧಾರವಾಡ | 15-12-2009 |
| 42. | ಎಸ್. ರೇಣುಕಾ | | ಮರಿಯಮ್ಮನಹಳ್ಳಿ | 8-7-2010 |
| 43. | ಕೆ. ಸಾವಿತ್ರಮ್ಮ | | ಮರಿಯಮ್ಮನಹಳ್ಳಿ | 8-7-2010 |
| 44. | ಕೆ. ಸರ್ವಮಂಗಳಾ | 9741572627 | ಮರಿಯಮ್ಮನಹಳ್ಳಿ | 8-7-2010 |
| 45. | ಶಾರಮ್ಮ ಶಿಗ್ಗಾಂವ | 9448319431 | ಹುಬ್ಬಳ್ಳಿ | 9-7-2010 |
| 46. | ರೂಪಾ ಶಿಗ್ಗಾಂವ | | ಹುಬ್ಬಳ್ಳಿ | 9-7-2010 |
| 47. | ದೇವಿಕಾರಾಣಿ ಶಿಗ್ಗಾಂವ | | ಬಿಡನಾಳ | 9-7-2010 |
| 48. | ಲಕ್ಷ್ಮಿದೇವಿ ಶಿಗ್ಗಾಂವ | 9945267950 | ಬಿಡನಾಳ | 9-7-2010 |
| 49. | ರೇಣಮ್ಮ ಚಿತ್ತರಗಿ | 9880342862 | ನರಗುಂದ | 9-7-2010 |
| 50. | ಥೆರೆಸಮ್ಮಾ ಡಿಸೋಜಾ | 9916121132 | ಹುಬ್ಬಳ್ಳಿ | 10-7-2010 |
| 51. | ಹೆಲನ್ ಮೈಸೂರು | 9611601059 | ಹುಬ್ಬಳ್ಳಿ | 10-7-2010 |
| 52. | ಸುನಂದಾ ಹೊಸಪೇಟ | 9880339350 | ಹುಬ್ಬಳ್ಳಿ | 2-11-2010 |
| 53. | ಪ್ರೇಮಾ ಗುಳೇದಗುಡ್ಡ | 9448190539 | ಗುಳೇದಗುಡ್ಡ | 17-11-2010 |
| 54. | ವಿಜಯಲಕ್ಷ್ಮಿ ಗುಳೇದಗುಡ್ಡ | 9448190539 | ಗುಳೇದಗುಡ್ಡ | 17-11-2010 |
| 55. | ಭಾರತೀ ಶಿರಹಟ್ಟಿ | 9448309541 | ಗದಗ | 16-01-2011 |
| 56. | ಶಾಂತಮ್ಮ ಪತ್ತಾರ | 9481315950 | ಇಲಕಲ್ | 23-01-2011 |
| 57. | ಸುಭದ್ರಮ್ಮ ಮನ್ಸೂರ | 9880539515 | ಬಳ್ಳಾರಿ | 20-1-2011 |

## ಅನುಬಂಧ-2ಬ

# ಸಂಪನ್ಮೂಲ ವ್ಯಕ್ತಿಗಳ ಸಂದರ್ಶನ

| | ಸಂಪನ್ಮೂಲ ವ್ಯಕ್ತಿಗಳು | ವಯಸ್ಸು | ವೃತ್ತಿ | ಮೊಬೈಲ್ ನಂಬರ (ದೂರವಾಣಿ ಸಂಖ್ಯೆ) | ಸಂದರ್ಶನ ಮಾಡಿದ ಸ್ಥಳ | ದಿನಾಂಕ |
|---|---|---|---|---|---|---|
| 1. | ಶ್ರೀ ಏಣಗಿ ಬಾಳಪ್ಪನವರು | 97 | ಹಿರಿಯ ರಂಗ ಕಲಾವಿದರು | 9972948238 | ಶಿವಾನಂದ ನಗರ, ಕೆ.ಎಲ್.ಇ. ಆಸ್ಪತ್ರೆ ಹತ್ತಿರ ಬೆಳಗಾಂವ. | 12–02–2010 |
| 2. | ಶ್ರೀಮತಿ ಗಂಗೂಬಾಯಿ ಹಾನಗಲ್ | 97 | ಹಿಂದೂಸ್ತಾನಿ ಗಾಯಕಿ | 9342967940 | ದೇಶಪಾಂಡೆ ನಗರ ಹುಬ್ಬಳ್ಳಿ | 22–5–2009 |
| 3. | ಶ್ರೀ ದಿ. ಎನ್. ಬಸವರಾಜ ಗುಡಗೇರಿ | 70 | ಹಿರಿಯ ರಂಗ ಕಲಾವಿದರು | 9448961899 | ಮಾಡರ್ನ ಲಾಜ ಹುಬ್ಬಳ್ಳಿ ಸ್ಟೇಶನ ಹತ್ತಿರ | 21–11–2009 |
| 4. | ಡಾ. ವೀರಣ್ಣ ರಾಜೂರ | 60 | ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | 9900334731 | ಬಸವಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | 10–09–2010 |
| 5. | ಶ್ರೀ ಮಲ್ಲಿಕಾರ್ಜುನ ಬನ್ನಿ | 60 | ಹಿರಿಯ ವಕೀಲರು | 9448946941 | ನೇಕಾರರ ಓಣಿ, ಗುಳೇದಗುಡ್ಡ | 17–11–2010 |
| 6. | ಶ್ರೀ ಕೆ.ಎಲ್. ಕುಂದರಗಿ | 58 | ಹಿರಿಯ ವಕೀಲರು | 9845745550 | ರಾಘವೇಂದ್ರ ಸ್ವಾಮಿಮಠದ ಹತ್ತಿರ ಅಥಣಿ | 5–5–2009 |
| 7. | ಡಾ. ರಾಮಕೃಷ್ಣ ಮರಾಠೆ | 55 | ಕನ್ನಡ ಪ್ರಾಧ್ಯಾಪಕರು | 9448863818 | ಮರಾಠಾ ಮಂಡಳ ಮಹಾವಿದ್ಯಾಲಯ, ಬೆಳಗಾಂವ | 6–1–2010 |

| | | | | | | |
|---|---|---|---|---|---|---|
| 8. | ಶ್ರೀ ಗುಡಿಹಳ್ಳಿ ನಾಗರಾಜ | 55 | ಪ್ರಜಾವಾಣಿ ಉಪಸುದ್ದಿ ಸಂಪಾದಕರು | 9448568646 | ಪ್ರಜಾವಾಣಿ ಎಂ.ಜಿ. ರಸ್ತೆ, ಬೆಂಗಳೂರು | 26-11-2008 |
| 9. | ಶ್ರೀಮತಿ. ಹೇಮಾ ಪಟ್ಟಣಶೆಟ್ಟಿಮೇಡಂ | 55 | ಖ್ಯಾತ ಲೇಖಿಕರು | 9448861604 | ವಿದ್ಯಾಗಿರಿ ಶಂಕರಮಠದ ಹತ್ತಿರ ಧಾರಾಡ | 15-1-2010 |
| 10. | ಶ್ರೀ ನಿಡುಸಾಲೆ ಪಟ್ಟಸ್ವಾಮಯ್ಯ | 61 | ನಿರ್ಮಾಪಕರು, ಗೌರವಸಂಪಾದಕರು | 9845201537 | 2ನೇ ಘಟ್ಟ 3ನೇ ವಿಭಾಗ ನಾಗರಭಾವಿ ಬೆಂಗಳೂರು-5600072 | 29-11-2010 |
| 11. | ಶ್ರೀ ಬಸಣ್ಣಾ ತಿರ್ಲಾಪೂರ | 55 | ರಂಗ ಕಲಾವಿದರು | 9342136225 | ಗಣೇಶಪೇಟೆ ಹುಬ್ಬಳ್ಳಿ | 22-6-2009 |
| 12. | ಶ್ರೀ ಶ್ರೀನಿವಾಸ ಬೋಚಗೇರಿ | 55 | ಪ್ರಿಂಟಿಂಗ್ ಪ್ರೆಸ್ ಮಾಲೀಕರು | 9448680313 | ಗಣೇಶಪೇಟೆ ಕೆಲಸಗಾರ ಪ್ರೆಸ್ ಹುಬ್ಬಳ್ಳಿ | 22-5-2009 |
| 13. | ಪ್ರೊ. ಬಾಳಾಸಾಹೇಬ ಲೋಕಾಪೂರ | 55 | ಪ್ರಾಧ್ಯಾಪಕರು | 9343466313 | 'ರತ್ನತ್ರಯ' 15ನೇ ಕ್ರಾಸ್, ವಿದ್ಯಾಗಿರಿ ಬಾಗಲಕೋಟ | 17-11-2010 |
| 14. | ಪ್ರೊ. ವಾಯ್. ಬಿ. ಹಿಮ್ಮಡಿ | 50 | ಪ್ರಾಧ್ಯಾಪಕರು | 9242290846 | ಬ್ಯಾಕೋಡ ರಸ್ತೆ, ರಾಯಭಾಗ | 15-10-2010 |
| 15. | ಶ್ರೀ ಜಗದೀಶ ಹಿರೇಮಠ | 54 | ರಂಗಭೂಮಿ ಹಾಗೂ ಕಿರುತೆರೆಯ ಕಲಾವಿದರು | 9535069262 | 2ನೇ ಕ್ರಾಸ್, 3ನೇ ಮೇನ್, ವಿಜಯನಗರ ಬೆಂಗಳೂರು-40 | 27-11-2008 |
| 16. | ಶ್ರೀ ಮುರಗೆಪ್ಪ ಭೀಮದಾಸ ಹೂಗಾರ | 50 | ರಾಘವೇಂದ್ರಮಠದ ಉಸ್ತುವಾರಿಗಳು | | ರಾಘವೇಂದ್ರಮಠದ ಹತ್ತಿರ ಅಥಣಿ | 5-5-2009 |

# ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಕಲಾವಿದೆಯರು

(ಸಂದರ್ಶನ ಮಾಡದೇ ಉಳಿದಿರುವಂತ ಕಲಾವಿದೆಯರು)

01) ಲೀಲಾವತಿ ರಮದುರ್ಗ
02) ಶಿರಹಟ್ಟಿ ಇಮಾಸ್ತಾನಿ
03) ಸುಶೀಲಾ ಬಸರೂರ
04) ಬಳ್ಳಾರಿ ಲಲಿತಮ್ಮ
05) ಕುಂದಾಪೂರ ಸುಶಿಲಮ್ಮ
06) ಮುನ್ನಾಜಾನ ಬೀಳಗಿ
07) ಕೆರೂರ ಶಾಂತಮ್ಮ
08) ಮುರಗೋಡ ಹಿರಾಬಾಯಿ
09) ರತ್ನಾ ಬ್ರಹ್ಮಾವರ
10) ಸುಲೋಚನಾ ಗದಗ
11) ಶೀಲಾ ಸಂಗನಾಳ
12) ಅಂಬುಜಮ್ಮ ಹೊಸಮನಿ
13) ನಾಗರತ್ನಮ್ಮ ಕೊಟ್ಟೂರ
14) ವಜೀರಬಾಯಿ ಹುಬ್ಬಳ್ಳಿ
15) ಸುಶೀಲಾ ಹುಬ್ಬಳ್ಳಿ
16) ಜಿ.ವ್ಹಿ. ರಾದಮ್ಮ
17) ಜಿ.ವ್ಹಿ. ರುಕ್ಮಿಣಿ
18) ಶೀಲಮ್ಮ ಯಲ್ಲಾಪೂರ
19) ರತ್ನಾ ಹಾನಗಲ್
20) ಲಕ್ಷ್ಮೀಬಾಯಿ ಬಾರಿಗಿಡದ
21) ಜೋಷಿ ಶಾಂತಮ್ಮ
22) ಸರೋಜಾ ಬಳ್ಳಾರಿ
23) ತಾರಾಬಾಯಿ ಜಂಬಲದಿನ್ನಿ
24) ಲೀಲಾವತಿ ವರವಿ
25) ಶಾಂತಾಭಾಯಿ ಸಿದ್ದರಾಜು
26) ಬಸವಣ್ಣೆಮ್ಮ ಗುಳೇದಗುಡ್ಡ
27) ಸುಲೋಚನಾ ಕಂದಗಲ್
28) ಉಮಾ ಚಿಲಕರಾಗಿ
29) ಭಾರತಿ ದಾವಣಗೇರಿ
30) ಉಮಾರಾಣಿ ಇಳಕಲ್
31) ಶಾಂತಮ್ಮ ಡಿಗ್ಗಿ
32) ಕಮಲಮ್ಮ ಮುದೋಳ
33) ರಾಧಾಬಾಯಿ ದೇಸಾಯಿ
34) ಜಯಶ್ರೀ ಸುಂದರೇಶ
35) ಜಯಶ್ರೀ ಬನಹಟ್ಟಿ
36) ಮಂಜುಳಾ ಪಾಟೀಲ
37) ಮಂಜುಳಾ ಚೌದರಿ
38) ರಾಧಮ್ಮ ಎಸ್.ಆರ್.
39) ಹಾವೇರಿ ಲಲಿತಮ್ಮ
40) ಸುನಂದಾ ಕಡಪಟ್ಟಿ
41) ಪ್ರೇಮಾ ತಾಳಿಕೋಟಿ
42) ವೀಣಾ ಬೆಂಗೇರಿ
43) ಲಲಿತಾ ಕುಕನೂರ
44) ಮಂಜುಳಾ ಕುಕನೂರ
45) ರತ್ನಾ ಹಾನಗಲ್ಲ
46) ಇಳಕಲ ಸಂಗವ್ವ
47) ಮಾಬವ್ವ ನೂರಜಾನ
48) ಬೀಳಗಿ ಕಮಲಮ್ಮ

49) ಗೀತಾ ಬಳ್ಳಾರಿ

50) ಮಾಲಾ ಬೆಳವಣಕಿ

51) ಶಿವಕುಮಾರಿ ಕೂಡಲಗಿ

52) ಲಕ್ಷ್ಮೀ ಹೊಸಪೇಟೆ

53) ರೇಣುಕಾ ಹೊಸಪೇಟೆ

54) ಸುಶೀಲಾ ಬಳ್ಳಾರಿ

55) ಮಾಲಾ ಶಿಗ್ಗಾಂವಿ

56) ಶಾಂತಮ್ಮ ಸಿಂದನೂರ

57) ರೋಹಿನಿ ಹರಿಹರೇಶ್ವರ

58) ಮಂಜುಳಾ ಅಯ್ಯಣ್ಣಸ್ವಾಮಿ

59) ಪ್ರೇಮಾ ಜೇವರಗಿ

60) ಮಧುರಾ ಠಾಕೂರ

61) ಅಂಬಿಕಾ ಹಿರಿಯೂರ

62) ಲೀಲಾ ಸಾಗರ

63) ಶ್ವೇತಾ ಶೆಟ್ಟಿ

64) ನಿರ್ಮಲಾ ಹುಬ್ಬಳ್ಳಿ

65) ಪದ್ಮಾ ಮರಿಯಮ್ಮನಹಳ್ಳಿ

66) ಶಾಂತಾ ಮಾನವಿ

67) ರಾಜಮ್ಮ

68) ಭಾರತಮ್ಮ

69) ದೇವಕಿ

70) ಗೀತಾ ಬಳ್ಳಾರಿ

71) ವರಲಕ್ಷ್ಮೀ ಬಳ್ಳಾರಿ

72) ಸಾವಿತ್ರಿ ಕಿತ್ತೂರ

73) ರೇಣುಕಾ ಹಿರೇಮಠ

74) ಸಾರಿಕಾ ಹುಬ್ಬಳ್ಳಿ

75) ಗೀತಾ ಶ್ರೀಂಗೇರಿ

76) ಕರಿಷ್ಮಾ ಬೈಲಹೊಂಗಲ

77) ನಿರ್ಮಲಾ ಬೈಲಹೊಂಗಲ

78) ಮೀನಾಕ್ಷಿ ಬೈಲಹೊಂಗಲ

79) ಮೀನಾಕ್ಷಿ ದಾವಣಗೇರಿ

80) ರೇಣುಕಾ ಕಲ್ಲೂರ

81) ಸುಜತಾ ದೇವರಗಿ

82) ಕವಿತಾ ಬಣ್ಣೂರ

83) ಹೇಮಾ ಗದಗ

84) ಪ್ರಿಯಾ ಹಿರಿಯೂರ

85) ಗೀತಾ ಹಿರಿಯೂರ

86) ಲಕ್ಷ್ಮೀ ಬಳ್ಳೂರ

87) ಭವಾನಿ ಕೊಡ್ಲಿ

88) ಸುಭದ್ರಮ್ಮ ಕೊಡ್ಲಿ

89) ರೇಣುಕಾ ಕೊಡ್ಲಿ

90) ಶ್ವೇತಾ ಹಿರಿಯೂರ

91) ಗೀತಾ ದಾವಣಗೇರಿ

92) ಶಾಂತಮ್ಮ ದಾವಣಗೇರಿ

93) ಶಿರಸಿ ರತ್ನಮ್ಮ

94) ರಂಗನಾಯಕಮ್ಮ

95) ಲೀಲಾವತಿ

96) ಉಮಾದೇವಿ ಉಡಸಿ

97) ಇಂದುಮತಿ ದಾವಣಗೇರಿ

98) ಸೋನುಬಾಯಿ ಇಳಕಲ

99) ಸುಲೋಚನಾ ಕಂದಗಲ್

100) ಸಾಗರ ಮಂಜುಳಾ

# ಆಕರಗ್ರಂಥಗಳು

1) ಅಕ್ಷರ ಕೆ. ವಿ. 'ರಂಗ ಪ್ರಪಂಚ' ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸ ದೆಹಲಿ, 1994.

2) ಅನ್ನಪೂರ್ಣ ಸಾಗರ ಮತ್ತು ಗವೀಶ ಹಿರೇಮಠ, 'ನನ್ನ ಬದುಕಿನ ಪುಟಗಳಿಂದ ಸಂಗಮೇಶ್ವರ ಮಹಿಳಾ ಮಂಡಳ ಗುಲಬರ್ಗಾ', 2007.

3) ಆದ್ಯ ರಂಗಾಚಾರ್ಯ, "ಕನ್ನಡ ರಂಗಭೂಮಿಯ ಪುರೋಭಿವೃದ್ಧಿ", ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1968.

4) ಇಂದಿನ ರಂಗಕಲಾವಿದರು, "ಭಾಗ 3 ಕರ್ನಾಟಕ ನಾಟಕ ಅಕಾಡೆಮಿ", ಬೆಂಗಳೂರು, 2000.

5) ಇಂದಿನ ರಂಗಕಲಾವಿದರು, "ಭಾಗ 3 ಕರ್ನಾಟಕ ನಾಟಕ ಅಕಾಡಮಿ", ಬೆಂಗಳೂರು, 2001.

6) ಕಟ್ಟಿಮನಿ ಎಲ್. ಆರ್., "ಕರ್ನಾಟಕ ರಂಗಭೂಮಿ ವೈಭವ", ಜ್ಯೋತಿ ಕಾಲನಿ, ಸಾಯಿ ನಗರ, ಹುಬ್ಬಳ್ಳಿ 2003.

7) ಕೋತಿನ ಎಸ್. ಎಸ್. "ರಂಗ ಕಲಾವಿದೆ ಸೋನುಬಾಯಿ ದೊಡ್ಡಮನಿ", ಶ್ರೀಮತಿ ಸೋನುಬಾಯಿ ದೊಡಮನಿ, ಸತ್ಕಾರ ಸಮಿತಿ, ಧಾರವಾಡ, 1980.

8) ಗಣೇಶ ಅಮೀನಗಡ, "ಬಣ್ಣದ ಬದುಕಿನ ಚಿನ್ನದ ದಿನಗಳು", (ಏಣಗಿ ಬಾಳಪ್ಪನವರ ರಂಗಾನುಭವ ಕಥನ) ಪ್ರಸಾದನ ಪ್ರಕಾಶನ, ಭಾರತೀನಗರ, ಚಿಕ್ಕ ಮಂಗಳೂರು, 2007.

9) ಗವೀಶ ಹಿರೇಮಠ, "ರಂಗ ಕುಸುಮಗಳು", ಪ್ರಗತಿ ಪ್ರಕಾಶನ, ಗುಲ್ಬರ್ಗಾ, 1994.

10) ಗಾಯತ್ರಿ ಎನ್. "ಮಹಿಳೆ ಬಿಡುಗಡೆಯ ಹಾದಿಯಲ್ಲಿ" ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, 1991.

11) ಗುಡಿಹಳ್ಳಿ ನಾಗರಾಜ, "ರಂಗ ಸಿರಿ", ಮರಯಮ್ಮನಹಳ್ಳಿ ನಾಗರತ್ನಮ್ಮ, ಕನ್ನಡ ವಿ. ವಿ. ಹಂಪಿ, 1999.

12) ಗುಡಿಹಳ್ಳಿ ನಾಗರಾಜ, "ಚಿಂದೋಡಿ ಲೀಲಾ ನಾಟಕ ಅಕಾಡೆಮಿ", ಬೆಂಗಳೂರು, 1999.

13) ಗುಡಿಹಳ್ಳಿ ನಾಗರಾಜ, "ತೆರೆ ಸರಿದಾಗ" (ಮಾಲತಿಶ್ರೀ ಮೈಸೂರು ಅವರ ಆತ್ಮಕತೆ), ಮುದ್ದುಶ್ರೀ ಗ್ರಂಥಮಾಲೆ, ಕೃಷ್ಣಾಪೂರದೊಡ್ಡಿ, 2006.

14) ಗುಡಿಹಳ್ಳಿ ನಾಗರಾಜ, "ರಂಗಸೆಲೆ", ಪ್ರೆಸ್ ಕ್ಲಬ್ ಪ್ರಕಾಶನ, ಕಬ್ಬನ್ ಪಾರ್ಕ, ಬೆಂಗಳೂರು, 2009.

15) ಚಂದ್ರಶೇಖರ ವಸ್ತ್ರದ, "ಕನ್ನಡ ಜಗದ್ಗುರು", ಸವಿಚೇತನ ಪ್ರಕಾಶನ, ಗೋಧೋಳಿ, ಆದರ್ಶನಗರ, ಗದಗ, 2010.

16) ಚಿದಾನಂದ ಮೂರ್ತಿ. ಎಂ. "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ", ಬಾನುಮತಿ ಎಸ್. ಶಹಾ., ಸ್ವಪ್ನ ಬುಕ್ ಹೌಸ್, ಗಾಂಧೀನಗರ, ಬೆಂಗಳೂರು, 2002.

17) ಜಕಬಾಳ ಎಸ್. ಎಫ್. "ಕಲಾವೈಭವ ನಾಟ್ಯ ಸಂಘ ಬೆಳಗಾವಿ", ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಶೋಧನ ಪ್ರಬಂಧ, 1996.

18) ಜಯತೀರ್ಥ ಗೋವಿಂದರಾವ ಕುಲಕರ್ಣಿ, "ಗುರುಭಕ್ತಿ ಶ್ರೀ ಅಥಣಿ ಭೀಮದಾಸರು", ಶ್ರೀ ರಾಘವೇಂದ್ರಸ್ವಾಮಿ ಟ್ರಸ್ಟ್, ಅಥಣಿ, 1997.

19) ತಿಪ್ಪೆರುದ್ರಸ್ವಾಮಿ. ಎಚ್. "ಕರ್ನಾಟಕ ಸಂಸ್ಕೃತ ಸಮೀಕ್ಷೆ", ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು, 2007.

20) ದೇವದಾಸ ಕಳಸದ, "ಕನ್ನಡ ವೃತ್ತಿರಂಗ ಸಂಸ್ಕೃತಿ ಒಂದು ಸೈದ್ಧಾಂತಿಕ ಅಧ್ಯಯನ", ವಿದ್ಯಾನಿಧಿ ಪ್ರಕಾಶನ, ಗದಗ, 2006–07.

21) ದುರ್ಗಾದಾಸ. ಕೆ. ಆರ್., "ಬಳ್ಳಾರಿ ಜಿಲ್ಲೆಯ ಬಯಲಾಟಗಳು", ಸಂಶೋಧನಾ ಮಹಾಪ್ರಬಂಧ, ಗುಲ್ಬರ್ಗಾ, ವಿ. ವಿ. 1996.

22) ದುರ್ಗಾದಾಸ. ಕೆ. ಆರ್., "ಬಯಲಾಟ ಪದ್ಯ ಸಾಹಿತ್ಯ", ರಾಜ ಪ್ರಕಾಶನ, ಹನುಮಂತ ನಗರ, ಬನ್ನಿಮಂಟಪ, ಮೈಸೂರು, 2004.

23) ಧೂಪದ ಎಂ. ಜಿ. "ವೃತ್ತಿ ನಾಟಕ ತಂಡಗಳ ಸಮೀಕ್ಷೆ", ವಿದ್ಯಾ ಪ್ರಕಾಶನ, ಬೆಂಗಳೂರು, 1998.

24) ಪ್ರಕಾಶ ಗರುಡ, "ಗರುಡ ಸದಾಶಿವರಾಯರು", ಸಾಹಿತ್ಯ ಅಕಾಡಮಿ, ಬೆಂಗಳೂರು, 2008.

25) ಪಾರ್ಶ್ವನಾಥ ಎಚ್. ಎ., "ರಂಗಸಂಗ", ನಿತಿನ್ ಪ್ರಕಾಶನ, ಮೈಸೂರು, 1995.

26) ಪೋಲಿಸ್ ಪಾಟೀಲ. ಬಿ. ಆರ್., "ಎನ್. ಬಸವರಾಜ ಗುಡಗೇರಿ", ನಾಟಕ ಅಕ್ಯಾಡಮಿ, ಬೆಂಗಳೂರು, 2001.

27) ಬಸವರಾಜ ಜಗಜಂಪಿ, "ಗರುಡ ಸದಾಶಿವರಾಯರ: ನಾಟಕ ಸಾಹಿತ್ಯ ಹಾಗೂ ವೃತ್ತಿರಂಗಭೂಮಿ ಅಧ್ಯಯನ", ಸಂಶೋಧನ ಪ್ರಬಂಧ, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಸಂಸ್ಥಾನಮಠ, ಗದಗ, 1989.

28) ಬಸವನಾಳ. ಸಿ. ಸಿ. (ಸಂ), "ಚಾಮರಸನ ಪ್ರಭುಲಿಂಗಲೀಲೆ."

29) ಬಸವರಾಜ. ಡೋಣೂರು, "ಕನ್ನಡ ನಾಟಕ ಮತ್ತು ರಂಗಭೂಮಿ", ನೀಲ ಪರ್ವತ ಪ್ರಕಾಶನ, ಧಾರವಾಡ, 2007.

30) ಬಸವರಾಜ. ಮಲಶೆಟ್ಟಿ, "ಉತ್ತರ ಕರ್ನಾಟಕದ ಬಯಲಾಟಗಳು", ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ, 1983.

31) ಬಾಳಪ್ಪ. ಏಣಗಿ, "ಉತ್ತರ ಕರ್ನಾಟಕದ ರಂಗ ಸಂಗೀತ ವೈಭವ", ಕರ್ನಾಟಕ ರಂಗಭೂಮಿ ಸಹಕಾರ ಸಂಘ, ಬೆಳಗಾವಿ, 2009.

32) ಮರುಳಸಿದ್ಧಪ್ಪ. ಕೆ., "ಆಧುನಿಕ ಕನ್ನಡ ನಾಟಕ", ಅಂಕಿತ ಪುಸ್ತಕ ಬಸವನಗುಡಿ, ಬೆಂಗಳೂರು, 2002.

33) ಮೋನಪ್ಪ. ಗಾಡದ, "ರಂಗದರ್ಶನ", ಗ್ರಾಮೀಣ ಸಾಹಿತ್ಯ ಮಾಲೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, 2009.

34) ಯತಿಸ್ವಾಮಿ ಸಿರಿಗೇರಿ, "ರಂಗ ತರಂಗ", ಅನ್ನಪೂರ್ಣ ಪ್ರಕಾಶನ, ಸಿರಿಗೇರಿ, 2007.

35) ರಂಗನಾಥ. ಎಚ್. ಕೆ., "The Karnataka Theatre", Karnataka University, Dharwad, Research Series 1, 1960.

36) ರಂಗನಾಥ. ಎಚ್. ಕೆ., "ಕರ್ನಾಟಕ ರಂಗಭೂಮಿ", ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, (ಎರಡನೆಯ ಆವೃತ್ತಿ), 2000.

37) ರಂಗನಾಥ. ಎಚ್. ಕೆ., "ವೃತ್ತಿರಂಗದರ್ಶನ", ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

38) ರಾಮಕೃಷ್ಣ ಮರಾಠೆ, "ಉತ್ತರ ಕರ್ನಾಟಕ ವೃತ್ತಿರಂಗಭೂಮಿ", ಸಂಶೋಧನ ಪ್ರಬಂಧ, ಕ. ವಿ.ವಿ. ಧಾರವಾಡ, ಇಳಾ ಪ್ರಕಾಶನ, ಬೆಂಗಳೂರು, 1994.

39) ರಾಮಕೃಷ್ಣ ಮರಾಠೆ, "ಕೊಣ್ಣೂರು ನಾಟಕ ಕಂಪನಿ", ಪ್ರಸಾರಾಂಗ ಕನ್ನಡ ವಿ. ವಿ., ಹಂಪಿ, 1999.

40) ರಾಮಕೃಷ್ಣ ಮರಾಠೆ, "ಬಿ. ಆರ್. ಅರಿಶಿನಗುಡಿ", ಕರ್ನಾಟಕ ನಾಟಕ ಅಕಾಡಮಿ, ಬೆಂಗಳೂರು, 2000.

41) ರಾಮಕೃಷ್ಣ ಮರಾಠೆ, "ರಂಗಭೂಮಿ", ಪರಮಶಂಕರ ಪ್ರಕಾಶನ, ಶಿಗ್ಲಿ ಬೆಂಗಳೂರು, 2003.

42) ರಾಮಕೃಷ್ಣ ಮರಾಠೆ, "ರಂಗಭೂಮಿಯ ಕನ್ನಡ ಸಂವೇದನೆ", ಕನ್ನಡ ಜಾಗೃತಿ ಪುಸ್ತಕ ಮಾಲೆ, 12 ಅಲ್ಲಮಪ್ರಭು, ಜನ ಕಲ್ಯಾಣ ಸಂಸ್ಥೆ, ಸಿದ್ಧ ಸಂಸ್ಥಾನ ಮಠ, ಚಿಂಚಣಿ, 2003.

43) ವಾಣಿಶ್ರೀ. ಎಸ್. ಪಾಟೀಲ್, "ಜಿ. ಎನ್. ಅಂಜಲಿದೇವಿ", ನಾಟಕ ಅಕಾಡೆಮಿ, ಬೆಂಗಳೂರು, 2001.

44) ವಿರುಪಾಕ್ಷ ನಾಯಕ (ಸಂ), "ರಂಗ ತೋರಣ", ವೃತ್ತಿ ಕಲಾವಿದೆಯರ ವಿಶೇಷಾಂಕ, 100ನೆಯ ಸಂಚಿಕೆ, ಮಾಳಮಡ್ಡಿ, ಧಾರವಾಡ, 1993.

45) ವಿಶ್ವನಾಥ ವಂಶಾಕೃತಮಠ ಶೀಲಾಕಾಂತ ಪತ್ತಾರ (ಸಂ), "ಶ್ರೀವಲ್ಲಭ" ಚಾಲುಕ್ಯ ಉತ್ಸವ, 2007.

46) ವೀಣಾ ಕುಲಕರ್ಣಿ, "ರಂಗ ಕೋಗಿಲೆ ಜುಬೇದಾಬಾಯಿ ಸವಣೂರು", ಲೋಹಿಯಾ ಶತಮಾನೋತ್ಸವ ಮಾಲಿಕೆ ಲೋಹಿಯಾ ಪ್ರಕಾಶನ, ಬಳ್ಳಾರಿ, 2009.

47) ವೀರಭದ್ರಪ್ಪ ಕುರಿ, "ಸುಭದ್ರಮ್ಮ ಮನಸೂರು", ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು, 2000.

48) ವಿಜಯಾ, "ನಾನೊಂದು ಕನಸು ಕಂಡೆ", ಮಹಿಳೆ ಮತ್ತು ರಂಗಭೂಮಿ, (ಮಹಿಳಾ ವಿಶೇಷಾಂಕ), 2001.

49) ವೆಂಕಟಗಿರಿ. ದಳವಾಯಿ, "ಕನ್ನಡ ರಂಗಭೂಮಿ ಮತ್ತು ಮಹಿಳೆ", ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು ಸಂಶೋಧನಾ ಪ್ರಬಂಧ, 2003.

50) ವೈಕುಂಠರಾಜು. ಬಿ. ವ್ಹಿ., "ಕನ್ನಡ ರಂಗಭೂಮಿ", ಪ್ರಸಾರಾಂಗ, ಕನ್ನಡ ವಿ. ವಿ., ಹಂಪಿ, 1997.

51) ಶೈಲಜಾ ಹಿರೇಮಠ, "ಪಾತ್ರದವರು", ಪ್ರಸಾರಾಂಗ ಕನ್ನಡ ವಿ. ವಿ. ಹಂಪಿ, 1996.

52) ಶ್ರೀರಾಮ ಇಟ್ಟಣ್ಣವರ, "ಕೌಜಲಗಿ ನಿಂಗವ್ವ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ", ಬೆಂಗಳೂರು, 1996.

53) ಸೀತಾರಾಮಯ್ಯ ಹ. ವೆಂ. (ನಿರೂಪಣೆ), ಗುಡಿಹಳ್ಳಿ ನಾಗರಾಜ (ಪರಿಷ್ಕರಣೆ), "ಅಭಿನಯ ವಿಶಾರದೆ ಮಳವಳ್ಳಿ ಸುಂದರಮ್ಮನವರ ಆತ್ಮಕಥೆ", ನಾಟಕ ಅಕಾಡಮಿ, ಬೆಂಗಳೂರು, 2005.

**ಪೂರಕ ಓದು**

1. ಕೃಷ್ಣರಾಯರು. ಅ. ನ. "ನಟಸಾರ್ವಭೌಮ", ಭಾಗ-1, 2, 3, ಸಾಗರ ಪ್ರಕಾಶನ, ಬೆಂಗಳೂರು, 2009.
2. ದತ್ತಾತ್ರಯ ರಾಮಚಂದ್ರ ಬೇಂದ್ರೆ, "ಸಾಯೋ ಆಟ", ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ 2008.
3. ಬೀಛಿ, "ನನ್ನ ಬಯಾಗ್ರಫಿ" (ಆತ್ಮಕಥೆ) ಸ್ವಪ್ನ ಬುಕ್ ಹೌಸ್, ಬೆಂಗಳೂರು, 2010, (ಹತ್ತನೇ ಮುದ್ರಣ)
4. ವೇಣು. ಬಿ. ಎಲ್. "ಬಣ್ಣದ ಜಿಂಕೆ", ಗೀತಾಂಜಲಿ ಪಬ್ಲಿಕೇಷನ್ಸ್, ಬೆಂಗಳೂರು, 2006.
5. ಸರೋಜ ಇಟ್ಟಣ್ಣವರ, "ನಾಟಕದವಳು."
6. ಸುದರ್ಶನ ದೇಸಾಯಿ, "ಸಾಂಪಿ", ಗಿರೀಶ ಎಂಟರ್ ಪ್ರೈಸಸ್, ಮಂಜುನಾಥ ರೋಡ್, ಬೆಂಗಳೂರು, 2010.

ಪತ್ರಿಕೆಗಳು:

1) ಸುಧಾ ಯುಗಾದಿ ವಿಶೇಷಾಂಕ, 2009.

2) ಪ್ರಜಾವಾಣಿ (ಭೂಮಿಕಾ), 19–9–2009.

3) ವಿಜಯ ಕರ್ನಾಟಕ ಲವಲವಿಕೆ, 27–3–2010.

4) ಪ್ರಜಾವಾಣಿ (ಭೂಮಿಕಾ), 25–12–2010.

5) ಸುಧಾ ವಾರಪತ್ರಿಕೆ, 24–7–2010.

6) ಹೊಸತು ವಿಶೇಷ ಸಂಚಿಕೆ, ಜನೇವರಿ 2011.